# ಪ್ರಸ್ತಾವನೆ.

---

ಮಹರ್ಷಿ ವೇದವ್ಯಾಸ ವಿರಚಿತವಾದ ಕೂರ್ಮಮಹಾಪುರಾಣಗಲಿ ಕನ್ನಡ ಅನುವಾದದ ನಾಲ್ಕನೆಯ ಸಂಚಿಕೆಯನ್ನು ಪ್ರಕಾಶಪಡಿಸಿ ವಾಚಕಮಹಾಶಯರ ಮುಂದಿರಿಸಲು ತುಂಬ ಕುತೂಹಲವುಳ್ಳವನಾಗಿದ್ದೇನೆ. ಗುಣಪಕ್ಷಪಾತಿಗಳಾದ ವಾಚಕರ ಸಾದರಸ್ವೀಕಾರದಿಂದ ನನ್ನ ಈ ಉದ್ಯಮದ ಪರಿಶ್ರಮವು ಸಾರ್ಥಕ ವಾಗುವುದೆಂದು ನಿರೀಕ್ಷಿಸುತ್ತೇನೆ.

ಪ್ರಾಯಶ್ಚಿತ್ತ ವಿಧಾನವನ್ನು ತೋರಿಸುವ ಭಾಗದಿಂದ ಈ ಸಂಚಿಕೆಯು ಪ್ರಾರಂಭವಾಗಿರುವುದು ಶಾಸ್ತ್ರೀಯವಾದ ವಿಧಿ-ನಿಷೇಧಗಳಲ್ಲಿ ಅಧಿಕಾರಿಯಾದ ಮಾನವನು ವಿಶೇಷಜ್ಞಾನಿಯಾದರೂ ಅನೇಕ ಸಂಕಟಗಳಿಂದ ವಿಹಿತಕರ್ಮತ್ಯಾಗ ನಿಷಿದ್ಧಾಚರಣೆಗಳಿಗೆ ಭಾಗಿಯಾಗುವನು. ಹೀಗಿರಲು ಪಾಮರಜನರ ಪಾಡೇನು ? ಅಂತಹ ಪ್ರಸಂಗದಲ್ಲಿ ಆ ಮಾನವನು ಆರ್ಯವರ್ಗದಿಂದ ದೂರವಾಗದಿರಲು ತನ್ನಿಂದ ನಡೆದ ಅಧರ್ಮಕ್ಕೆ ಆ ವ್ಯಕ್ತಿಯು ಅಂಜಿ ತಲೆಬಾಗಿಸಿ ಪಶ್ಚಾತ್ತಾಪ ಪೂರ್ವಕವಾಗಿ ಆಚರಿಸಬೇಕಾಗಿ ವಿಧಿಸಿರುವ ಕರ್ಮಗಳು ಪ್ರಾಯಶ್ಚಿತ್ತರೂಪವಾಗುವುವು. ಅಧರ್ಮಾ ಚರಣೆಯಿಂದ ಕೋಪಗೊಂಡಿರುವ ಜಗದೀಶ್ವರನನ್ನು ಪ್ರಾಯಶ್ಚಿತ್ತಾನುಷ್ಠಾನದಿಂದ ಕ್ಷಮೆಬೇಡಿದಂತಾಗುವುದು. ಆಗ ಸ್ವಾಮಿಯು ಪ್ರಸನ್ನನಾಗಿ ಕಲ್ಯಾಣವನ್ನು ಕೊಡುವನು.

ತರುವಾಯ ಅನೇಕ ಪವಿತ್ರ ತೀರ್ಥ-ಕ್ಷೇತ್ರ-ಆಲಯಗಳು ವರ್ಣಿಸಲ್ಪಟ್ಟಿವೆ. ಇಂತಹ ಪುಣ್ಯಕ್ಷೇತ್ರ ಯಾತ್ರಾವಿಧಾನವು ಅಧರ್ಮವನ್ನು ದೂರಮಾಡುವ ಪ್ರಾಯ ಶ್ಚಿತ್ತರೂಪವೂ, ಪುಣ್ಯವಿಶೇಷವನ್ನು ಆರ್ಜಿಸುವ ಧರ್ಮಾನುಷ್ಠಾನರೂಪವೂ ಮತ್ತು ಚಿತ್ತಕ್ಕೆ ಶಾಂತಿಯನ್ನು ಉಂಟುಮಾಡುವ ದೇವತಾವಿಭೂತಿ ವಿಶೇಷಗಳ ಉಪಾಸ ನೆಯೂ ಆಗಿದೆ.

ಕಥೆಯಲ್ಲಿ ಪ್ರಲಯಾವಸ್ಥೆಯ ಭೇದಗಳು ತೋರಿಸಲ್ಪಟ್ಟಿವೆ. ಹೀಗೆ ಅನೇಕ ಉಪಾದೇಯ ವಿಷಯಗಳಿಂದ ಈ ಸಂಚಿಕೆಯು ಸಮಾಪ್ತಿಹೊಂದಿರುವುದು. ಗಂಭೀರವೂ, ಉದಾತ್ತವೂ ಆದ ಈ ಮಹಾಪುರಾಣದ ಕನ್ನಡ ಅನುವಾದವು ಈ ಸಂಚಿಕೆಯಲ್ಲಿ ಕೊನೆಗಂಡಿದೆ.

ಸಂಪೂರ್ಣ ಅನುವಾದವು ಸಮಾಪ್ತಿಗೊಳ್ಳುವ ಪ್ರಸಂಗದಲ್ಲಿ ಪುರಾಣವಾಙ್ಮಯದ ಧ್ಯೇಯವನ್ನು ಸಂಕ್ಷೇಪವಾಗಿ ನಿರೂಪಿಸಲು ಈಗ ಯತ್ನಿಸುತ್ತೇನೆ. ಮಾನವ ಜಾತಿಯ ನಿರ್ಮಾಣದಲ್ಲಿ ಕಾಯ-ವಾಕ್ಕು-ಮಾನಸಗಳೆಂಬ ತ್ರಿಕರಣಗಳು ಅಮೂಲ್ಯವಾದ ಶ್ರೇಯಃಸಾಧನಗಳಾಗಿವೆ. ಈ ತ್ರಿಕರಣಗಳಲ್ಲಿ ಉತ್ತಮ ಸಂಸ್ಕಾರಗಳು ಹುಟ್ಟುವ ಹಾಗೆಲ್ಲ ಮಾನವನು ಸದ್ಗತಿಯನ್ನು ಹೊಂದುವನು. ತ್ರಿಕರಣಗಳಲ್ಲಿ ಕಾಯ (ದೇಹ) ವು ಇನ್ನೆರಡು ಕರಣಗಳಿಗಿಂತ ಸ್ಥೂಲವಾಗಿದೆ; ವಾಕ್ಕು ಸ್ವಲ್ಪ ಸೂಕ್ಷ್ಮವಾದ ಸಾಧನ; ಮಾನಸವು ಇನ್ನೂ ಸೂಕ್ಷ್ಮತಮಸಾಧನವಾಗಿದೆ. ಹುಟ್ಟು ಮೊದಲುಗೊಂಡು ಬಾಲಕನಿಗೆ ಜನನೀ-ಜನಕ-ಆಚಾರ್ಯ; ವೇದ-ಶಾಸ್ತ್ರ-ಪುರಾಣಗಳು ಉತ್ತಮ ಶಿಕ್ಷಣವನ್ನು ಕೊಟ್ಟು ತ್ರಿಕರಣಶುದ್ಧಿಯನ್ನು ಕೊಡುವ ಸಂಸ್ಕಾರಗಳನ್ನು ಉಂಟುಮಾಡಿ ಮಾನವನನ್ನು ಉತ್ತಮವಾದ ಜೀವವರ್ಗಕ್ಕೆ ಸೇರಿದವನನ್ನಾಗಿ ಮಾಡುತ್ತವೆ. ಶೌಚಾಚಾರಾದಿ ಧರ್ಮಗಳಿಂದ ಕಾಯಶುದ್ಧಿಯಾಗುವುದು. ವೇದಾಭ್ಯಾಸ-ಪುರಾಣಪಠನಾದಿಗಳಿಂದ ಪುಣ್ಯಶ್ಲೋಕನಾದ ಪರಮಾತ್ಮನ ಕೀರ್ತನವು ವಾಕ್‌ಶುದ್ಧಿಯನ್ನು ಕೊಡುವುದು. ಉತ್ತಮವಾದ ಔಷಧವು ಹಳೆಯ ವ್ಯಾಧಿಗಳನ್ನು ಸಮೂಲವಾಗಿ ನಾಶಮಾಡಿದಂತೆ ಉಪಾಸನೆಯು ಕಾಮ-ಕ್ರೋಧ ಮೊದಲಾದ ಅನಾದಿ ದುಷ್ಟವೃತ್ತಿಗಳನ್ನು ಶಮನಮಾಡಿ ಮಾನಸಕ್ಕೆ ಪವಿತ್ರತೆಯನ್ನು ಉಂಟುಮಾಡುವುದು. ಶೌಚಾಚಾರಾದಿ ಉಪಾಸನಾಂತ ಸೋಪಾನಗಳು ಅನೇಕ ದೃಷ್ಟಾಂತಗಳಿಂದ ಪುರಾಣಗಳಲ್ಲಿ ಉಪದೇಶಿಸಲ್ಪಟ್ಟಿವೆ. ಇಂತಹ ತ್ರಿಕರಣಶುದ್ಧಿಯು ಕೆಲವು ಮಾನವ ವ್ಯಕ್ತಿಗಳಲ್ಲಿ ಬೀಜಸಂಸ್ಕಾರದಿಂದ ಸಹಜವಾಗಿ ಸೂಕ್ಷ್ಮರೂಪವಾಗಿರುತ್ತದೆ. ಮುಂದೆ ಅದಕ್ಕೆ ಅನುಗುಣವಾದ ಕರ್ಮಾಭ್ಯಾಸದಿಂದ ಅಂಕುರಿಸಿ ಬೆಳೆದು ವಿಸ್ತಾರವಾಗಿ ವ್ಯಕ್ತವಾಗಿ ಕಾಣಿಸಿಕೊಳ್ಳುತ್ತದೆ. ಇದರ ಉತ್ತಮಾಧಮ ತಾರತಮ್ಯದಿಂದ ವ್ಯಕ್ತಿಯ ಗೌರವಕ್ಕೆ ತಾರತಮ್ಯವಿರುವುದು. ಆದರೆ ಕಾಲಗತಿಪರ್ಯಾಯದಿಂದ ಪ್ರತಿಯೊಂದು ಉತ್ತಮ ವ್ಯಕ್ತಿಯು ಮಧ್ಯಮವೂ, ಮಧ್ಯಮವ್ಯಕ್ತಿಯು

ಅಧಮವೂ ಆಗುತ್ತ ಬರುವುದು. ಅಧಮವು ಅಧಮಾಧಮವಾಗುವುದೇ ಹೊರತು ಪರ್ಯಾಯದಿಂದ ಯಾವಾಗಲೂ ಉತ್ತಮವಾಗಲಾರದು. ಅದನ್ನು ಉತ್ತಮ ಗೊಳಿಸುವುದು ಚೇತನಪ್ರಯತ್ನಕ್ಕೆ ಸಾಧ್ಯ. ಅಂತಹ ಪ್ರಯತ್ನಗಳಲ್ಲಿ ವೇದ-ಶಾಸ್ತ್ರ ವಿಹಿತವಾದ ಸನ್ಮಾರ್ಗಾವಲಂಬನೆಯೆ ಮುಖ್ಯಸಾಧನವೆಂಬುದು ಆಸ್ತಿಕರ ಸಿದ್ಧಾಂತ ವಾಗಿದೆ. ಯೋಗಾಸನ-ವ್ಯಾಯಾಮಗಳಂತೆ ಸಂತತವಾಗಿ ಆಚರಿಸಿದ ಈ ಸನ್ಮಾರ್ಗ ಪದ್ಧತಿಯು ಶಾಂತಿ ಸಾಧನವಾಗುವುದೇ ಹೊರತು ಒಂದೆರಡು ಸಲದ ಆವೃತ್ತಿಯು ಫಲಕಾರಿಯಾಗುವುದಿಲ್ಲ.

ಒಬ್ಬ ಮಾನವನು ಪ್ರಾಯೋಗಿಕ ಪರೀಕ್ಷಾರ್ಥವಾಗಿ ವೇದ-ಶಾಸ್ತ್ರವಿಹಿತ ಮಾರ್ಗದಲ್ಲಿ ಮಾದರಿಯಾಗಿ ನಡೆಯುವನೆಂದು ಉದಾಹರಣೆಗಾಗಿ ಭಾವಿಸೋಣ ; ಅವನು ತನ್ನ ಜೀವನಕಾಲದ ಪ್ರತಿಯೊಂದು ಭಾಗವನ್ನು ವಿಹಿತಕರ್ತವ್ಯಗಳ ಆಸಕ್ತಿ ಯಿಂದ ಕಳೆಯುವನು. ಹಗಲಿನ ನಾಲ್ಕು ಯಾಮಗಳು ಪ್ರಾತರಾಹ್ನಿಕ, ವೇದ-ಶಾಸ್ತ್ರಾರ್ಥಚಿಂತನ, ಮಾಧ್ಯಾಹ್ನಿಕ, ಪಂಚಮಹಾಯಜ್ಞಾನುಷ್ಠಾನ, ಪುರಾಣಾರ್ಥ ವಿಮರ್ಶ ಮತ್ತು ಜೀವನೋಪಾಯಾವಲಂಬನಗಳಿಂದ ಕಳೆಯುತ್ತವೆ. ಜೀವಿಕಾ ವೃತ್ತಿಗಳಲ್ಲಿ ಕೂಡ ವಿಧಿ-ನಿಷೇಧಗಳು ಆ ಮಾನವನ ಬೆನ್ನು ಹತ್ತಿಕೊಂಡಿವೆ. ಹೀಗಿರಲು ಕಾಮ-ಕ್ರೋಧಾದಿ ದುಷ್ಪ್ರವೃತ್ತಿಗಳಿಗೆ ಪರತಂತ್ರನಾಗಲು ಅವನಿಗೆ ಅವಕಾಶವೆಲ್ಲಿ ಯದು ? ಕಾಮ-ಕ್ರೋಧಾದಿಗಳಿಂದ ಬಾಹ್ಯನಾದ ಆಸ್ತಿಕನಿಗೆ ದೇಶದ್ರೋಹ, ರಾಜ ದ್ರೋಹ, ಸಮಾಜದ್ರೋಹ ಮುಂತಾದ ಭಾವನೆಗಳು ಹುಟ್ಟಲು ಕಾರಣವೆ ಇಲ್ಲ. ಹೀಗೆಯೆ ರಾತ್ರಿಯ ಆದಿ-ಅಂತಯಾಮಗಳಲ್ಲಿ ಪ್ರಬೋಧದಿಂದ ಇದ್ದು ಸತ್ಕರ್ಮಾ ಚರಣೆಯೂ ಮಧ್ಯಯಾಮಗಳಲ್ಲಿ ನಿದ್ರಾಸುಖಾನುಭವವೂ ನಿರ್ದೇಶಿಸಲ್ಪಟ್ಟಿವೆ. ಹೀಗೆ ಧರ್ಮಶಾಸ್ತ್ರಗಳು ಪ್ರತಿಕ್ಷಣದಲ್ಲಿಯೂ ಧರ್ಮಾರ್ಜನೆಯನ್ನು ಸಾರುತ್ತಿವೆ. ತ್ರೈವರ್ಣಿಕರು, ವಿಶೇಷವಾಗಿ ಕ್ಷತ್ರಿಯರು ಕಾಲಭೇದಾನುಗುಣವಾದ ಇಂತಹ ವೃತ್ತಿಗಳನ್ನು, ಅವಲಂಬಿಸಬೇಕೆಂಬುದನ್ನು ಕೇವಲ ಅರ್ಥ-ಕಾಮ ಪುರುಷಾರ್ಥ ಸಾಧನೋಪದೇಶಕವಾದ ನೀತಿಶಾಸ್ತ್ರಗಳು ಸಮ್ಮತಿಸುತ್ತವೆ. ಜೀವನಕಾಲದ ಅಧಿಕ ಭಾಗವನ್ನು ಹೀಗೆ ಸದ್ವೃತ್ತಿಗಳಿಂದ ಕಳೆದು ತ್ರಿಕರಣಶುದ್ಧಿಯನ್ನು ಹೊಂದಿದ ಮಾನವವ್ಯಕ್ತಿಗೆ ವಿವಿಧ ಸಿದ್ಧಿಗಳು ಉಂಟಾಗುವುವೆಂಬುದು ಶಾಸ್ತ್ರದ ಉದ್ಘೋಷ ವಾಗಿದೆ. ಇದನ್ನು ದೀರ್ಘಕಾಲದವರೆಗಿನ ಆದರ-ನೈರಂತರ್ಯಗಳಿಂದ ಕೂಡಿದ

ಪ್ರಾಯೋಗಿಕ ಪರೀಕ್ಷೆಯಿಂದ ಮನದಟ್ಟಾಗಿ ಅರಿಯಬಹುದು. ಇಂತಹ ಮಾದರಿ ವ್ಯಕ್ತಿಯು ಸಾತ್ತ್ವಿಕ, ಶಾಂತ, ಆರ್ಯ ಮುಂತಾದ ಗಣ್ಯನಾಮಾಂಕನಗಳಿಂದ ಕರೆಯಲ್ಪಡುವನು. ಈ ಮಾದರಿಯು ಶ್ಲಾಘ್ಯವಾದುದೆಂದೂ ಪುರುಷಾರ್ಥಗಳನ್ನು ಸಾಧಿಸಿ ಜನ್ಮ ಸಾಫಲ್ಯವನ್ನು ಕೊಡುವುದೆಂದೂ ಆದರಣೀಯವಾಗಿದೆ.

ಬಾಹ್ಯದೃಷ್ಟಿಮಾತ್ರದಿಂದಾಗಲಿ, ಅಲ್ಲಲ್ಲಿ ಸಿದ್ಧಿಸಿದ ವ್ಯಕ್ತಿ ಮಹಿಮೆಯಲ್ಲಿ ಕಾಕತಾಳೀಯ ಭಾವನೆಯಿಂದಾಗಲಿ, ನಾಸ್ತಿಕ್ಯವಾಸನೆಯಿಂದಾಗಲಿ ಅಂತಹ ವ್ಯಕ್ತಿಯನ್ನು ಅವಹೇಳನಮಾಡುವುದು ಯುಕ್ತವಲ್ಲ. ಇದರಂತೆ ನಿಯಮದಿಂದ ನಡೆಯುವ ವರ್ತನೆಯೆ ತಪಸ್ಸು, ನಿಯಮವಂತನೆ ತಪಸ್ವಿಯು, ಮಾನವನು ಇಂತಹ ತಪಾಚರಣೆಯಿಂದ ತ್ರಿಕರಣ ಸಂಸ್ಕೃತನೂ ಅದರಿಂದ ಶ್ರೇಯೋವಂತನೂ ಆಗುವನು. ಪುರುಷನನ್ನು ಹೀಗೆ ಪುರುಷಾರ್ಥಭಾಗಿಯನ್ನಾಗಿ ಮಾಡುವುದು ಪುರಾಣವಾಙ್ಮಯದ ಉದ್ದೇಶವಾಗಿದೆ.

ಆಳುವ ಮಹಾಸ್ವಾಮಿಯವರು **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,** ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರ ಆಜ್ಞೆಯಂತೆ ಸಂಸ್ಕೃತದಲ್ಲಿದ್ದ ಈ ಗ್ರಂಥವನ್ನು ಕನ್ನಡಿಗರ ತಿಳಿವಳಿಕೆಗಾಗಿ ಕನ್ನಡಕ್ಕೆ ಪರಿವರ್ತನಮಾಡಿರುತ್ತೇನೆ. ಈ ಗ್ರಂಥವು ಪ್ರಕಾಶಕ್ಕೆ ಬಂದು ಸಜ್ಜನರ ಸೇವೆಮಾಡಲು ಅವಕಾಶಮಾಡಿಕೊಟ್ಟ ಮಹನೀಯರಿಗೆ ತುಂಬಾ ಕೃತಜ್ಞನಾಗಿದ್ದೇನೆ.

ಅನುವಾದಕ,

**ಪಾಟಣಕರ ಚಂದ್ರಶೇಖರಭಟ್ಟ,**

ಆಸ್ಥಾನ ವಿದ್ವಾನ್.

ಮೈಸೂರು,

ತಾ॥ ೧-೧೦-೪೭.

# ವಿಷಯಾನುಕ್ರಮಣಿಕೆ.

॥ ಶ್ರೀ ॥

# ಕೂರ್ಮಪುರಾಣಂ



## ತ್ರ್ಯಶೀತಿತಮೋಽಧ್ಯಾಯಃ.

ವ್ಯಾಸ ಉವಾಚ :—

ಅತಃ ಪರಂ ಪ್ರವಕ್ಷ್ಯಾಮಿ ಪ್ರಾಯಶ್ಚಿತ್ತವಿಧಿಂ ಶುಭಮ್ ।
ಹಿತಾಯ ಸರ್ವವಿಪ್ರಾಣಾಂ ದೋಷಾಣಾಮಪನುತ್ತಯೇ ॥ ೧ ॥

ಅಕೃತ್ವಾ ವಿಹಿತಂ ಕರ್ಮ ಕೃತ್ವಾ ನಿಂದಿತಮೇವ ಚ ।
ದೋಷಮಾಪ್ನೋತಿ ಪುರುಷಃ ಪ್ರಾಯಶ್ಚಿತ್ತಂ ವಿಶೋಧನಮ್ ॥ ೨ ॥

---

## ಎಂಭತ್ತಮೂರನೆಯ ಅಧ್ಯಾಯವು

೧. ವ್ಯಾಸಮುನಿಯು ಇಂತೆಂದನು.:— ಇನ್ನು ಮುಂದಿನ ಕಥಾಭಾಗದಲ್ಲಿ ಪ್ರಾಣಿಗಳಿಗೆ ಮಂಗಳಕರವೂ, ಸಮಸ್ತ ವಿಪ್ರರಿಗೆ ಹಿತಕರವೂ ಆದ ಪ್ರಾಯಶ್ಚಿತ್ತ ವಿಧಾನವನ್ನು ತಾವು ಆಚರಿಸಿದ ಪಾಪಗಳನ್ನು ಕಳೆದುಕೊಳ್ಳಲು ಅನುಕೂಲಿಸು ವಂತೆ ಹೇಳುತ್ತೇನೆ.

೨. ಮಾನವನು ತನಗೆ ಕರ್ತವ್ಯವಾಗಿ ಶಾಸ್ತ್ರಗಳಿಂದ ವಿಧಿಸಲ್ಪಟ್ಟಿರುವ ಕರ್ಮವನ್ನು ಮಾಡದಿರುವುದರಿಂದಲೂ, ಹಾಗು ಶಾಸ್ತ್ರಗಳಿಂದ ನಿಷೇಧಿಸಲ್ಪಟ್ಟಿರುವ ಕರ್ಮವನ್ನು ಮಾಡುವುದರಿಂದಲೂ, ಪಾಪದೋಷವನ್ನು ಹೊಂದುತ್ತಾನೆ. ಆಗ ಈ ಪ್ರಾಯಶ್ಚಿತ್ತವು ದೋಷದಿಂದ ಶುದ್ಧಿಮಾಡುವುದು.

ಪ್ರಾಯಶ್ಚಿತ್ತಮಕೃತ್ವಾ ತು ನ ತಿಷ್ಠೇದ್ಬ್ರಾಹ್ಮಣಃ ಕ್ವಚಿತ್ ।
ಯದ್ಬ್ರೂಯುರ್ಬ್ರಾಹ್ಮಣಾಃ ಶಾಂತಾ ವಿದ್ವಾಂಸಸ್ತತ್ಸಮಾಚರೇತ್॥ ೩॥

ವೇದಾರ್ಥವಿತ್ತಮಃ ಶಾಂತೋ ಧರ್ಮಕಾಮೋಽಗ್ನಿಮಾನ್ ದ್ವಿಜಃ ।
ಸ ಏವ ಸ್ಯಾತ್ ಪರೋ ಧರ್ಮೋ ಯಮೇಕೋಽಪಿ ವ್ಯವಸ್ಯತಿ ॥ ೪ ॥

ಅನಾಹಿತಾಗ್ನಯೋ ವಿಪ್ರಾಸ್ತ್ರಯೋ ವೇದಾರ್ಥಪಾರಗಾಃ ।
ಯದ್ಬ್ರೂಯುರ್ಧರ್ಮಕಾಮಾಸ್ತೇ ತಜ್ಜ್ಞೇಯಂ ಧರ್ಮಸಾಧನಮ್

ಅನೇಕಧರ್ಮಶಾಸ್ತ್ರಜ್ಞಾ ಊಹಾಪೋಹವಿಶಾರದಾಃ ।
ವೇದಾಧ್ಯಯನಸಂಪನ್ನಾಃ ಸಪ್ತೈತೇ ಪರಿಕೀರ್ತಿತಾಃ ॥ ೬ ॥

---

೩. ಪಾಪಭಾಗಿಯಾದ ಬ್ರಾಹ್ಮಣನು ಯಾವಾಗಲೂ ಪಾಪಶೋಧಕವಾದ ಪ್ರಾಯಶ್ಚಿತ್ತವನ್ನು ಮಾಡದೆ ಇರಕೂಡದು. ಪಾಪನಿವೃತ್ತಿಗೆ ಜ್ಞಾನಿಗಳೂ, ಶಾಂತರೂ ಆದ ವಿಪ್ರರು ಯಾವ ಕರ್ತವ್ಯವನ್ನು ಉಪದೇಶಿಸುವರೋ, ಅಂತಹ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

೪. ವೇದಾರ್ಥಗಳನ್ನು ಸಾಧುವಾಗಿ ಅರಿತವನೂ, ಶಾಂತಿಯುಳ್ಳವನೂ, ಧರ್ಮಾನುಷ್ಠಾನದ ಅಭಿಲಾಷೆಯುಳ್ಳವನೂ, ಮತ್ತು ಆಹಿತಾಗ್ನಿಯೂ ಆದ ವಿಪ್ರನು ಒಬ್ಬನಾದರೂ ಯಾವ ಪ್ರಾಯಶ್ಚಿತ್ತವನ್ನು ಕರ್ತವ್ಯವೆಂದು ಉಪದೇಶಿಸುವನೋ. ಅದು ಶ್ರೇಷ್ಠವಾದ ಧರ್ಮರೂಪವಾಗುವುದು.

೫. ಹೀಗೆ ಅಗ್ನಿಯ ಆಧಾನಮಾಡದಿರುವುದರಿಂದ ಆಹಿತಾಗ್ನಿಯಲ್ಲದವರಾದರೂ, ವೇದಾರ್ಥಗಳಲ್ಲಿ ಪಾರಂಗತರಾದ ಮೂರುಮಂದಿ ವಿಪ್ರರು ಧರ್ಮಕಾಮರಾಗಿ ಹೇಳುವ ಪ್ರಾಯಶ್ಚಿತ್ತವು ಪಾಪಭಂಜಕವೂ ಧರ್ಮಾರ್ಜನೆಗೆ ಸಾಧಕವೂ ಆಗುವುದು.

೬. ವೇಧಾಧ್ಯಯನದಿಂದ ಸಂಪನ್ನರಾಗಿ ಅನೇಕ ಧರ್ಮಶಾಸ್ತ್ರಗಳನ್ನು ಅರಿತು, ಊಹ ಅಪೋಹ (ತಪ್ಪುಮಾರ್ಗವನ್ನು ಬಿಟ್ಟು ತತ್ತ್ವವನ್ನು ಕಂಡುಹಿಡಿಯುವ ವಿಚಾರಣೆ) ಗಳಲ್ಲಿ ನಿಪುಣರಾದ ಏಳುಮಂದಿಯು ಪ್ರಾಯಶ್ಚಿತ್ತವನ್ನು ವಿಧಿಸಲು ಅರ್ಹರಾಗುವರು.

ಮೀಮಾಂಸಾಜ್ಞಾನತತ್ತ್ವಜ್ಞಾ ವೇದಾಂತಕುಶಲಾ ದ್ವಿಜಾಃ ।
ಏಕವಿಂಶತಿ ವಿಖ್ಯಾತಾಃ ಪ್ರಾಯಶ್ಚಿತ್ತಂ ವದಂತಿ ವೈ ॥ ೭ ॥

ಬ್ರಹ್ಮಹಾ ಮದ್ಯಪಃ ಸ್ತೇನೋ ಗುರುತಲ್ಪಗ ಏವ ಚ ।
ಮಹಾಪಾತಕಿನಸ್ತ್ವೇತೇ ಯಶ್ಚೈತೈಃ ಸಹ ಸಂವಿಶೇತ್ ॥ ೮ ॥

ಸಂವತ್ಸರಂ ತು ಪತಿತೈಃ ಸಂಸರ್ಗಂ ಕುರುತೇ ತು ಯಃ ।
ಯಾನಶಯ್ಯಾಸನೈರ್ನಿತ್ಯಂ ಜಾನನ್ ವೈ ಪತಿತೋ ಭವೇತ್ ॥ ೯ ॥

ಯಾಜನಂ ಯೋನಿಸಂಬಂಧಂ ತಥೈವಾಧ್ಯಾಪನಂ ದ್ವಿಜಃ ।
ಸದ್ಯಃ ಕೃತ್ವಾ ಪತತ್ಯೇವ ಸಹಭೋಜನಮೇವ ಚ ॥ ೧೦ ॥

---

೭. ಮತ್ತು ಮೀಮಾಂಸಾಶಾಸ್ತ್ರ ಸಿದ್ಧಾಂತಗಳನ್ನು ತಿಳಿದವರೂ, ಮತ್ತು ವೇದಾಂತಶಾಸ್ತ್ರ ನಿಷ್ಣಾತರೂ ಆದ ದ್ವಿಜರು ಇಪ್ಪತ್ತೊಂದು ಮಂದಿಯು ಸೇರಿಮಾಡಿದ ನಿರ್ಧಾರಣೆಯಿಂದ ಪ್ರಾಯಃಶ್ಚಿತ್ತವನ್ನು ವಿಧಿಸುವರು.

೮. ಬ್ರಹ್ಮಹತ್ಯೆಯನ್ನು ಮಾಡಿದವನೂ, ಮದ್ಯವನ್ನು ಪಾನಮಾಡಿದವನೂ, ಕಳ್ಳತನವನ್ನು ನಡೆಸಿದವನೂ, ಮತ್ತು ಗುರು ಪತ್ನಿಯ ಸಂಗಮಾಡಿದವನೂ ಮಹಾಪಾತಕಿಗಳಾಗುವರು. ಇವರೊಡನೆ ವ್ಯವಹಾರ ಮಾಡಿದವನೂ, ಮಹಾಪಾತಕಿಯಾಗುವನು.

೯. ಯಾವ ಮಾನವನು ಒಬ್ಬನನ್ನು ಮಹಾಪಾತಕಿಯೆಂದು ಅರಿತರೂ, ವಾಹನ ಶಯನ ಆಸನಗಳಲ್ಲಿ ಆ ಪತಿತನೊಡನೆ ಯಾವಾಗಲೂ ಒಂದುವರ್ಷಕಾಲ ಸಂಗಮಾಡುವನೋ, ಅವನು ಪತಿತನಾಗುವನು.

೧೦. ಅಂತಹ ಪತಿತರೊಡನೆ ಪುರೋಹಿತನಾಗಿ ಯಾಗಮಾಡಿಸುವುದು, ಕನ್ಯೆಯ ಸಂಬಂಧಮಾಡುವುದು, ವೇದಾಧ್ಯಯನವನ್ನು ಮಾಡಿಸುವುದು, ಅಥವಾ ಸಹಭೋಜನ ಇವುಗಳನ್ನು ಮಾಡಿದರೆ ತತ್‌ಕ್ಷಣದಲ್ಲಿಯೇ ಪತಿತನಾಗುತ್ತಾನೆ.

ಅವಿಜ್ಞಾಯಾಥ ಯೋ ಮೋಹಾತ್ ಕುರ್ಯಾದಧ್ಯಾಪನಂ ದ್ವಿಜಃ ।
ಸಂವತ್ಸರೇಣ ಪತತಿ ಸಹಾಧ್ಯಯನಮೇವ ಚ ॥ ೧೧ ॥

ಬ್ರಹ್ಮಹಾ ದ್ವಾದಶಾಬ್ದಾನಿ ಕುಟಿಂ ಕೃತ್ವಾ ವನೇ ವಸೇತ್ ।
ಭೈಕ್ಷಮಾತ್ಮವಿಶುದ್ಧ್ಯರ್ಥೇ ಕೃತ್ವಾ ಶವಶಿರೋಧ್ವಜಮ್ ॥ ೧೨ ॥

ಬ್ರಾಹ್ಮಣಾವಸಥಾನ್ ಸರ್ವಾನ್ ದೇವಾಗಾರಾಣಿ ವರ್ಜಯೇತ್ ।
ವಿನಿಂದನ್ ಸ್ವಯಮಾತ್ಮಾನಂ ಬ್ರಾಹ್ಮಣಂ ತಂ ಚ ಸಂಸ್ಮರನ್ ॥ ೧೩ ॥

ಅಸಂಕಲ್ಪಿತಯೋಗ್ಯಾನಿ ಸಪ್ತಾಗಾರಾಣಿ ಸಂವಿಶೇತ್ ।
ವಿಧೂಮೇ ಶನಕೈರ್ನಿತ್ಯಂ ವ್ಯಂಗಾರೇ ಭುಕ್ತವಜ್ಜನೇ ॥ ೧೪ ॥

---

೧೧. ಯಾವ ವಿಪ್ರನು ಶಾಸ್ತ್ರದಲ್ಲಿರುವ ವಿಧಿ-ನಿಷೇಧಗಳನ್ನು ಅರಿಯದೆ ಮೋಹದಿಂದ ಪತಿತನಿಗೆ ಅಧ್ಯಯನ ಮಾಡಿಸುವನೋ, ಮತ್ತು ಪತಿತನ ಸಂಗಡ ಅಧ್ಯಯನ ಮಾಡುವನೋ, ಅಂತಹ ಮಾನವನು ಒಂದು ಸಂವತ್ಸರದೊಳಗೆ ಪತಿತನಾಗುತ್ತಾನೆ.

೧೨. ಮಹಾಪಾತಕಿಗಳಲ್ಲಿ ಬ್ರಹ್ಮಹತ್ಯೆಯನ್ನು ಮಾಡಿದವನು ಹನ್ನೆರಡು ವರ್ಷಗಳವರೆಗೆ ಅರಣ್ಯದಲ್ಲಿ ಒಂದು ಪರ್ಣಶಾಲೆಯನ್ನು ಮಾಡಿಕೊಂಡು ವಾಸ ಮಾಡಬೇಕು. ಮತ್ತು ಶವದ ಶಿರಸ್ಸಿನ ಚಿಹ್ನವುಳ್ಳ ಧ್ವಜದಿಂದ ಅಂಕಿತನಾಗಿ ಭಿಕ್ಷಾನ್ನವನ್ನು ತಂದು ಜೀವಿಸಬೇಕು.

೧೩. ಹೀಗೆ ಭಿಕ್ಷಾಟನೆಗೆ ಹೋಗುವಾಗ ಸಮಸ್ತ ಬ್ರಾಹ್ಮಣರ ಮನೆಗಳನ್ನೂ ದೇವಾಲಯಗಳನ್ನೂ ಬಿಟ್ಟು ಬೇರೆ ಮನೆಗಳಲ್ಲಿ ಭಿಕ್ಷೆಯೆತ್ತಬೇಕು. ಮತ್ತು ಆ ಸಮಯದಲ್ಲಿ ತಾನು ವಧಿಸಿದ ವಿಪ್ರನನ್ನು ಸ್ಮರಿಸುತ್ತ, ಅವನನ್ನು ಸಂಹರಿಸಿದುದಕ್ಕಾಗಿ ತನ್ನನ್ನು ನಿಂದಿಸಿಕೊಳ್ಳುತ್ತಿರಬೇಕು.

೧೪. ಮತ್ತು ಭಿಕ್ಷೆಗೆ ಹೋಗುವ ಮನೆಗಳನ್ನು ಮೊದಲು ಸಂಕಲ್ಪಮಾಡಿಕೊಳ್ಳದೆ ಯಾದೃಚ್ಛಿಕವಾಗಿ ಏಳು ಯೋಗ್ಯವಾದ ಮನೆಗಳಲ್ಲಿ ಭಿಕ್ಷೆಬೇಡಬೇಕು. ಮನೆಯಲ್ಲಿ ವಾಸವಿರುವ ಜನರ ಭೋಜನವು ಮುಗಿದಮೇಲೆಯೂ, ಧೂಮ ಅಗ್ನಿಗಳು ಶಾಂತವಾದ ಸಮಯದಲ್ಲಿಯೂ, ಭಿಕ್ಷೆಯನ್ನು ಬೇಡಬೇಕು.

ಏಕಕಾಲಂ ಚರೇದ್ಭೈಕ್ಷಂ ದೋಷಂ ವಿಖ್ಯಾಪಯನ್ನೃಣಾಮ್ ।
ವನ್ಯಮೂಲಫಲೈರ್ವಾಪಿ ವರ್ತಯೇದ್ವೈ ಸಮಾಶ್ರಿತಃ ॥ ೧೫ ॥

ಕಪಾಲಪಾಣಿಃ ಖಟ್ವಾಂಗೀ ಬ್ರಹ್ಮಚರ್ಯಪರಾಯಣಃ ।
ಪೂರ್ಣೇ ತು ದ್ವಾದಶೇ ವರ್ಷೇ ಬ್ರಹ್ಮಹತ್ಯಾಂ ವ್ಯಪೋಹತಿ ॥ ೧೬ ॥

ಅಕಾಮತಃ ಕೃತೇ ಪಾಪೇ ಪ್ರಾಯಶ್ಚಿತ್ತಮಿದಂ ಶುಭಮ್ ।
ಕಾಮತೋ ಮರಣಾಚ್ಛುದ್ಧಿರ್ಜ್ಞೇಯಾ ನಾನ್ಯೇನ ಕೇನ ಚಿತ್ ॥ ೧೭ ॥

ಕುರ್ಯಾದನಶನಂ ವಾಥ ಭೃಗೋಃ ಪತನಮೇವ ವಾ ।
ಜ್ವಲಂತಂ ವಾ ವಿಶೇದಗ್ನಿಂ ಜಲಂ ವಾ ಪ್ರವಿಶೇತ್ ಸ್ವಯಮ್ ॥ ೧೮ ॥

---

೧೫. ತಾನು ಮಾಡಿರುವ ಬ್ರಹ್ಮಹತ್ಯಾ ಮಹಾಪಾತಕವನ್ನು ಮಾನವ ಸಮಾಜದಲ್ಲಿ ಪ್ರಸಿದ್ಧಿಗೊಳಿಸುತ್ತ ಒಂದು ದಿನಕ್ಕೆ ಒಂದುಸಲ ಮಾತ್ರ ಭಿಕ್ಷೆಯನ್ನು ತರಬೇಕು. ಅಥವಾ ಕಾಡಿನಲ್ಲಿ ಹುಟ್ಟಿ ಬೆಳೆದ ಹಣ್ಣು, ಗೆಡ್ಡೆ ಗೆಣಸುಗಳ ಆಹಾರದಿಂದಲಾದರೂ ಜೀವಿಸಬಹುದು.

೧೬. ಹಸ್ತದಲ್ಲಿ ಶಿರಃಕಪಾಲವನ್ನು ಧರಿಸಿದವನೂ, ಖಟ್ವಾಂಗಧಾರಿಯೂ, ಮತ್ತು ಬ್ರಹ್ಮಚರ್ಯವ್ರತದಲ್ಲಿ ಆಸಕ್ತಿಯುಳ್ಳವನೂ ಆಗಿ ವಾಸಮಾಡಬೇಕು. ಹೀಗೆ ಹನ್ನೆರಡು ವರ್ಷಗಳು ಕಳೆದ ತರುವಾಯ ತಾನು ಮಾಡಿದ ಬ್ರಹ್ಮಹತ್ಯಾದೋಷವು ಕಳೆದುಹೋಗುವುದು.

೧೭. ತಾನು ಇಷ್ಟಪಡದೆ ಇನ್ನಾವುದಾದರೊಂದು ಕಾರಣದಿಂದ ಆಚರಿಸಿರುವ ಮಹಾಪಾತಕನಿವೃತ್ತಿಗೆ ಮಂಗಳಕರವಾದ ಈ ಪ್ರಾಯಶ್ಚಿತ್ತವು ವಿಧಿಸಲ್ಪಟ್ಟಿದೆ. ತಾನು ಇಷ್ಟಪಟ್ಟು ಮಾಡಿರುವ ಮಹಾಪಾಪಕ್ಕೆ ತಾನು ಸಾಯುವುದರಿಂದಲೇ ಶುದ್ಧಿಯು ದೊರೆಯುವುದೆಂದು ತಿಳಿಯಬೇಕು. ಮತ್ತಾವುದರಿಂದಲೂ ಶುದಿಯಾಗಲಾರದು.

೧೮. ಅಂತಹ ಪಾತಕಿಯು ಮರಣಪ್ರಾಯಶ್ಚಿತ್ತವನ್ನು ಆಚರಿಸಲು ಉಪವಾಸವ್ರತವನ್ನು ಆಚರಿಸಬಹುದು. ಅಥವಾ ಎತ್ತರವಾದ ಪರ್ವತದ ತಪ್ಪಲಿನಿಂದ್ದ ಬಿದ್ದು ಪ್ರಾಣತ್ಯಾಗಮಾಡಬಹುದು. ಅಥವಾ ಜ್ವಲಿಸುವ ಅಗ್ನಿ, ಆಳವಾದ ಜಲರಾಶಿಯನ್ನು ಪ್ರವೇಶಿಸಿ ಪ್ರಾಣತ್ಯಾಗಮಾಡಿಕೊಳ್ಳಬೇಕು.

ಬ್ರಾಹ್ಮಣಾರ್ಥೇ ಗವಾರ್ಥೇ ವಾ ಸಮ್ಯಕ್ ಪ್ರಾಣಾನ್ ಪರಿತ್ಯಜೇತ್ ।
ಬ್ರಹ್ಮಹತ್ಯಾಪನೋದಾರ್ಥಮಂತರಾ ವಾ ಮೃತಸ್ಯ ತು ॥ ೧೯ ॥

ದೀರ್ಘಾಮಯಾವಿನಂ ವಿಪ್ರಂ ಕೃತ್ವಾನಾಮಯಮೇವ ವಾ ।
ದತ್ವಾ ಚಾನ್ನಂ ಸುವಿದುಷೇ ಬ್ರಹ್ಮಹತ್ಯಾ ವ್ಯಪೋಹತಿ ॥ ೨೦ ॥

ಅಶ್ವಮೇಧಾವಭೃಥಕೇ ಸ್ನಾತ್ವಾ ವೈ ಶುಧ್ಯತೇ ದ್ವಿಜಃ ।
ಸರ್ವಸ್ವಂ ವಾ ವೇದವಿದೇ ಬ್ರಾಹ್ಮಣಾಯ ಪ್ರದಾಯ ಚ ॥ ೨೧ ॥

ಸರಸ್ವತ್ಯಾಸ್ತ್ವರುಣಯಾ ಸಂಗಮೇ ಲೋಕವಿಶ್ರುತೇ ।
ಶುಧ್ಯೇ ತ್ರಿಷವಣಸ್ನಾನಾತ್ತ್ರಿರಾತ್ರೋಪೋಷಿತೋ ದ್ವಿಜಃ ॥ ೨೨ ॥

---

೧೯. ಅಥವಾ ಒಬ್ಬ ಬ್ರಾಹ್ಮಣ, ಒಂದು ಹಸು ಇವುಗಳಿಗೋಸ್ಕರ ಪ್ರಾಣವನ್ನು ಬಿಡಬೇಕು. ಹೀಗೆ ಬ್ರಹ್ಮಹತ್ಯಾದೋಷದ ನಿವೃತ್ತಿಗೆ ತಾನು ಮಧ್ಯದಲ್ಲಿ ಮರಣಹೊಂದಿ ಶುದ್ಧನಾಗಬೇಕು.

೨೦. ಮತ್ತು ದೀರ್ಘರೋಗದಲ್ಲಿ ಬಿದ್ದಿರುವವರನ್ನು ಉಚಿತಸೇವೆಯಿಂದ ರೋಗಮುಕ್ತನನ್ನಾಗಿ ಮಾಡಿದರಾಗಲಿ, ಜ್ಞಾನಿಗೆ ಅನ್ನದಾನ ಮಾಡುವುದರಿಂದಾಗಲಿ, ತಾನು ಮಾಡಿದ ಬ್ರಹ್ಮಹತ್ಯೆಯು ಕಳೆದುಹೋಗುವುದು.

೨೧. ಮತ್ತು ಅಂತಹ ಮಹಾಪಾಪಿಯಾದ ದ್ವಿಜನು ಅಶ್ವಮೇಧಯಾಗಾಂಗವಾದ ಅವಭೃಥಸ್ನಾನವೆಂಬ ಪುಣ್ಯದಿಂದ ಶುದ್ಧನಾಗುತ್ತಾನೆ. ಹಾಗು ತನ್ನ ಸರ್ವಸ್ವವನ್ನು ವೇದಾರ್ಥಜ್ಞನಾದ ಬ್ರಾಹ್ಮಣೋತ್ತಮನಿಗೆ ದಾನಮಾಡಿದರೂ ಬ್ರಹ್ಮಹತ್ಯಾದೋಷವು ನಿವೃತ್ತಿಯಾಗುವುದು.

೨೨. ಅಥವಾ ಪಾತಕಿಯಾದ ದ್ವಿಜನು ಮೂರುದಿನಗಳವರೆಗೆ ಉಪವಾಸ ಮಾಡಿ ಸರಸ್ವತೀನದಿಯೂ ಶೋಣನದಿಯೂ ಸೇರುವ ಲೋಕಪ್ರಸಿದ್ಧವಾದ ಸಂಗಮಸ್ಥಳವೆಂಬ ಪುಣ್ಯಕ್ಷೇತ್ರದಲ್ಲಿ ತ್ರಿಷವಣಸ್ನಾನ ಮಾಡುವುದರಿಂದ ಬ್ರಹ್ಮಹತ್ಯಾಪಾತಕದಿಂದ ಶುದ್ಧನಾಗುವನು.

ಗತ್ವಾ ರಾಮೇಶ್ವರಂ ಪುಣ್ಯಂ ಸ್ನಾತ್ವಾ ಚೈವ ಮಹೋದಧೌ ।
ಬ್ರಹ್ಮಚರ್ಯಾದಿಭಿರ್ಯುಕ್ತೋ ದೃಷ್ಟ್ವಾ ರುದ್ರಂ ವಿಮೋಚಯೇತ್ ॥

ಕಪಾಲಮೋಚನಂ ನಾಮ ತೀರ್ಥಂ ದೇವಸ್ಯ ಶೂಲಿನಃ ।
ಸ್ನಾತ್ವಾಭ್ಯರ್ಚ್ಯ ಪಿತೄನ್ ದೇವಾನ್ ಬ್ರಹ್ಮಹತ್ಯಾಂ ವ್ಯಪೋಹತಿ ॥೨೪॥

ಯತ್ರ ದೇವಾಧಿದೇವೇನ ಭೈರವೇಣಾಮಿತೌಜಸಾ ।
ಕಪಾಲಂ ಸ್ಥಾಪಿತಂ ಪೂರ್ವಂ ಬ್ರಹ್ಮಣಃ ಪರಮೇಷ್ಠಿನಃ ॥ ೨೫ ॥

ಸಮಭ್ಯರ್ಚ್ಯ ಮಹಾದೇವಂ ತತ್ರ ಭೈರವರೂಪಿಣಮ್ ।
ತರ್ಪಯಿತ್ವಾ ಪಿತೄನ್ ಸ್ನಾತ್ವಾ ಮುಚ್ಯತೇ ಬ್ರಹ್ಮಹತ್ಯಯಾ ॥ ೨೬ ॥

ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇತ್ರ್ಯಶೀತಿತಮೋಽಧ್ಯಾಯಃ

---

೨೩. ಅಥವಾ ಪವಿತ್ರವಾದ ರಾಮೇಶ್ವರಕ್ಷೇತ್ರಕ್ಕೆಹೋಗಿ ಅಲ್ಲಿ ಮಹೋದಧಿಯಲ್ಲಿ ಸ್ನಾನಮಾಡಿ, ಬ್ರಹ್ಮಚರ್ಯ ಮುಂತಾದ ಯಾತ್ರಾನಿಯಮಗಳಿಂದ ಕೂಡಿ, ರಾಮೇಶ್ವರ ದೇವತಾದರ್ಶನ ಮಾಡುವುದರಿಂದ ಬ್ರಹ್ಮಹತ್ಯಾದೋಷವು ಕ್ಷಯಿಸುವುದು.

೨೪. ಹಾಗು ಶೂಲಧಾರಿಯಾದ ಮಹೇಶ್ವರನ ಸನ್ನಿಧಿಯಿಂದ ಕೂಡಿದ ಕಪಾಲಮೋಚನವೆಂಬ ಪುಣ್ಯತೀರ್ಥದಲ್ಲಿ ಸ್ನಾನಮಾಡಿ ಪಿತೃ-ದೇವತೆಗಳನ್ನು ವಿಧಿವತ್ತಾಗಿ ಪೂಜಿಸುವುದರಿಂದ ಬ್ರಹ್ಮಹತ್ಯಾಪಾತಕವು ಕ್ಷಯಿಸುವುದು.

೨೫. ಹಿಂದೆ ಹೇಳಿದ ಕಪಾಲಮೋಚನವೆಂಬ ತೀರ್ಥದಲ್ಲಿ ಪರಮಸ್ಥಾನದಲ್ಲಿ ರಾಜಿಸುವ ಬ್ರಹ್ಮದೇವನ ಕಪಾಲವು ಹಿಂದೆ ದೇವತೆಗಳಿಗೆ ದೇವತಾರೂಪಿಯೂ ಅತಿಶಯವಾದ ಮಹಿಮೆಯುಳ್ಳವನೂ ಆದ ಭೈರವಸ್ವಾಮಿಯಿಂದ ಇರಿಸಲ್ಪಟ್ಟಿದೆ.

೨೬. ಅಂತಹ ಪುಣ್ಯಸ್ಥಳದಲ್ಲಿ ಭೈರವರೂಪಿಯಾದ ಮಹೇಶ್ವರನನ್ನು ಪೂಜಿಸಿ, ಆ ತೀರ್ಥದಲ್ಲಿ ಸ್ನಾನಮಾಡಿ, ಪಿತೃದೇವತೆಗಳಿಗೆ ತರ್ಪಣವನ್ನು ಕೊಡುವುದರಿಂದ ಬ್ರಹ್ಮಹತ್ಯಾದೋಷದಿಂದ ಮುಕ್ತಿಯನ್ನು ಹೊಂದುತ್ತಾನೆ.

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ಎಂಭತ್ತಮೂರನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಕೂರ್ಮಪುರಾಣಂ

---

## ಚತುರಶೀತಿತಮೋಽಧ್ಯಾಯಃ.

ಋಷಯ ಊಚುಃ:—

ಕಥಂ ದೇವೇನ ರುದ್ರೇಣ ಶಂಕರೇಣಾತಿ ತೇಜಸಾ ।
ಕಪಾಲಂ ಬ್ರಹ್ಮಣಃ ಪೂರ್ವಂ ಸ್ಥಾಪಿತಂ ದೇಹಜಂ ಭುವಿ ॥ ೧ ॥

ಸೂತ ಉವಾಚ:—

ಶೃಣುಧ್ವಮೃಷಯಃ ಪುಣ್ಯಾಂ ಕಥಾಂ ಪಾಪಪ್ರಣಾಶಿನೀಮ್ ।
ಮಾಹಾತ್ಮ್ಯಂ ದೇವದೇವಸ್ಯ ಮಹಾದೇವಸ್ಯ ಧೀಮತಃ ॥ ೨ ॥

---

## ಎಂಭತ್ತನಾಲ್ಕನೆಯ ಅಧ್ಯಾಯ

೧. ಋಷಿಗಳು ಇಂತೆಂದರು:— ಹೆಚ್ಚಾದ ತೇಜಃಪುಂಜದಿಂದ ಕೂಡಿದವನೂ, ರುದ್ರಮೂರ್ತಿಯೂ ಆದ ಶಂಕರನಿಂದ ಹಿಂದೆ ಬ್ರಹ್ಮನ ದೇಹದಲ್ಲಿದ್ದ ಶಿರಃಕಪಾಲವು ಭೂಮಿಯಲ್ಲಿ ಏಕೆ ಇರಿಸಲ್ಪಟ್ಟಿತು ?

೨. ಸೂತಮುನಿಯು ಈ ರೀತಿಯಾಗಿ ಹೇಳಿದನು:— ಮಹರ್ಷಿಗಳೆ ! ಸರ್ವಜ್ಞನೂ ದೇವೋತ್ತಮನೂ, ಆದ ಮಹೇಶ್ವರನ ಮಾಹಾತ್ಮ್ಯದಿಂದ ಕೂಡಿರುವ ಪಾಪಗಳನ್ನು ಭಂಗಮಾಡುವ ಮತ್ತು ಪವಿತ್ರವಾದ ಕಥೆಯನ್ನು ಶ್ರವಣಮಾಡಿರಿ.

ಪುರಾ ಪಿತಾಮಹಂ ದೇವಂ ಮೇರುಶೃಂಗೇ ಮಹರ್ಷಯಃ ।
ಪ್ರೋಚುಃ ಪ್ರಣಮ್ಯ ಲೋಕಾದಿಂ ಕಿಮೇಕಂ ತತ್ತ್ವಮವ್ಯಯಮ್ ॥ ೩ ॥

ಸ ಮಾಯಯಾ ಮಹೇಶಸ್ಯ ಮೋಹಿತೋ ಲೋಕಸಂಭವಃ ।
ಅವಿಜ್ಞಾಯ ಪರಂ ಭಾವಂ ಸ್ವಾತ್ಮಾನಂ ಪ್ರಾಹ ಧರ್ಷಿಣಮ್ ॥ ೪ ॥

ಅಹಂ ಧಾತಾ ಜಗದ್ಯೋನಿಃ ಸ್ವಯಂಭೂರೇಕ ಈಶ್ವರಃ ।
ಅನಾದಿಮತ್ಪರಂ ಬ್ರಹ್ಮ ಮಾಮಭ್ಯರ್ಚ್ಯ ವಿಮುಚ್ಯತೇ ॥ ೫ ॥

ಅಹಂ ಹಿ ಸರ್ವದೇವಾನಾಂ ಪ್ರವರ್ತಕನಿವರ್ತಕಃ ।
ನ ವಿದ್ಯತೇ ಚಾಭ್ಯಧಿಕೋ ಮತ್ತೋ ಲೋಕೇಷು ಕಶ್ಚನ ॥ ೬ ॥

---

೩. ಪೂರ್ವಕಾಲದಲ್ಲಿ ಮೇರುಪರ್ವತದ ಶಿಖರದಲ್ಲಿದ್ದ ತಪಸ್ವಿಗಳಾದ ಮಹರ್ಷಿಗಳು ಸಮಸ್ತ ಲೋಕಗಳಿಗೆ ಕಾರಣನಾದ ಬ್ರಹ್ಮದೇವನನ್ನು ನೋಡಿ, ನಮಸ್ಕಾರಮಾಡಿ " ನಾಶವಾಗದೆ ನಿತ್ಯವಾಗಿರುವ ಒಂದು ತತ್ತ್ವವು ಯಾವುದು ? " ಹೀಗೆಂದು ಪ್ರಶ್ನೆ ಮಾಡಿದರು.

೪. ಆಗ ಸರ್ವಲೋಕಗಳ ಉತ್ಪತ್ತಿಗೆ ಕಾರಣನಾದ ಬ್ರಹ್ಮದೇವನು ಪರಮೇಶ್ವರಮಾಯೆಯಿಂದ ಮುಗ್ಧನಾಗಿ ತನ್ನಲ್ಲಿ ಅಂತರ್ಯಾಮಿಯಾದ ಪರಮೇಶ್ವರ ಭಾವವನ್ನು ಅರಿಯದೆ ತನ್ನ ಸ್ವರೂಪವು ಸರ್ವಾತಿಶಾಯಿಯಾದ ಪರತತ್ತ್ವವೆಂದು ಹೇಳಿದನು.

೫. ಮತ್ತು ಮುಂದುವರಿಸಿ ಹೀಗೆ ಹೇಳಿದನು:— ನಾನು ಸೃಷ್ಟಿಕರ್ತನು; ನಾನು ಜಗತ್ತಿಗೆಲ್ಲಾ ಕಾರಣನು; ನಾನು ನನ್ನಿಂದಲೇ ಕಾಣಿಸಿಕೊಂಡಿರುವೆನು; ನಾನು ಅದ್ವಿತೀಯನು; ಮತ್ತು ನಾನು ಸರ್ವನಿಯಾಮಕನು. ಉತ್ಪತ್ತಿ ನಾಶರಹಿತವಾದ ಪರಬ್ರಹ್ಮಸ್ವರೂಪಿಯಾದ ನನ್ನನ್ನು ಪೂಜಿಸಿದ ಮಾನವನು ಮುಕ್ತನಾಗುತ್ತಾನೆ.

೬. ನಾನು ಸಮಸ್ತ ದೇವತೆಗಳಿಗೂ ಪ್ರವರ್ತಕನೂ, ಮತ್ತು ನಿವರ್ತಕನೂ ಆಗಿರುವೆನು. ನನ್ನ ಸಂಕಲ್ಪದಂತೆ ಸ್ವತಂತ್ರನಾಗಿರುವುದರಿಂದ ಲೋಕಗಳಲ್ಲಿ ಎಲ್ಲಿಯೂ ನನಗಿಂತಲೂ ಉತ್ಕೃಷ್ಟನಾದವನು ಬೇರೆ ಯಾರೂ ಇಲ್ಲ.

ತಸ್ಯೈವಂ ಮನ್ಯಮಾನಸ್ಯ ಜಜ್ಞೇ ನಾರಾಯಣಾಂಶಜಃ ।
ಪ್ರೋವಾಚ ಪ್ರಹಸನ್ ವಾಕ್ಯಂ ರೋಷತೋಽಯಂ ತ್ರಿಲೋಚನಃ ॥೭॥

ಕಿಂ ಕಾರಣಮಿದಂ ಬ್ರಹ್ಮನ್ ವರ್ತತೇ ತವ ಸಾಂಪ್ರತಮ್ ।
ಅಜ್ಞಾನಯೋಗಯುಕ್ತಸ್ಯ ನ ತ್ವೇತತ್ತ್ವಯಿ ವಿದ್ಯತೇ ॥ ೮ ॥

ಅಹಂ ಕರ್ತಾದಿಲೋಕಾನಾಂ ಯಜ್ಞೋ ನಾರಾಯಣಾತ್ಪ್ರಭೋಃ ।
ನ ಮಾಮೃತೇಽಸ್ಯ ಜಗತೋ ಜೀವನಂ ಸರ್ವಥಾ ಕ್ವಚಿತ್ ॥ ೯ ॥

ಅಹಮೇವ ಪರಂ ಜ್ಯೋತಿರಹಮೇವ ಪರಾ ಗತಿಃ ।
ಮತ್ಪ್ರೇರಿತೇನ ಭವತಾ ಸೃಷ್ಟಂ ಭುವನಮಂಡಲಮ್ ॥ ೧೦ ॥

---

೭. ಈ ರೀತಿಯಾಗಿ ಬ್ರಹ್ಮದೇವನು ಮೋಹದಿಂದ ನುಡಿಯುತ್ತಿರಲು ಮೂರುನಯನಗಳಿಂದ ಶೋಭಿಸುವ ರುದ್ರನು ಕೋಪಗೊಂಡವನಾಗಿ ನಾರಾಯಣನ ಅಂಶದಿಂದ ಬಂದು ಪ್ರತ್ಯಕ್ಷನಾಗಿ ನಗುತ್ತ ಈ ವಚನವನ್ನು ಹೇಳಿದನು.

೮. ಬ್ರಹ್ಮದೇವನೆ ! ನಿನ್ನ ಹೃದಯದಲ್ಲಿ ಈಗ ಈ ವಿಧವಾದ ಮೋಹಬುದ್ಧಿಯು ಉಂಟಾಗಲು ಕಾರಣವೇನು ? ಅಜ್ಞಾನ ಸಂಪರ್ಕದಿಂದ ಕೂಡಿದ ನಿನ್ನಲ್ಲಿ ನೀನು ಹೇಳಿರುವ ಮಾಹಾತ್ಮ್ಯವು ಇರುವುದಿಲ್ಲ.

೯. ಈ ಪ್ರಪಂಚಕ್ಕೆಲ್ಲ ಮೂಲಕಾರಣನು ನಾನಾಗಿದ್ದೇನೆ. ಯಜ್ಞಭೋಕ್ತೃವೂ, ಸರ್ವನಿಯಾಮಕನೂ, ಮತ್ತು ನಾರಾಯಣಾತ್ಮಕನೂ ಆದ ನನ್ನ ಹೊರತು ಈ ವಿಶಾಲವಾದ ಜಗತ್ತಿಗೆ ಎಲ್ಲಿಯೂ ಯಾರಿಂದಲೂ ಸ್ಥಿತಿಯು ದೊರಕುವುದಿಲ್ಲ.

೧೦. ಪರಮ ಪ್ರಕಾಶರೂಪವಾದ ಚೈತನ್ಯಮೂರ್ತಿಯು ನಾನೇ; ಪ್ರಾಣಿಗಳಿಗೆ ಲಭ್ಯವಾಗುವ ಪರಮಗತಿಯು ನಾನೇ; ನನ್ನಿಂದ ಪ್ರೇರೇಪಿಸಲ್ಪಟ್ಟು ಪರತಂತ್ರನಾದ ನಿನ್ನಿಂದ ಲೋಕಪರಂಪರೆಯು ಸೃಷ್ಟಿಮಾಡಲ್ಪಟ್ಟಿದೆ.

ಏವಂ ವಿವದತೋರ್ಮೋಹಾತ್ ಪರಸ್ಪರಜಯೈಷಿಣೋಃ ।
ಆಜಗ್ಮುರ್ಯತ್ರ ತೌ ದೇವೌ ವೇದಾಶ್ಚತ್ವಾರ ಏವ ಹಿ ॥ ೧೧ ॥

ಅನ್ವೀಕ್ಷ್ಯ ದೇವಂ ಬ್ರಹ್ಮಾಣಂ ಯಜ್ಞಾತ್ಮಾನಂ ಚ ಸಂಸ್ಥಿತಮ್ ।
ಪ್ರೋಚುಃ ಸಂವಿಗ್ನಹೃದಯಾ ಯಾಥಾತ್ಮ್ಯಂ ಪರಮೇಷ್ಠಿನಃ ॥ ೧೨ ॥

ಋಗ್ವೇದ ಉವಾಚ :—

ಯಸ್ಯಾಂತಃಸ್ಥಾನಿ ಭೂತಾನಿ ಯಸ್ಮಾತ್ ಸರ್ವಂ ಪ್ರವರ್ತತೇ ।
ಯದಾಹುಸ್ತತ್ಪರಂ ತತ್ತ್ವಂ ಸ ದೇವಃ ಸ್ಯಾನ್ಮಹೇಶ್ವರಃ ॥ ೧೩ ॥

ಯಜುರ್ವೇದ ಉವಾಚ :—

ಯೋ ಯಜ್ಞೈರಖಿಲೈರೀಶೋ ಯೋಗೇನ ಚ ಸಮರ್ಚ್ಯತೇ ।
ಯಮಾಹುರೀಶ್ವರಂ ದೇವಂ ಸ ದೇವಃ ಸ್ಯಾತ್ ಪಿನಾಕಧೃಕ್ ॥ ೧೪ ॥

---

೧೧. ಈ ರೀತಿಯಾಗಿ ಸರ್ವೋತ್ತಮತ್ವವಿಷಯದಲ್ಲಿ ಪರಸ್ಪರ ಜಯಿಸಬೇಕೆಂಬ ಇಷ್ಟದಿಂದ ಇಬ್ಬರು ವಾದಮಾಡುತ್ತಿರುವ ಸಮಯದಲ್ಲಿ ಬ್ರಹ್ಮ ಮತ್ತು ಈಶ್ವರನು ಇದ್ದ ಸ್ಥಳಕ್ಕೆ ನಾಲ್ಕುವೇದಗಳು ಬಂದು ಸೇರಿದುವು.

೧೨. ಅಲ್ಲಿ ವೇದಗಳು ಬ್ರಹ್ಮದೇವನೂ, ಯಜ್ಞರೂಪಿಯಾದ ಮಹೇಶ್ವರನೂ ಇರುವುದನ್ನು ಕಂಡು ಭಯಪಟ್ಟ ಹೃದಯವುಳ್ಳವುಗಳಾಗಿ ಪರಬ್ರಹ್ಮವಸ್ತುವಿನ ಸತ್ಯರೂಪವನ್ನು ವರ್ಣಿಸಿದುವು.

೧೩. ಋಗ್ವೇದವು ಹೀಗೆ ವರ್ಣಿಸಿತು:— ಯಾವ ಆತ್ಮನ ಒಳಗೆ ಸರ್ವಪ್ರಾಣಿಗಳು ವಾಸಮಾಡಿವೆಯೋ, ಯಾವ ಆತ್ಮನಿಂದ ಸರ್ವ ಪ್ರಪಂಚವು ರಚಿಸಲ್ಪಟ್ಟಿದೆಯೋ, ಮತ್ತು ಯಾವುದನ್ನು ಪರಮಾರ್ಥತತ್ತ್ವವೆಂದು ಕರೆಯುವರೋ, ಆ ತತ್ತ್ವವು ಸಾಕ್ಷಾತ್ತಾಗಿ ಮಹೇಶ್ವರದೇವನಾಗಿರುವನು.

೧೪. ಯಜುರ್ವೇದವು ಹೀಗೆ ಹೇಳಿತು:— ಸಮಸ್ತ ಯಜ್ಞಕರ್ಮಗಳಿಂದ ಯಾವ ಈಶ್ವರನು ಪೂಜಿಸಲ್ಪಡುವನೋ, ಯೋಗಾನುಷ್ಠಾನದಿಂದ ಯಾವ ದೇವನು ಪೂಜಿಸಲ್ಪಡುವನೋ, ಮತ್ತು ಯಾವ ದೇವನನ್ನು ಈಶ್ವರನೆಂದು ಕರೆಯುವರೋ; ಅಂತಹ ಈಶ್ವರನು ಪಿನಾಕಾಯುಧವನ್ನು ಧರಿಸಿದ ಈಶ್ವರನಾಗಿರುವನು.

**ಸಾಮವೇದ ಉವಾಚ :—**

**ಯೇನೇದಂ ಭ್ರಾಮ್ಯತೇ ವಿಶ್ವಂ ಯದಾಕಾಶಾಂತರಂ ಶಿವಮ್ ।**
**ಯೋಗಿಭಿರ್ವೇದ್ಯತೇ ತತ್ತ್ವಂ ಮಹಾದೇವಃ ಸ ಶಂಕರಃ ॥ ೧೫ ॥**

**ಅಥರ್ವವೇದ ಉವಾಚ :—**

**ಯಂ ಪ್ರಪಶ್ಯಂತಿ ದೇವೇಶಂ ಯಜಂತೇ ಯತಯಃ ಪರಮ್ ।**
**ಮಹೇಶಂ ಪುರುಷಂ ರುದ್ರಂ ಸ ದೇವೋ ಭಗವಾನ್ ಭವಃ ॥ ೧೬ ॥**

**ಏವಂ ಸ ಭಗವಾನ್ ಬ್ರಹ್ಮಾ ವೇದಾನಾಮೀರಿತಂ ಶುಭಮ್ ।**
**ಶ್ರುತ್ವಾ ವಿಹಸ್ಯ ವಿಶ್ವಾತ್ಮಾ ತತಶ್ಚಾಹ ವಿಮೋಹಿತಃ ॥ ೧೭ ॥**

---

೧೫. ಸಾಮವೇದವು ಈ ರೀತಿಯಾಗಿ ಪ್ರಶಂಸೆಮಾಡಿತು:— ಯಾವ ತತ್ತ್ವದಿಂದ ವಿಶ್ವವೆಲ್ಲವೂ ಪರತಂತ್ರವಾಗಿ ಭ್ರಮಿಸುತ್ತಿದೆಯೋ, ಯಾವ ತತ್ತ್ವವು ಆಕಾಶದಲ್ಲಿಯೂ ಸೂಕ್ಷ್ಮರೂಪದಿಂದ ಅಡಗಿದೆಯೋ, ಮತ್ತು ಯಾವ ಮಂಗಳ ತತ್ತ್ವವು ಯೋಗಿಗಳಿಂದ ಅನುಭವಿಸಲ್ಪಡುವುದೋ, ಆ ತತ್ತ್ವವು ಶಂಕರ ರೂಪಿಯಾದುದು.

೧೬. ಅಥರ್ವವೇದವು ಹೀಗೆ ನುಡಿಯಿತು:— ಜಿತೇಂದ್ರಿಯರಾದ ಯತಿಗಳು ಯಾವ ದೇವೇಶ್ವರನನ್ನು ಸಾಕ್ಷಾತ್ಕರಿಸುವರೋ, ಯಾವ ಪರಮೇಶ್ವರನನ್ನು ಪೂಜಿಸುವರೋ, ಅಂತಹ ದೇವನು ಮಹೇಶ್ವರನೂ, ಪುರುಷಾಕಾರನೂ ರುದ್ರಮೂರ್ತಿಯೂ, ಷಡ್ಗುಣೈಶ್ವರ್ಯಸಂಪನ್ನನೂ, ಮತ್ತು ಸರ್ವಕಾರಣನೂ ಆದ ಶಂಕರನಾಗಿರುವನು.

೧೭. ಪೂಜ್ಯನಾದ, ವಿಶ್ವಮೂರ್ತಿಯಾದ ಬ್ರಹ್ಮದೇವನು ವೇದಗಳು ನುಡಿದಿರುವ ಈ ಮಂಗಳವಚನವನ್ನು ಕೇಳಿ, ಮಾಯೆಯಿಂದ ಮೋಹಗೊಂಡವನಾಗಿ ಗರ್ವದಿಂದ ನಗುತ್ತ ಈ ಮಾತನ್ನು ಹೇಳಿದನು.

ಕಥಂ ತತ್ಪರಮಂ ಬ್ರಹ್ಮ ಸರ್ವಸಂಗವಿವರ್ಜಿತಮ್ ।
ರಮತೇ ಭಾರ್ಯಯಾ ಸಾರ್ಧಂ ಪ್ರಮಥೈಶ್ಚಾತಿಗರ್ವಿತೈಃ ॥ ೧೮ ॥

ಇತೀರಿತೇಽಥ ಭಗವಾನ್ ಪ್ರಣವಾತ್ಮಾ ಸನಾತನಃ ।
ಅಮೂರ್ತೋ ಮೂರ್ತಿಮಾನ್ ಭೂತ್ವಾ ವಚಃ ಪ್ರಾಹ ಪಿತಾಮಹಮ್

ಪ್ರಣವ ಉವಾಚ :—

ನ ಹ್ಯೇಷ ಭಗವಾನೀಶ ಸ್ವಾತ್ಮನೋ ವ್ಯತಿರಿಕ್ತಯಾ ।
ಕದಾಚಿದ್ರಮತೇ ರುದ್ರಸ್ತಾದೃಶೋ ಹಿ ಮಹೇಶ್ವರಃ ॥ ೨೦ ॥

ಅಯಂ ಸ ಭಗವಾನೀಶಃ ಸ್ವಯಂಜ್ಯೋತಿಃ ಸನಾತನಃ ।
ಸ್ವಾನಂದಭೂತಾ ಕಥಿತಾ ದೇವೀ ಆಗಂತುಕಾ ಶಿವಾ ॥ ೨೧ ॥

---

೧೮. ಅತ್ಯಂತ ಅಹಂಕಾರದಿಂದ ಮೆರೆಯುವ, ಪ್ರಮಥಗಣಗಳ ಪರಿವಾರದಿಂದ ಕೂಡಿ ಪತ್ನಿಯೊಡನೆ ರಮಿಸುತ್ತಿರುವ ಈ ಈಶ್ವರನು ಸರ್ವ ಸಂಗಗಳಿಂದ ರಹಿತವಾದ ಪರಬ್ರಹ್ಮರೂಪಿಯಾಗಿರುವುದು- ಹೇಗೆ ?

೧೯. ಬ್ರಹ್ಮದೇವನು ಹೀಗೆನ್ನಲು ನಿರಾಕಾರನೂ, ಅನಾದಿಯೂ, ಓಂಕಾರ ಸ್ವರೂಪಿಯೂ ಮತ್ತು ಭಗವಂತನೂ, ಆದ ಶಂಕರನು ಮೂರ್ತಿಯನ್ನು ಧರಿಸಿ, ಪ್ರತ್ಯಕ್ಷನಾಗಿ ಬಂದು ಬ್ರಹ್ಮನಿಗೆ ಈ ವಚನವನ್ನು ಹೇಳಿದನು.

೨೦. ಓಂಕಾರರೂಪಿಯಾದ ಪರಮಾತ್ಮನು ಇಂತೆಂದನು:-- ಪೂಜ್ಯನೂ, ಸರ್ವೇಶ್ವರನೂ ಆದ ರುದ್ರಮೂರ್ತಿಯು ತನಗಿಂತ ವ್ಯತಿರಿಕ್ತವಾಗಿರುವ ಯಾವುದೊಂದು ವ್ಯಕ್ತಿಯೊಡನೆಯೂ ಯಾವಾಗಲೂ ರಮಿಸುವುದಿಲ್ಲ. ಮಹೇಶ್ವರನು ಅಂತಹ ಮಾಹಾತ್ಮ್ಯವುಳ್ಳವನು.

೨೧. ಭಗವಂತನಾದ ಈಶ್ವರನು ಸ್ವಯಂಪ್ರಕಾಶಸ್ವರೂಪನೂ ಮತ್ತು ಅನಾದಿಯೂ ಆಗಿಹುವನು. ಅವನು ರಮಿಸಲು ಸಹಾಯಕಳಾಗಿ ಬಂದಂತೆ ತೋರುವ ಈ ಮಂಗಳಮೂರ್ತಿಯು ತನ್ನ ಪರಿಪೂರ್ಣಾನಂದಸ್ವರೂಪಳಾದ ದೇವಿಯು.

ಇತ್ಯೇವಮುಕ್ತೇಽಪಿ ತದಾ ಯಜ್ಞಮೂರ್ತೇರಜಸ್ಯ ಚ ।
ನಾಜ್ಞಾನಮಗಮನ್ನಾಶಮೀಶ್ವರಸ್ಯೈವ ಮಾಯಯಾ ॥ ೨೨ ॥

ತದಂತರೇ ಮಹಾಜ್ಯೋತಿರ್ವಿರಿಂಚೋ ವಿಶ್ವಭಾವನಃ ।
ಪ್ರಾದರ್ಶದದ್ಭುತಂ ದಿವ್ಯಂ ಪೂರಯನ್ ಗಗನಾಂತರಮ್ ॥ ೨೩ ॥

ತನ್ಮಧ್ಯಸಂಸ್ಥಿತಜ್ಯೋತಿರ್ಮಂಡಲಂ ತೇಜಸೋಜ್ವಲಮ್ ।
ವ್ಯೋಮಮಧ್ಯಗತಂ ದಿವ್ಯಂ ಪ್ರಾದುರಾಸೀದ್ದ್ವಿಜೋತ್ತಮಾಃ ॥ ೨೪ ॥

ಸ ದೃಷ್ಟ್ವಾ ವದನಂ ದಿವ್ಯಂ ಮೂರ್ಧ್ನಿ ಲೋಕಪಿತಾಮಹಃ ।
ತೈಜಸಂ ಮಂಡಲಂ ಘೋರಮಲೋಕಯದನಿಂದಿತಮ್ ॥ ೨೫ ॥

---

೨೨. ಈ ರೀತಿಯಾಗಿ ಓಂಕಾರವು ಹೇಳಿದರೂ ಯಜ್ಞಮಯಮೂರ್ತಿಗೂ ಬ್ರಹ್ಮದೇವನಿಗೂ ಈಶ್ವರನ ಮಾಯಾಪರತಂತ್ರತೆಯಿಂದ ಇದ್ದ ಅಜ್ಞಾನವು ಸ್ವಲ್ಪವೂ ನಾಶಹೊಂದಲಿಲ್ಲ.

೨೩. ಈ ಸಂದರ್ಭದಲ್ಲಿ ವಿಶ್ವವನ್ನು ಸೃಷ್ಟಿಸುವ ಶಕ್ತಿಯುಳ್ಳ ಬ್ರಹ್ಮದೇವನು ಗಗನಮಂಡಲವನ್ನು ವ್ಯಾಪಿಸುವ, ದಿವ್ಯವಾದ ಒಂದು ಮಹಾಜ್ಯೋತಿಯ ಮಂಡಲ ವನ್ನು ತೋರಿಸಿದನು.

೨೪. ದ್ವಿಜೋತ್ತಮರೆ ! ಗಗನದ ಮಧ್ಯವನ್ನು ವ್ಯಾಪಿಸಿರುವುದೂ, ಪ್ರಕಾಶದಿಂದ ಉಜ್ಜ್ವಲವೂ ಮತ್ತು ದಿವ್ಯವೂ ಆದ ಮಧ್ಯದಲ್ಲಿ ತೇಜಃಪುಂಜಮಯ ವಾದ ಜ್ಯೋತಿಯ ಮಂಡಲವು ಪ್ರಾದುರ್ಭವಿಸಿತು.

೨೫. ಲೋಕಗಳಿಗೆ ಪಿತಾಮಹನಾದ ಬ್ರಹ್ಮದೇವನು ತನ್ನ ದಿವ್ಯವಾದ ಶಿರೋಮಧ್ಯದಲ್ಲಿ ಒಂದು ವದನವನ್ನು ಕಂಡನು. ಹಾಗು ತೇಜೋಮಯವೂ ಘೋರ ರೂಪವೂ ಮತ್ತು ನಿಂದಾರಹಿತವೂ ಆದ ಮಂಡಲವನ್ನು ಸಾಕ್ಷಾತ್ಕರಿಸಿದನು.

ಪ್ರಜಜ್ವಾಲಾತಿಕೋಪೇನ ಬ್ರಹ್ಮಣಃ ಪಂಚಮಂ ಶಿರಃ।
ಕ್ಷಣಾದಪಶ್ಯತ್ ಸ ಮಹಾನ್ ಪುರುಷೋ ನೀಲಲೋಹಿತಃ　　॥ ೨೬ ॥

ತ್ರಿಶೂಲಪಿಂಗಲೋ ದೇವೋ ನಾಗಯಜ್ಞೋಪವೀತವಾನ್ ।
ತಂ ಪ್ರಾಹ ಭಗವಾನ್ ಬ್ರಹ್ಮಾ ಶಂಕರಂ ನೀಲಲೋಹಿತಮ್ ॥ ೨೭ ॥

ಜ್ಞಾನಾಯ ಪೂರ್ವಂ ಭವತೋ ಲಲಾಟಾದದ್ಯ ಶಂಕರಮ್ ।
ಪ್ರಾದುರ್ಭೂತಂ ಮಹೇಶಾನಂ ಮಾಮತಃ ಶರಣಂ ವ್ರಜ　　॥ ೨೮ ॥

ಶ್ರುತ್ವಾ ಸಗರ್ವವಚನಂ ಪದ್ಮಯೋನೇರಥೇಶ್ವರಃ ।
ಪ್ರಾಹಿಣೋತ್ಪುರುಷಂ ಕಾಲಂ ಭೈರವಂ ಲೋಕದಾಹಕಮ್ ॥ ೨೯ ॥

---

೨೬. ಆಗ ಬ್ರಹ್ಮನ ಆ ಐದನೆಯ ಶಿರವು ಅತ್ಯಂತ ಕೋಪದಿಂದ ಜ್ವಲಿಸುವಂತಾಯಿತು. ಹೀಗಿರಲು ಕ್ಷಣಮಾತ್ರದಿಂದ ನೀಲ ಮತ್ತು ಲೋಹಿತವರ್ಣಗಳಿಂದ ಕೂಡಿದ ಮಹಾಪುರುಷನಾದ ಈಶ್ವರನು ಅವನ ಲಲಾಟದಿಂದ ಪ್ರಾದುರ್ಭವಿಸಿದನು.

೨೭. ಬ್ರಹ್ಮದೇವನಿಂದ ಜನಿಸಿಬಂದ ಈಶ್ವರನು ತ್ರಿಶೂಲಧಾರಿಯೂ ಚಿನ್ನದಬಣ್ಣವುಳ್ಳವನೂ, ಮತ್ತು ಸರ್ಪರೂಪವಾದ ಯಜ್ಞೋಪವೀತವನ್ನು ಧರಿಸಿದವನೂ ಆಗಿದ್ದನು. ಆಗ ನೀಲ ಲೋಹಿತವರ್ಣಗಳಿಂದ ಕೂಡಿದ ಶಂಕರನನ್ನು ನೋಡಿ ಭಗವಂತನಾದ ಬ್ರಹ್ಮನು ಹೀಗೆ ಹೇಳಿದನು.

೨೮. ಮಹೇಶ್ವರನಾದ ಶಂಕರನು ಈಗ ಲಲಾಟದೇಶದಿಂದ ಹುಟ್ಟಿಬಂದುದು ನಿನ್ನ ಜ್ಞಾನೋದಯಕ್ಕೆ ಸಾಧನವಾಯಿತು. ಆದುದರಿಂದ ಮಹಿಮೆಯಲ್ಲಿ ಅಲ್ಪನಾದ ನೀನು ನನಗೆ ಶರಣನಾಗು.

೨೯. ಮಹೇಶ್ವರನು ಪದ್ಮಪುಷ್ಪದಿಂದ ಜನಿಸಿದ ಬ್ರಹ್ಮದೇವನ ಈ ಅಹಂಕಾರಗರ್ಭಿತವಾದ ವಾಕ್ಯವನ್ನು ಕೇಳಿ ಲೋಕಗಳನ್ನು ದಹಿಸುವ ಶಕ್ತಿಯುಳ್ಳ, ಪುರುಷಾಕಾರನಾದ ಕಾಲಭೈರವಮೂರ್ತಿಯನ್ನು ಪ್ರೇರೇಪಿಸಿದನು.

ಸ ಕೃತ್ವಾ ಸುಮಹದ್ಯುದ್ಧಂ ಬ್ರಹ್ಮಣಾ ಕಾಲಭೈರವಃ ।
ಪ್ರಚಕರ್ತಾಸ್ಯ ವದನಂ ವಿರಿಂಚಸ್ಯಾಥ ಪಂಚಮಮ್ ॥ ೩೦ ॥

ನಿಕೃತ್ತವದನೋ ದೇವೋ ಬ್ರಹ್ಮಾ ದೇವೇನ ಶಂಭುನಾ ।
ಮಮಾರ ಚೇಶೋ ಯೋಗೇನ ಜೀವಿತಂ ಪ್ರಾಪ ವಿಶ್ವಧೃಕ್ ॥ ೩೧ ॥

ಅಥಾನ್ವಪಶ್ಯದೀಶಾನಂ ಮಂಡಲಾಂತರ ಸಂಸ್ಥಿತಮ್ ।
ಸಮಾಸೀನಂ ಮಹಾದೇವ್ಯಾ ಮಹಾದೇವಂ ಸನಾತನಮ್ ॥ ೩೨ ॥

ಭುಜಂಗರಾಜವಲಯಂ ಚಂದ್ರಾವಯವಭೂಷಣಮ್ ।
ಕೋಟಿಸೂರ್ಯಪ್ರತೀಕಾಶಂ ಜಟಾಜೂಟವಿರಾಜಿತಮ್ ॥ ೩೩ ॥

---

೩೦. ಕಾಲಭೈರವಮೂರ್ತಿಯು ಬ್ರಹ್ಮನೊಡನೆ ಘೋರವಾದ ಯುದ್ಧವನ್ನು ಮಾಡಿ, ಕಡೆಯಲ್ಲಿ ಬ್ರಹ್ಮದೇವನ ಐದನೆಯ ಶಿರವನ್ನು ಕತ್ತರಿಸಿದನು.

೩೧, ಹೀಗೆ ಸ್ವಾಮಿಯಾದ ಶಂಕರನಿಂದ ಛೇದಿಸಲ್ಪಟ್ಟ ಮುಖವುಳ್ಳ ಬ್ರಹ್ಮದೇವನು ಪ್ರಾಣಗಳನ್ನು ತ್ಯಜಿಸಿದನು. ಆದರೆ ಈ ವಿಶ್ವವನ್ನು ಧರಿಸುವ ಶಕ್ತಿಯುಳ್ಳ ಈಶ್ವರನು ಯೋಗಬಲದಿಂದ ಜೀವಿತವನ್ನು ಉಂಟುಮಾಡಿದನು.

೩೨. ಆಗ ಬ್ರಹ್ಮನು ಬೇರೊಂದು ಪ್ರಭಾಮಂಡಲದಲ್ಲಿರುವ, ಮಹಾದೇವಿಯಾದ ಜಗನ್ಮಾತೆಯೊಡನೆ ಕುಳಿತಿರುವ, ದೇವೋತ್ತಮನಾದ ಮತ್ತು ಅನಾದಿಯಾದ ಈಶ್ವರನನ್ನು ಸಾಕ್ಷಾತ್ಕರಿಸಿದನು.

೩೩. ಆಗ ಈಶ್ವರ ವಿಗ್ರಹವು ಸರ್ಪರಾಜನೆಂಬ ಕಂಕಣಧಾರಿಯೂ, ಚಂದ್ರಕಲೆಯ ಆಭರಣದಿಂದ ಭೂಷಿಸಲ್ಪಟ್ಟಿರುವುದೂ, ಕೋಟಿಸಂಖ್ಯೆಗಿಂತ ಅಧಿಕವಾದ ಸೂರ್ಯಬಿಂಬಗಳಂತೆ ಪ್ರಕಾಶಿಸುವುದೂ, ಮತ್ತು ಜಟಾಭಾರದಿಂದ ಕೂಡಿರುವುದೂ ಆಗಿತ್ತು.

ಶಾರ್ದೂಲಚರ್ಮವಸನಂ ದಿವ್ಯಮಾಲಾಸಮನ್ವಿತಮ್ ।
ತ್ರಿಶೂಲಪಾಣಿಂ ದುಷ್ಪ್ರೇಕ್ಷ್ಯಂ ಯೋಗಿನಂ ಭೂತಿಭೂಷಣಮ್ ॥೩೪॥

ಯಮಂತರಾ ಯೋಗನಿಷ್ಠಾಃ ಪ್ರಪಶ್ಯಂತಿ ಹೃದೀಶ್ವರಮ್ ।
ತಮಾದಿಮೇಕಂ ಬ್ರಹ್ಮಾಣಂ ಮಹಾದೇವಂ ದದರ್ಶ ಹ ॥ ೩೫ ॥

ಯಸ್ಯ ಸಾ ಪರಮಾ ದೇವೀ ಶಕ್ತಿರಾಕಾಶಸಂಜ್ಞಿತಾ ।
ಸೋಽನಂತೈಶ್ವರ್ಯಯೋಗಾತ್ಮಾ ಮಹೇಶೋ ದೃಶ್ಯತೇ ಕಿಲ ॥ ೩೬ ॥

ಯಸ್ಯಾಶೇಷಜಗದ್ಬೀಜಂ ವಿಲಯಂ ಯಾತಿ ಮೋಹನಮ್ ।
ಸಕೃತ್ಪ್ರಣಾಮಮಾತ್ರೇಣ ಸ ರುದ್ರಃ ಖಲು ದೃಶ್ಯತೇ ॥ ೩೭ ॥

---

೩೪. ಹಾಗು ಶಾರ್ದೂಲಚರ್ಮವನ್ನು ಉಟ್ಟುಕೊಂಡಿರುವುದೂ, ದಿವ್ಯ ಹಾರಗಳಿಂದ ಶೋಭಿಸಲ್ಪಟ್ಟಿರುವುದೂ, ಪಾಣಿಯಲ್ಲಿ ಪಿನಾಕಾಯುಧವನ್ನು ಧರಿಸಿ ದುದೂ, ದೃಷ್ಟಿಸಿ ನೋಡಲು ಅಶಕ್ಯವೂ, ಭಸ್ಮಲೇಪದಿಂದ ಅಲಂಕೃತವೂ ಆಗಿ ಯೋಗಿಸ್ವರೂಪದಿಂದ ರಮ್ಯವಾಗಿತ್ತು.

೩೫. ಯೋಗಾಭ್ಯಾಸತತ್ಪರರು ಹೃದಯದ ಅಂತರದಲ್ಲಿ ಯಾವ ಈಶ್ವರನನ್ನು ಸಾಕ್ಷಾತ್ಕರಿಸುವರೋ, ಅಂತಹ ಸರ್ವಲೋಕಗಳಿಗೆ ಆದಿರೂಪನೂ ಅದ್ವಿತೀಯನೂ, ಆದ ಮಹಾದೇವನನ್ನು ಬ್ರಹ್ಮನು ಸಾಕ್ಷಾತ್ಕರಿಸಿದನು.

೩೬. ಆಕಾಶವೆಂಬ ಸಂಜ್ಞಾಂಕನದಿಂದ ಕೂಡಿದ, ಸರ್ವೋತ್ತಮಳಾದ ಶಕ್ತಿ ದೇವಿಯು ಯಾವ ಶಿವನಿಗೆ ಅಧೀನಳಾಗಿರುವಳೋ, ಅನಂತವಾದ ಐಶ್ವರ್ಯ, ಯೋಗ ಶಕ್ತಿಗಳಿಂದ ಕೂಡಿದ ಅಂತಹ ಮಹೇಶ್ವರನು ಕಾಣುತ್ತಿರುವನು.

೩೭. ಯಾವ ಈಶ್ವರನನ್ನು ಒಂದುಸಲಮಾತ್ರ ನಮಸ್ಕಾರ ಮಾಡಲಾಗಿ ಸಮಸ್ತ ಜಗತ್ತೆಂಬ ಸಂಸಾರಕ್ಕೆ ಬೀಜರೂಪವೂ, ಮೋಹವನ್ನುಂಟುಮಾಡುವುದೂ ಆದ ಅಜ್ಞಾನವು ನಾಶಹೊಂದುವುದೊ, ಅಂತಹ ರುದ್ರಮೂರ್ತಿಯು ಕಾಣುತ್ತಲಿರು ವನು.

ಯೇಽಥ ನಾಚಾರನಿರತಾಸ್ತದ್ಭಕ್ತಾಶ್ಚೈವ ಕೇವಲಮ್ ।
ವಿಮೋಚಯತಿ ಲೋಕಾತ್ಮಾ ನಾಯಕೋ ದೃಶ್ಯತೇ ಕಿಲ ॥ ೩೮ ॥

ಯಸ್ಯ ಬ್ರಹ್ಮಾದಯೋ ದೇವಾ ಋಷಯೋ ಬ್ರಹ್ಮವಾದಿನಃ ।
ಅರ್ಚಯಂತಿ ಸದಾ ಲಿಂಗಂ ಸ ಶಿವಃ ಖಲು ದೃಶ್ಯತೇ ॥ ೩೯ ॥

ಯಸ್ಯಾಶೇಷಜಗತ್ಸೂತಿರ್ವಿಜ್ಞಾನತನುರೀಶ್ವರಃ ।
ನ ಮುಂಚತಿ ಸದಾ ಪಾರ್ಶ್ವಂ ಶಂಕರೋಽಸೌ ಚ ದೃಶ್ಯತೇ ॥ ೪೦ ॥

ವಿದ್ಯಾಸಹಾಯೋ ಭಗವಾನ್ ಯಸ್ಯಾಸೌ ಮಂಡಲಾಂತರಮ್ ।
ಹಿರಣ್ಯಗರ್ಭಪುತ್ರೋಽಸಾವೀಶ್ವರೋ ದೃಶ್ಯತೇ ಪರಃ ॥ ೪೧ ॥

---

೩೮. ಯಾವ ಮಾನವರು ಸದಾಚಾರ ತತ್ಪರರಲ್ಲದಿದ್ದರೂ ಈಶ್ವರಭಕ್ತರಾಗಿರುವರೋ, ಅಂತಹ ಆಚಾರಭ್ರಷ್ಟರನ್ನು ಕೂಡ ಮುಕ್ತರನ್ನಾಗಿ ಮಾಡುವ ವಿಶ್ವರೂಪಿಯಾದ ಈಶ್ವರನು ಕಾಣುತ್ತಿರುವನಲ್ಲವೆ !

೩೯. ಬ್ರಹ್ಮ ಮುಂತಾದ ದೇವತೆಗಳೂ ಬ್ರಹ್ಮವಾದಿಗಳಾದ ಮುನಿಗಳೂ ಸರ್ವಕಾಲದಲ್ಲಿಯೂ ಯಾವ ಈಶ್ವರನ ಲಿಂಗವನ್ನು ಅರ್ಚಿಸುತ್ತಿರುವರೋ, ಅಂತಹ ಸರ್ವೇಶ್ವರನು ಮುಂದೆ ಕಾಣುವನು.

೪೦. ಸಮಸ್ತ ಪ್ರಪಂಚವನ್ನು ಸೃಷ್ಟಿಸುವ ತಪೋರೂಪವಾದ ಜ್ಞಾನಶಕ್ತಿಯು ಯಾವ ಈಶ್ವರನ ಸನ್ನಿಧಿಯನ್ನು ಬಿಡದೆ ಇರುವುದೊ, ಅಂತಹ ಈಶ್ವರನು ಮುಂದೆ ಕಾಣಿಸುವನು.

೪೧. ಈಗ ಬ್ರಹ್ಮನ ಪುತ್ರನಾಗಿ ಜನಿಸಿ ವಿದ್ಯಾರೂಪಿಣಿಯಾದ ದೇವಿಯೊಡನೆ ಬೇರೊಂದು ತೇಜೋಮಂಡಲದಲ್ಲಿ ಷಡ್ಗುಣೈಶ್ವರ್ಯ ಸಂಪತ್ತಿಯಿಂದ ಕೂಡಿದ ಯಾವ ಈಶ್ವರನು ಇರುವನೋ, ಅಂತಹ ಪರಮೇಶ್ವರನು ಕಾಣಿಸುವನಲ್ಲವೆ.

ಪುಷ್ಪಂ ಪೌ ಯದಿ ವಾ ಪತ್ರಂ ಯತ್ಪಾದಯುಗಲೇ ಜಲಮ್ ।
ದತ್ವಾ ತರತಿ ಸಂಸಾರಂ ರುದ್ರೋಽಸೌ ದೃಶ್ಯತೇ ಕಿಲ ॥ ೪೨ ॥

ತತ್ಸನ್ನಿಧಾನೇ ಸಕಲಂ ನಿಯಚ್ಛತಿ ಸನಾತನಃ ।
ಕಾಲಂ ಕಿಲ ನಿಯೋಗಾತ್ಮಾ ಕಾಲಕಾಲೋ ಹಿ ದೃಶ್ಯತೇ ॥ ೪೩ ॥

ಜೀವನಂ ಸರ್ವಲೋಕಾನಾಂ ತ್ರಿಲೋಕಸ್ಯೈವ ಭೂಷಣಮ್ ।
ಸೋಮಃ ಸ ದೃಶ್ಯತೇ ದೇವಃ ಸೋಮೋ ಯಸ್ಯ ವಿಭೂಷಣಮ್॥೪೪॥

ದೇವ್ಯಾ ಸಹ ಸದಾ ಸಾಕ್ಷಾದ್ಯಸ್ಯ ಯೋಗಃ ಸ್ವಭಾವತಃ ।
ಗೀಯತೇ ಪರಮಾ ಮುಕ್ತಿರ್ಮಹಾದೇವಃ ಸ ದೃಶ್ಯತೇ ॥ ೪೫ ॥

---

೪೨. ಭಕ್ತನು ತನಗೆ ಸುಲಭವಾಗಿ ಲಭಿಸುವ ಪುಷ್ಪ, ಪತ್ರ ಅಥವಾ ಜಲವನ್ನು ಭಕ್ತಿಯಿಂದ ಯಾವ ಈಶ್ವರನ ಪಾದಾರವಿಂದಗಳಲ್ಲಿ ಅರ್ಪಿಸುವುದರಿಂದ ಸಂಸಾರದುಃಖವನ್ನು ನೀಗುವನೋ, ಅಂತಹ ಈಶ್ವರನು ಕಾಣುತ್ತಿರುವನು.

೪೩. ಅನಾದಿಯಾದ ಯಾವ ಪರಮಾತ್ಮನು ತನ್ನ ಸನ್ನಿಧಿಮಾತ್ರದಿಂದ ಎಲ್ಲ ವಿಶ್ವವನ್ನು ನಿಯಮಿಸುತ್ತಾನೆಯೊ, ಹಾಗು ಸರ್ವ ಸಂಹಾರಕನಾದ ಕಾಲ ಮೂರ್ತಿಯನ್ನು ನಿಯೋಜಿಸುವನೋ, ಅಂತಹ ಕಾಲಕಾಲನೆಂಬ ಈಶ್ವರನು ಗೋಚರಿಸುವನು.

೪೪. ಸರ್ವಲೋಕಗಳಿಗೆ ಜೀವನಾಧಾರನೂ, ಮೂರುಲೋಕಗಳಿಗೆ ಭೂಷಣ ಪ್ರಾಯನೂ, ಮತ್ತು ಚಂದ್ರಕಲೆಯ ಭೂಷಣದಿಂದ ಭೂಷಿತನೂ ಆದ ಉಮಾದೇವಿಯಿಂದ ಸಹಿತನಾದ ಮಹಾದೇವನು ಕಾಣುತ್ತಿರುವನು.

೪೫. ಯಾವ ಈಶ್ವರನಿಗೆ ಸರ್ವಕಾಲದಲ್ಲಿಯೂ ಮಹಾದೇವಿಯೊಡನೆ ಸಂಯೋಗವು ಸ್ವಾಭಾವಿಕವಾಗಿದ್ದು ಅಂತಹ ಯೋಗವೆ ಪರಮಮುಕ್ತಿಯೆಂದೆನಿಸುವುದೊ, ಆ ಮಹಾದೇವನು ಕಾಣುತ್ತಿರುವನು.

ಯೋಗಿನೋ ಯೋಗತತ್ತ್ವಜ್ಞಾ ವಿಯೋಗಾಭಿಮುಖೋಽನಿಶಮ್ ।
ಯೋಗಂ ಧ್ಯಾಯಂತಿ ದೇವ್ಯಾಸೌ ಸ ಯೋಗೀ ದೃಶ್ಯತೇ ಕಿಲ ॥ ೪೬ ॥

ಸೋಽನುವೀಕ್ಷ್ಯ ಮಹಾದೇವಂ ಮಹಾದೇವ್ಯಾ ಸನಾತನಮ್ ।
ವರಾಸನೇ ಸಮಾಸೀನಮವಾಪ ಪರಮಾಂ ಸ್ಮೃತಿಮ್ ॥ ೪೭ ॥

ಲಬ್ಧ್ವಾ ಮಾಹೇಶ್ವರೀಂ ದಿವ್ಯಾಂ ಸಂಸ್ಮೃತಿಂ ಭಗವಾನಜಃ ।
ತೋಷಯಾಮಾಸ ವರದಂ ಸೋಮಂ ಸೋಮಾರ್ಧಭೂಷಣಮ್ ॥

ಬ್ರಹ್ಮೋವಾಚ :—

ನಮೋ ದೇವಾಯ ಮಹತೇ ಮಹಾದೇವ್ಯೈ ನಮೋ ನಮಃ ।
ನಮಃ ಶಿವಾಯ ಶಾಂತಾಯ ಶಿವಾಯೈ ಸತತಂ ನಮಃ ॥ ೪೯ ॥

---

೪೬. ಯೋಗತತ್ತ್ವದ ಪಾರವನ್ನು ಹೊಂದಿರುವ ಯೋಗಿಗಳು ಸರ್ವಸಂಗ ತ್ಯಾಗವೆಂಬ ವಿಯೋಗದಲ್ಲಿ ಯಾವಾಗಲೂ ಆಗ್ರಹವುಳ್ಳವರಾಗಿ ಯಾವ ಪರಮಾತ್ಮ ನಿಗೆ ದೇವಿಯೊಡನೆ ಯೋಗವನ್ನು ಧ್ಯಾನಿಸುವರೋ, ಅಂತಹ ಯೋಗಿರೂಪನಾದ ಮಹೇಶ್ವರನು ಕಾಣುತ್ತಿರುವನಲ್ಲವೆ.

೪೭. ಹೀಗೆ ಬ್ರಹ್ಮದೇವನು ಮಹಾದೇವಿಯೊಡನೆ ಪರಮಾಸನದಲ್ಲಿ ಕುಳಿತುಕೊಂಡಿರುವ ಸನಾತನಸ್ವರೂಪಿಯಾದ ಮಹಾದೇವನನ್ನು ಸಾಕ್ಷಾತ್ಕರಿಸಿ ಉತ್ತಮವಾದ ತತ್ತ್ವಸ್ಮೃತಿಯನ್ನು ಹೊಂದಿದನು.

೪೮. ಪೂಜ್ಯನಾದ ಬ್ರಹ್ಮದೇವನು ಮಹೇಶ್ವರನ ವಿಷಯದಲ್ಲಿ ದಿವ್ಯವಾದ ಪರಮಾರ್ಥತತ್ತ್ವಸ್ಮೃತಿಯನ್ನು ಹೊಂದಿ ಭಕ್ತರಿಗೆ ವರದಾನಮಾಡುವ, ಚಂದ್ರ ಕಲಾಲಂಕಾರದಿಂದ ಭೂಷಿಸಲ್ಪಟ್ಟ ಮತ್ತು ಉಮಾಸಹಿತನಾದ ಈಶ್ವರನನ್ನು ಸಂತೋಷಗೊಳಿಸಿದನು.

೪೯. ಬ್ರಹ್ಮದೇವನು ಇಂತೆಂದನು:— ಮಹಾದೇವರೂಪನಾದ ಈಶ್ವರನಿಗೆ ನಮಸ್ಕಾರವು. ಹಾಗು ಮಹಾ ದೇವೀರೂಪಳಾದ ಉಮೆಗೆ ನಮಸ್ಕಾರವು. ಮಂಗಳ ಕರನೂ ಶಾಂತರೂಪಿಯೂ ಆದ ಶಿವನಿಗೂ, ಕಲ್ಯಾಣರೂಪಳಾದ ಉಮಾದೇವಿಗೂ ನಮಸ್ಕಾರವು.

ಓಂನಮೋ ಬ್ರಹ್ಮಣೇ ತುಭ್ಯಂ ವಿದ್ಯಾಯೈ ತೇ ನಮೋ ನಮಃ ।
ಮಹೇಶಾಯ ನಮಸ್ತುಭ್ಯಂ ಮೂಲಪ್ರಕೃತಯೇ ನಮಃ ॥ ೫೦ ॥

ನಮೋ ವಿಜ್ಞಾನದೇಹಾಯ ಚಿಂತಾಯೈ ತೇ ನಮೋ ನಮಃ ।
ನಮೋಽಸ್ತು ಕಾಲಕಾಲಾಯ ಈಶ್ವರಾಯೈ ನಮೋ ನಮಃ ॥ ೫೧ ॥

ನಮೋ ನಮೋಽಸ್ತು ರುದ್ರಾಯ ರುದ್ರಾಣ್ಯೈ ತೇ ನಮೋ ನಮಃ ।
ನಮೋ ನಮಸ್ತೇ ಕಾಲಾಯ ಮಾಯಾಯೈ ತೇ ನಮೋ ನಮಃ ॥೫೨॥

ನಿಯಂತ್ರೇ ಸರ್ವಕಾರ್ಯಾಣಾಂ ಕ್ಷೋಭಿಕಾಯೈ ನಮೋ ನಮಃ ।
ನಮೋಽಸ್ತು ತೇ ಪ್ರಕೃತಯೇ ನಮೋ ನಾರಾಯಣಾಯ ಚ ॥ ೫೩ ॥

---

೫೦. ಓಂಕಾರಶಬ್ದದಿಂದ ವಾಚ್ಯನೂ, ಪರಮಬೃಹದಾಕಾರನೂ, ಮತ್ತು ಮಹೇಶ್ವರನೂ ಆದ ನಿನ್ನನ್ನು ನಮಸ್ಕರಿಸುವೆನು. ಹಾಗು ವಿದ್ಯಾರೂಪಿಣಿಯೂ, ತತ್ತ್ವಗಳಿಗೆಲ್ಲಾ ಮೂಲಪ್ರಕೃತಿರೂಪಳೂ ಆದ ಮಹಾದೇವಿಯನ್ನು ನಮಸ್ಕರಿಸುವೆನು.

೫೧. ವಿಜ್ಞಾನವೆಂಬ ಚೇತನಶಕ್ತಿಯೇ ದೇಹಸ್ವರೂಪವಾಗಿ ಉಳ್ಳವನೂ, ಅಂತಕನಿಗೆ ಅಂತಕರೂಪಿಯೂ ಆದ ಈಶ್ವರನಿಗೆ ನಮಸ್ಕಾರವು. ಮತ್ತು ಚಿಂತಾವೃತ್ತಿಸ್ವರೂಪಳೂ, ಮತ್ತು ಸರ್ವೇಶ್ವರಸ್ವರೂಪಿಣಿಯೂ ಆದ ದೇವಿಗೆ ನಮಸ್ಕಾರವು.

೫೨. ಕಾಲಮೂರ್ತಿಸ್ವರೂಪನೂ, ರುದ್ರದೇವನೂ, ಆದ ಈಶ್ವರನನ್ನು ವಂದಿಸುವೆನು. ಹಾಗು ರುದ್ರದೇವನ ಪತ್ನಿಯೂ ಸರ್ವಮೋಹಕಳಾದ ಮಾಯಾಸ್ವರೂಪಿಣಿಯೂ ಆದ ದೇವಿಯನ್ನು ವಂದಿಸುವೆನು.

೫೩. ಸಮಸ್ತ ಕಾರ್ಯವಸ್ತುಗಳನ್ನು ನಿಯಮಿಸುವವನೂ, ಮತ್ತು ನಾರಾಯಣಸ್ವರೂಪನೂ ಆದ ಶಿವನಿಗೆ ನಮಸ್ಕಾರವು. ಹಾಗು ಉದಾಸೀನತತ್ತ್ವಗಳಿಗೆ ಕ್ಷೋಭೆಯನ್ನು ಉಂಟುಮಾಡಿ ಮೂಲಕಾರಣರೂಪಳಾದ ದೇವಿಗೆ ನಮಸ್ಕಾರವು.

ಯೋಗದಾಯ ನಮಸ್ತುಭ್ಯಂ ಯೋಗಿನಾಂ ಗುರವೇ ನಮಃ ।
ನಮಃ ಸಂಸಾರವಾಸಾಯ ಸಂಸಾರೋತ್ಪತ್ತಯೇ ನಮಃ ॥ ೫೪ ॥

ನಿತ್ಯಾನಂದಾಯ ವಿಭವೇ ನಮೋಽಸ್ತ್ವಾನಂದಮೂರ್ತಯೇ ।
ನಮಃ ಕಾರ್ಯವಿಹೀನಾಯ ವಿಶ್ವಪ್ರಕೃತಯೇ ನಮಃ ॥ ೫೫ ॥

ಓಂಕಾರಮೂರ್ತಯೇ ತುಭ್ಯಂ ತದಂತಃಸಂಸ್ಥಿತಾಯ ಚ ।
ನಮಸ್ತೇ ವ್ಯೋಮಸಂಸ್ಥಾಯ ವ್ಯೋಮಶಕ್ತ್ಯೈ ನಮೋ ನಮಃ ॥೫೬॥

ಇತಿ ಸೋಮಾಷ್ಟಕೇನೇಶಂ ಪ್ರಣಿಪತ್ಯ ಪಿತಾಮಹಃ ।
ಪಪಾತ ದಂಡವದ್ಭೂಮೌ ಗೃಣನ್ವೈ ಶತರುದ್ರಿಯಮ್ ॥ ೫೭ ॥

---

೫೪. ಭಕ್ತಜನರಿಗೆ ಯೋಗಬಲವನ್ನು ಕೊಡುವವನೂ, ಸಂಸಾರವೃಕ್ಷಕ್ಕೆ ವಾಸಸ್ವರೂಪನೂ ಆದ ಮಹೇಶ್ವರನಿಗೆ ವಂದನೆಯು. ಯೋಗಿಗಳಿಗೆ ಆಚಾರ್ಯ ರೂಪಳೂ, ಸಂಸಾರದ ಉತ್ಪತ್ತಿಗೆ ನಿಮಿತ್ತಳೂ ಆದ ದೇವಿಗೆ ವಂದನೆಯು.

೫೫. ಸರ್ವವ್ಯಾಪಕನೂ, ನಿತ್ಯಾನಂದಸ್ವರೂಪನೂ ಮತ್ತು ಕಾರ್ಯವಸ್ತುಗಳಿಂದ ನಿರ್ಲಿಪ್ತನೂ ಆದ ಶಿವನನ್ನು ವಂದಿಸುತ್ತೇನೆ. ಹಾಗು ಆನಂದಸ್ವರೂಪಿಣಿಯೂ, ವಿಶ್ವಕ್ಕೆ ಪ್ರಕೃತಿಮೂರ್ತಿಯೂ ಆದ ದೇವಿಯನ್ನು ವಂದಿಸುವೆನು.

೫೬. ಓಂಕಾರವೆಂಬ ಶಬ್ದಮಧ್ಯದಲ್ಲಿ ವಾಸಿಸುವವನೂ ಮತ್ತು ವ್ಯೋಮ ಮಧ್ಯದಲ್ಲಿ ಇರುವವನೂ ಆದ ಈಶ್ವರನಿಗೆ ನಮಸ್ಕಾರವು. ಹಾಗು ಓಂಕಾರಶಬ್ದ ಸ್ವರೂಪಳೂ ವ್ಯೋಮಶಕ್ತಿಸ್ವರೂಪಳೂ ಆದ ದೇವಿಗೆ ನಮಸ್ಕಾರವು.

೫೭. ಲೋಕಗಳಿಗೆ ಪಿತಾಮಹಸ್ವರೂಪನಾದ ಬ್ರಹ್ಮದೇವನು ಉಮಾದೇವಿಯಿಂದ ಸಹಿತನಾದ ಈಶ್ವರನನ್ನು ಸ್ತುತಿಸುವ ಅಷ್ಟಕಸ್ತೋತ್ರದಿಂದ ಈಶ್ವರನನ್ನು ಸ್ತುತಿ-ನಮಸ್ಕಾರಮಾಡಿ ಶತರುದ್ರಿಯಸೂಕ್ತವನ್ನು ಜಪಿಸುತ್ತ ಈಶ್ವರನಿಗೆ ಎದುರಾಗಿ ಭೂಮಿಯಲ್ಲಿ ದಂಡಾಕಾರವಾಗಿ ನಮಸ್ಕಾರಮಾಡಿದನು.

ಅಥ ದೇವೋ ಮಹಾದೇವಃ ಪ್ರಣತಾರ್ತಿಹರೋ ಹರಃ ।
ಪ್ರೋವಾಚೋತ್ಥಾಪ್ಯ ಹಸ್ತಾಭ್ಯಾಂ ಪ್ರೀತೋಽಸ್ಮಿ ತವ ಸಾಂಪ್ರತಮ್ ॥

ದತ್ವಾಸ್ಮೈ ಪರಮಂ ಯೋಗಮೈಶ್ವರ್ಯಮತುಲಂ ಮಹತ್ ,
ಪ್ರೋವಾಚಾಗ್ರಸ್ಥಿತಂ ರುದ್ರಂ ನೀಲಲೋಹಿತಮೀಶ್ವರಮ್ ॥ ೫೯ ॥

ಏಷ ಬ್ರಹ್ಮಾಸ್ಯ ಜಗತಃ ಸಂಪೂಜ್ಯಃ ಪ್ರಥಮಃ ಸ್ಥಿತಃ ।
ಆತ್ಮನಾ ರಕ್ಷಣೀಯಸ್ತೇ ಗುಣಜ್ಯೇಷ್ಠಃ ಪಿತಾ ತವ ॥ ೬೦ ॥

ಅಯಂ ಪುರಾಣಃ ಪುರುಷೋ ನ ಹಂತವ್ಯಸ್ತ್ವಯಾನಘ ।
ಸ ಯೋಗೈಶ್ವರ್ಯಮಾಹಾತ್ಮ್ಯಾನ್ಮಾಮೇವ ಶರಣಂ ಗತಃ ॥ ೬೧ ॥

---

೫೮. ತರುವಾಯ ಭಕ್ತರ ಪೀಡೆಗಳನ್ನು ದೂರಮಾಡುವ, ಜಗತ್ತಿನ ಸಂಹಾರಕನಾದ ಮತ್ತು ದೇವೋತ್ತಮನಾದ ಮಹೇಶ್ವರನು ಬ್ರಹ್ಮದೇವನನ್ನು ಕೈಗಳಿಂದ ಹಿಡಿದು ಮೇಲಕ್ಕೆ ಎಬ್ಬಿಸಿ " ಈಗ ನಾನು ನಿನಗೆ ಪ್ರಸನ್ನನಾಗಿರುವೆನು " ಎಂದು ಹೇಳಿದನು.

೫೯. ಹೀಗೆ ಬ್ರಹ್ಮದೇವನಿಗೆ ಪರಮಯೋಗವನ್ನೂ, ನಿರುಪಮವಾದ ಮಹೈಶ್ವರ್ಯವನ್ನೂ ಕೊಟ್ಟು ಪರಮಾತ್ಮನು ಮುಂಭಾಗದಲ್ಲಿ ನಿಂತಿರುವ ನೀಲ ಲೋಹಿತವರ್ಣಗಳಿಂದ ರಂಜಿತನಾದ ರುದ್ರಮೂರ್ತಿಯಾದ ಈಶ್ವರನಿಗೆ ಹೇಳಿದನು.

೬೦. ರುದ್ರನೆ ! ಈ ಬ್ರಹ್ಮದೇವನು ಜಗತ್ತನ್ನು ನಿರ್ಮಿಸುವ ಮೂಲ ಕಾರಣನೂ, ಸಮಸ್ತರಿಗೆ ಪೂಜ್ಯನೂ ಆಗಿರುವನು. ನಿನಗೆ ಜನಕನೂ, ಗುಣಗಳಿಂದ ಹಿರಿಯನೂ ಆದ ಈ ಬ್ರಹ್ಮದೇವನು ನಿನ್ನಿಂದ ರಕ್ಷಿಸಲ್ಪಡಬೇಕಾಗಿರುವನು.

೬೧. ನಿಷ್ಕಲಂಕನೆ ! ಪುರಾಣಪುರುಷನಾದ ಈ ಬ್ರಹ್ಮದೇವನು ನಿನ್ನಿಂದ ಸಂಹರಿಸಲ್ಪಡಬಾರದು. ಇವನು ತನ್ನಲ್ಲಿರುವ ಯೋಗೈಶ್ವರ್ಯದ ಮಹಿಮೆಯಿಂದ ನನ್ನನ್ನು ಶರಣುಹೊಂದಿರುವನು.

ಅಯಂ ಚ ಯಜ್ಞೋಽಗರ್ವೋಽಸೌ ಸಗರ್ವೋ ಭವತಾನಘ ।
ಶಾಸಿತವ್ಯೋ ವಿರಿಂಚಸ್ಯ ಧಾರಣೀಯಂ ಶಿರಸ್ತ್ವಯಾ ॥ ೬೨ ॥

ಬ್ರಹ್ಮಹತ್ಯಾಪನೋದಾರ್ಥಂ ವ್ರತಂ ಲೋಕೇ ಪ್ರದರ್ಶಯನ್ ।
ಚರಸ್ವ ಸತತಂ ಭಿಕ್ಷಾಂ ಸಂಸ್ಥಾಪಯ ಸುರದ್ವಿಜಾನ್ ॥ ೬೩ ॥

ಇತ್ಯೇತದುಕ್ತ್ವಾ ವಚನಂ ಭಗವಾನ್ ಪರಮೇಶ್ವರಮ್ ।
ಸ್ಥಾನಂ ಸ್ವಾಭಾವಿಕಂ ದಿವ್ಯಂ ಯಯೌ ತತ್ಪರಮಂ ಪದಮ್ ॥ ೬೪ ॥

ತತಃ ಸ ಭಗವಾನೀಶಃ ಕಪರ್ದೀ ನೀಲಲೋಹಿತಃ ।
ಗ್ರಾಹಯಾಮಾಸ ವದನಂ ಬ್ರಹ್ಮಣಃ ಕಾಲಭೈರವಮ್ ॥ ೬೫ ॥

---

೬೨. ಮತ್ತು ಈ ಯಜ್ಞಮೂರ್ತಿಯು ಗರ್ವರಹಿತನಾಗಿರುವನು. ನಿಷ್ಕಳಂಕನೆ ! ಗರ್ವಿಷ್ಠನಾದವನು ನಿನ್ನಿಂದ ಶಿಕ್ಷಿಸಲ್ಪಡಬೇಕಾದವನು. ಆದುದರಿಂದ ಬ್ರಹ್ಮದೇವನ ಶಿರವು ನಿನ್ನಿಂದ ಧರಿಸಲ್ಪಡಬೇಕು.

೬೩. ಲೋಕದಲ್ಲಿ ಬ್ರಹ್ಮಹತ್ಯಾ ಮಹಾಪಾತಕವನ್ನು ಕಳೆದುಕೊಳ್ಳಲು ಮಾಡಬೇಕಾದ ವ್ರತವನ್ನು ತೋರಿಸುತ್ತಾ ಈ ಮೂಲಕವಾಗಿ ದೇವ ಬ್ರಾಹ್ಮಣರನ್ನು ಸ್ಥಿರಗೊಳಿಸಲು ನೀನು ಭಿಕ್ಷಾಟನೆಯನ್ನು ಮಾಡು.

೬೪. ಪರಮೇಶ್ವರನನ್ನು ಕುರಿತು ಪೂಜ್ಯನಾದ ಪರಮಾತ್ಮನು ಇಷ್ಟು ಮಾತುಗಳನ್ನು ಹೇಳಿ ದಿವ್ಯವೂ ಸ್ವಾಭಾವಿಕವೂ ಮತ್ತು ತನ್ನ ಸ್ಥಾನವೂ ಆದ ಪರಮಪದಕ್ಕೆ ತೆರಳಿದನು.

೬೫. ತರುವಾಯ ಜಟಾಜೂಟಶೋಭಿತನೂ, ನೀಲಲೋಹಿತವರ್ಣಗಳಿಂದ ಅಲಂಕೃತನೂ ಮತ್ತು ಪರಮಪೂಜ್ಯನೂ ಆದ ಶಿವನು ಕಾಲಭೈರವ ಮೂರ್ತಿಯಿಂದ ಬ್ರಹ್ಮನ ಶಿರವನ್ನು ತೆಗೆಸಿಕೊಂಡನು.

ಚರ ತ್ವಂ ಪಾಪನಾಶಾರ್ಥಂ ವ್ರತಂ ಲೋಕೇ ಹಿತಾವಹಮ್ ।
ಕಪಾಲಹಸ್ತೋ ಭಗವಾನ್ ಭಿಕ್ಷಾಂ ಗೃಹ್ಣಾತು ಸರ್ವತಃ ॥ ೩೬ ॥

ಉಕ್ತ್ವೈವಂ ಪ್ರಾಹಿಣೋತ್ಕನ್ಯಾಂ ಬ್ರಹ್ಮಹತ್ಯೇತಿ ವಿಶ್ರುತಾಮ್ ।
ದಂಷ್ಟ್ರಾಕರಾಲವದನಾಂ ಜ್ವಾಲಾಮಾಲಾವಿಭೂಷಣಾಮ್ ॥ ೩೭ ॥

ಯಾವದ್ವಾರಾಣಸೀಂ ದಿವ್ಯಾಂ ಪುರೀಮೇಷ ಗಮಿಷ್ಯತಿ ।
ತಾವದ್ವಿಭೀಷಣಾಕಾರಾ ಹ್ಯನುಗಚ್ಛ ತ್ರಿಶೂಲಿನಮ್ ॥ ೩೮ ॥

ಏವಮಾಭಾಷ್ಯ ಕಾಲಾಗ್ನಿಂ ಪ್ರಾಹ ಲೋಕಮಹೇಶ್ವರಮ್ ।
ಅಟಸ್ವ ಲೋಕಾನಖಿಲಾನ್ ಭೈಕ್ಷಾರ್ಥೀ ಮನ್ನಿಯೋಗತಃ ॥ ೩೯ ॥

---

೩೬. ಲೋಕಗಳಿಗೆ ಹಿತಕರವಾದ ವ್ರತವನ್ನು ಬ್ರಹ್ಮಹತ್ಯಾಪಾಪವನ್ನು ನಾಶಮಾಡಲೋಸ್ಕರ ಆಚರಿಸು, ಪೂಜ್ಯನಾದ ನೀನು ಬ್ರಹ್ಮಕಪಾಲವನ್ನು ಹಸ್ತದಲ್ಲಿ ಧರಿಸಿ ಎಲ್ಲ ಕಡೆಯಲ್ಲಿಯೂ ಭಿಕ್ಷೆಯನ್ನು ಯಾಚಿಸು.

೩೭. ಹೀಗೆಂದು ಹೇಳಿ ಕೋರೆಹಲ್ಲುಗಳಿಂದ ಕರಾಳವಾದ ಮುಖವುಳ್ಳವಳೂ, ಜ್ವಾಲೆಗಳ ಪಂಕ್ತಿಗಳಿಂದ ಅಲಂಕೃತಳೂ ಮತ್ತು ಬ್ರಹ್ಮಹತ್ಯಾ ಎಂಬ ನಾಮಾಂಕನದಿಂದ ಕೂಡಿದವಳೂ ಆದ ಕನ್ಯೆಯನ್ನು ಪ್ರೇರೇಪಿಸಿದನು.

೩೮. ತ್ರಿಶೂಲಾಯುಧಧಾರಿಯಾದ ಈ ರುದ್ರಮೂರ್ತಿಯು ದಿವ್ಯವಾದ ವಾರಾಣಸೀ ಎಂಬ ಪುರವನ್ನು ಹೊಂದುವವರೆಗೆ ನೀನು ಭೀಷಣವಾದ ಆಕಾರಗಳಿಂದ ಕೂಡಿ ಇವನನ್ನು ಹಿಂಬಾಲಿಸು.

೩೯. ಬ್ರಹ್ಮಹತ್ಯಾಕನ್ಯೆಗೆ ಹೀಗೆಂದು ಹೇಳಿ ಲೋಕಗಳಿಗೆ ಮಹೇಶ್ವರನಂತೆ ಇರುವ ಕಾಲಾಗ್ನಿಮೂರ್ತಿಯನ್ನು ನೋಡಿ ಹೇಳಿದನು:— ನೀನು ನನ್ನ ಆಜ್ಞಾನುಸಾರವಾಗಿ ಭಿಕ್ಷಾರ್ಥಿಯಾಗಿ ಸರ್ವಲೋಕಗಳನ್ನು ಸಂಚರಿಸು.

ಯದಾ ದ್ರಕ್ಷ್ಯಸಿ ದೇವೇಶಂ ನಾರಾಯಣಮನಾಮಯಮ್ ।
ತದಾಸೌ ವಕ್ಷ್ಯತಿ ಸ್ಪಷ್ಟಮುಪಾಯಂ ಪಾಪಶೋಧನಮ್ ॥ ೭೦ ॥

ಸ ದೇವದೇವತಾವಾಕ್ಯಮಾಕರ್ಣ್ಯ ಭಗವಾನ್ ಹರಃ ।
ಕಪಾಲಪಾಣಿರ್ವಿಶ್ವಾತ್ಮಾ ಚಚಾರ ಭುವನತ್ರಯಮ್ ॥ ೭೧ ॥

ಆಸ್ಥಾಯ ವಿಕೃತಂ ವೇಷಂ ದೀಪ್ಯಮಾನಂ ಸ್ವತೇಜಸಾ ।
ಶ್ರೀಮತ್ಪವಿತ್ರಂ ರುಚಿರಂ ಲೋಚನತ್ರಯಸಂಯುತಮ್ ॥ ೭೨ ॥

ಸಹಸ್ರಸೂರ್ಯಪ್ರತಿಮಂ ಸಿದ್ಧೈಃ ಪ್ರಮಥಪುಂಗವೈಃ ।
ಭಾತಿ ಕಾಲಾಗ್ನಿನಯನೋ ಮಹಾದೇವಃ ಸಮಾವೃತಃ ॥ ೭೩ ॥

---

೭೦. ಹೀಗೆ ಸುತ್ತುತ್ತಲಿರಲು ನಿರಾತಂಕನಾದ ಮತ್ತು ದೇವೇಶನಾದ ನಾರಾಯಣನನ್ನು ನೀನು ಯಾವಾಗ ನೋಡುವೆಯೋ, ಆಗ ಪಾಪಶೋಧಕವಾದ ಒಂದು ಉಪಾಯವನ್ನು ನಾರಾಯಣನು ನಿನಗೆ ಸ್ಪಷ್ಟವಾಗಿ ಉಪದೇಶಿಸುವನು.

೭೧. ದೇವಾಧಿದೇವನಾದ ಪರಮಾತ್ಮನ ಈ ವಾಕ್ಯವನ್ನು ಕೇಳಿ ಪೂಜ್ಯನೂ ವಿಶ್ವರೂಪಿಯೂ ಆದ ಈಶ್ವರನು ಪಾಣಿಯಲ್ಲಿ ಕಪಾಲವನ್ನು ಧರಿಸಿ, ಭಿಕ್ಷೆಗಾಗಿ ಮೂರುಲೋಕಗಳನ್ನು ಸುತ್ತಲಾರಂಭಿಸಿದನು.

೭೨. ಮತ್ತು ತನ್ನ ತೇಜಃಪುಂಜದಿಂದ ಪ್ರಕಾಶಿಸುವ, ಕಾಂತಿಯುಕ್ತವಾದ, ಪವಿತ್ರವಾದ, ಸುಂದರವಾದ, ಮೂರು ನೇತ್ರಗಳಿಂದ ಅಲಂಕರಿಸಲ್ಪಟ್ಟಿರುವ ಮತ್ತು ಲೋಕವಿಲಕ್ಷಣವಾದ ವೇಷವನ್ನು ಧರಿಸಿ ಲೋಕಗಳಲ್ಲಿ ಸಂಚರಿಸಿದನು.

೭೩. ಸಿದ್ಧರಿಂದಲೂ ಪ್ರಮಥಗಣಗಳಿಂದಲೂ ಸುತ್ತಲ್ಪಟ್ಟಿರುವವನೂ ಲಲಾಟ ನೇತ್ರದಲ್ಲಿ ಕಾಲಾಗ್ನಿಯನ್ನು ಧರಿಸಿದವನೂ ಆದ ಮಹಾದೇವನು ಸಾವಿರಾರು ಸೂರ್ಯಬಿಂಬಗಳು ಸೇರಿದಂತೆ ಪ್ರಕಾಶಿಸುತ್ತಿದ್ದನು.

ಪೀತ್ವಾ ತದಮೃತಂ ದಿವ್ಯಮಾನಂದಂ ಪರಮೇಷ್ಠಿನಃ ।
ಲೀಲಾವಿಲಾಸಬಹುಲೋ ಲೋಕಾನಾಗಚ್ಛತೀಶ್ವರಃ ॥ ೭೪ ॥

ತಂ ದೃಷ್ಟ್ವಾ ಕಾಲವದನಂ ಶಂಕರಂ ಕಾಲಭೈರವಮ್ ।
ರೂಪಲಾವಣ್ಯಸಂಪನ್ನಂ ನಾರೀಕುಲಮಗಾದನು ॥ ೭೫ ॥

ಗಾಯಂತಿ ಗೀತೈರ್ವಿವಿಧೈರ್ನೃತ್ಯಂತಿ ಪುರತಃ ಪ್ರಭೋಃ ।
ಸಸ್ಮಿತಂ ಪ್ರೇಕ್ಷ್ಯ ವದನಂ ಚಕ್ರುರ್ಭ್ರೂಭಂಗಮೇವ ಚ ॥ ೭೬ ॥

ಸ ದೇವದಾನವಾದೀನಾಂ ದೇಶಾನಭ್ಯೇತ್ಯ ಶೂಲಧೃಕ್ ।
ಜಗಾಮ ವಿಷ್ಣೋರ್ಭುವನಂ ಯತ್ರಾಸ್ತೇ ಪುರುಷೋತ್ತಮಃ ॥ ೭೭ ॥

---

೭೪. ಈಶ್ವರನು ದಿವ್ಯವೂ ಅಮೃತವೂ ಆದ ಪರಮಸ್ಥಾನದಲ್ಲಿರುವ ಪರಮಾತ್ಮನ ಆನಂದರಸವನ್ನು ಪಾನಮಾಡುತ್ತ ವಿಲಾಸಪ್ರಾಯವಾದ ಲೀಲಾಜಾಲಗಳಲ್ಲಿ ಮಗ್ನನಾಗಿ ಲೋಕಗಳಲ್ಲಿ ಸಂಚರಿಸಿದನು.

೭೫. ಕರಾಲವಾದ ಮುಖವುಳ್ಳವನೂ ಸುಖಕರನೂ ಮತ್ತು ರೂಪಲಾವಣ್ಯಗಳಿಂದ ಕೂಡಿದವನೂ ಆದ ಕಾಲಭೈರವೇಶ್ವರನ ಮೂರ್ತಿಯನ್ನು ನೋಡಿ, ಮುಗ್ಧರಾದ ಅನೇಕ ಸ್ತ್ರೀಯರು ಅವನನ್ನು ಹಿಂಬಾಲಿಸಿದರು.

೭೬. ನಾರಿಯರು ಪ್ರಭುವಾದ ಕಾಲಭೈರವೇಶ್ವರನ ಮುಂಭಾಗದಲ್ಲಿ ಗೀತೆಗಳನ್ನು ಗಾನಮಾಡುವುದು, ಅದರಂತೆ ನರ್ತನಮಾಡುವುದು ಮತ್ತು ಮಂದಹಾಸದಿಂದ ಕೂಡಿದ ಈಶ್ವರನ ಮುಖವನ್ನು ನೋಡಿ ಭ್ರೂಭಂಗರಚನೆ ಮಾಡುವುದು, ಮುಂತಾದ ಚೇಷ್ಟಾವಿಶೇಷಗಳನ್ನು ಆಚರಿಸಿದರು.

೭೭. ಶೂಲಧಾರಿಯಾದ ಈಶ್ವರನು ದೇವತೆಗಳು, ದಾನವರು ವಾಸಮಾಡುವ ಅನೇಕ ದೇಶಗಳನ್ನು ಸಂಚರಿಸಿ, ಪುರುಷೋತ್ತಮನೆನಿಸಿರುವ ವಿಷ್ಣುವು ವಾಸಮಾಡುತ್ತಲಿರುವ ವಿಷ್ಣುಭುವನಕ್ಕೆ ಬಂದನು.

ಸಂಪ್ರಾಪ್ಯ ದಿವ್ಯಭವನಂ ಶಂಕರೋ ಲೋಕಶಂಕರಃ ।
ಸಹೈವ ಭೂತಪ್ರವರೈಃ ಪ್ರವೇಷ್ಟುಮುಪಚಕ್ರಮೇ ॥ ೭೮ ॥

ಅವಿಜ್ಞಾಯ ಪರಂ ಭಾವಂ ದಿವ್ಯಂ ತತ್ ಪಾರಮೇಶ್ವರಮ್ ।
ನ್ಯವಾರಯತ್ತ್ರಿಶೂಲಾಂಕಂ ದ್ವಾರಪಾಲೋ ಮಹಾಬಲಃ ॥ ೭೯ ॥

ಶಂಖಚಕ್ರಗದಾಪಾಣಿಃ ಪೀತವಾಸಾ ಮಹಾಭುಜಃ ।
ವಿಷ್ವಕ್ಸೇನ ಇತಿ ಖ್ಯಾತೋ ವಿಷ್ಣೋರಂಶಸಮುದ್ಭವಃ ॥ ೮೦ ॥

ಅಥ ತಂ ಶಂಕರಗಣಂ ಯುಯುಧೇ ವಿಷ್ಣುಸಂಭವಃ ।
ಭೀಷಣೋ ಭೈರವಾದೇಶಾತ್ ಕಾಲವೇಗ ಇತಿ ಸ್ಮೃತಃ ॥ ೮೧ ॥

---

೭೮. ಲೋಕಗಳಿಗೆ ಸುಖದಾಯಕನಾದ ಶಂಕರನು ತನ್ನ ಶ್ರೇಷ್ಠವಾದ ಭೂತಸಂಘದೊಡನೆ ದಿವ್ಯವಾದ ವಿಷ್ಣುಭುವನವನ್ನು ಹೊಂದಿ ಅದರೊಳಗೆ ಪ್ರವೇಶ ಮಾಡಲು ಆರಂಭಿಸಿದನು.

೭೯. ಆಗ ಪರಮೇಶ್ವರನ ಮೂರ್ತಿಯಲ್ಲಿ ಅಂತರ್ಗತವಾದ, ಮತ್ತು ದಿವ್ಯ ವಾದ, ಪರಮತತ್ತ್ವವನ್ನು ಅರಿಯದೆ ಅಲ್ಲಿದ್ದ ದ್ವಾರಪಾಲಕನು ಮಹಾಬಲವನ್ನು ತೋರ್ಪಡಿಸಿ, ತ್ರಿಶೂಲಚಿಹ್ನಾಂಕಿತನಾದ ಈಶ್ವರನನ್ನು ನಿರೋಧಿಸಿದನು.

೮೦. ಪಾಣಿಗಳಲ್ಲಿ ಶಂಖ ಚಕ್ರ ಗದೆಗಳನ್ನು ಧರಿಸಿದವನೂ, ಪೀತಾಂಬರ ವನ್ನು ಧರಿಸಿದವನೂ, ನಾಲ್ಕು ಮಹಾ ಭುಜಗಳಿಂದ ಕೂಡಿದವನೂ, ವಿಷ್ಣುವಿನ ಅಂಶದಿಂದ ಜನಿಸಿದವನೂ, ಮತ್ತು ವಿಷ್ವಕ್ಸೇನ ಎಂಬ ನಾಮಾಂಕನವುಳ್ಳವನೂ, ಆದ ದ್ವಾರಪಾಲಕನು ಈಶ್ವರನನ್ನು ನಿಷೇಧಿಸಿದನು.

೮೧. ವಿಷ್ಣುವಿನ ಅಂಶಸಂಭೂತನಾದ ವಿಷ್ವಕ್ಸೇನನು ಶಂಕರನ ಪ್ರಮಥ ಗಣಗಳೊಂದಿಗೆ ಯುದ್ಧ ಮಾಡಲು ಆರಂಭಿಸಿದನು. ಆಗ ಕಾಲವೇಗ ಎಂದು ಕರೆಯಲ್ಪಟ್ಟಿರುವ ಭಯಂಕರವಾದ ಒಂದು ಗಣವು ಭೈರವಮೂರ್ತಿಯ ಆದೇಶ ದಿಂದ ಅವನೊಡನೆ ಯುದ್ಧಕ್ಕೆ ಎದುರಾಗಿ ಬಂದನು.

ವಿಜಿತ್ಯ ತಂ ಕಾಲವೇಗಂ ಕ್ರೋಧಸಂರಕ್ತಲೋಚನಃ ।
ದುದ್ರಾವಾಭಿಮುಖಂ ರುದ್ರಂ ಚಿಕ್ಷೇಪ ಚ ಸುದರ್ಶನಮ್ ॥ ೮೨ ॥

ಅಥ ದೇವೋ ಮಹಾದೇವಸ್ತ್ರಿಪುರಾರಿಸ್ತ್ರಿಶೂಲಭೃತ್ ।
ತಮಾಪತಂತಂ ಸಾವಜ್ಞಮಾಲೋಕಯದಮಿತ್ರಜಿತ್ ॥ ೮೩ ॥

ತದಂತರೇ ಮಹದ್ಭೂತಂ ಯುಗಾಂತದಹನೋಪಮಮ್ ।
ಶೂಲೇನೋರಸಿ ನಿರ್ಭಿದ್ಯ ಪಾತಯಾಮಾಸ ತಂ ಭುವಿ ॥ ೮೪ ॥

ಸ ಶೂಲಾಭಿಹತೋಽತ್ಯರ್ಥಂ ತ್ಯಕ್ತ್ವಾ ಸ್ವಂ ಪರಮಂ ಬಲಮ್ ।
ತತ್ಯಾಜ ಜೀವಿತಂ ದೃಷ್ಟ್ವಾ ಮೃತ್ಯುಂ ವ್ಯಾಧಿಹತಾ ಇವ ॥ ೮೫ ॥

---

೮೨. ಆದರೆ ಕೋಪದಿಂದ ಕೆಂಪಾದ ಕಣ್ಣುಗಳುಳ್ಳ ವಿಷ್ವಕ್ಸೇನನು ಆ ಕಾಲ ವೇಗನನ್ನು ಜಯಿಸಿ ರುದ್ರನಿಗೆ ಎದುರಾಗಿ ಧಾವಿಸಿಬಂದು ತನ್ನಲ್ಲಿದ್ದ ಸುದರ್ಶನ ಎಂಬ ಚಕ್ರವನ್ನು ರುದ್ರಮೂರ್ತಿಯ ಮೇಲೆ ಪ್ರಯೋಗಿಸಿದನು.

೮೩. ತರುವಾಯ ತ್ರಿಪುರಾಸುರಸಂಹಾರಿಯೂ, ತ್ರಿಶೂಲಾಯುಧವನ್ನು ಧರಿಸಿದವನೂ, ಶತ್ರುಗಳನ್ನು ನಿಗ್ರಹಿಸುವವನೂ, ಮತ್ತು ದೇವೋತ್ತಮನೂ ಆದ ಈಶ್ವರನು ಗರ್ವದಿಂದ ಬರುತ್ತಿದ್ದ ಆ ದ್ವಾರಪಾಲಕನನ್ನು ಅವಮಾನಪೂರ್ವಕವಾಗಿ ಕಂಡನು.

೮೪. ಈ ಸಮರಮಧ್ಯದಲ್ಲಿ ಮಹಾ ಭೂತರೂಪನೂ, ಪ್ರಲಯಕಾಲದ ಸಂಹಾರಾಗ್ನಿಯಂತೆ ಇರುವವನೂ, ಆದ ವಿಷ್ಣುಪುರುಷನನ್ನು ಶೂಲದಿಂದ ಹೃದಯ ವನ್ನು ಸೀಳಿ ನೆಲದಮೇಲೆ ಬೀಳುವಂತೆ ಮಾಡಿದನು.

೮೫. ಹೀಗೆ ಶೂಲದಿಂದ ಹೊಡೆಯಲ್ಪಟ್ಟ ಆ ದ್ವಾರಪಾಲನು ತನ್ನ ನೈಜ ವಾದ ಉತ್ತಮ ಬಲದಿಂದ ಶೂನ್ಯನಾಗಿ ತೀವ್ರ ರೋಗಗ್ರಸ್ತರು ಮೃತ್ಯುವನ್ನು ಹೊಂದುವಂತೆ ಮೃತ್ಯುರೂಪನಾದ ಈಶ್ವರನನ್ನು ನೋಡಿ ಜೀವಿತವನ್ನು ತ್ಯಜಿಸಿ ದನು.

ನಿಹತ್ಯ ವಿಷ್ಣುಪುರುಷಂ ಸಾರ್ಧಂ ಪ್ರಮಥಪುಂಗವೈಃ ।
ವಿವೇಶ ಚಾಂತರಗೃಹಂ ಸಮಾದಾಯ ಕಲೇವರಮ್ ॥ ೮೬ ॥

ವೀಕ್ಷ್ಯ ತಂ ಜಗತೋ ಹೇತುಮೀಶ್ವರಂ ಭಗವಾನ್ ಹರಿಃ ।
ಶಿರಾಂ ಲಲಾಟಾತ್ ಸಂಭಿದ್ಯ ರಕ್ತಧಾರಾಮಪಾತಯತ್ ॥ ೮೭ ॥

ಗೃಹಾಣ ಭಿಕ್ಷಾಂ ಭಗವನ್ ಮದೀಯಾಮಮಿತದ್ಯುತೇ ।
ನ ವಿದ್ಯತೇಽನ್ಯಾ ಹ್ಯುಚಿತಾ ತವ ತ್ರಿಪುರಮರ್ದನ ॥ ೮೮ ॥

ನ ಸಂಪೂರ್ಣಂ ಕಪಾಲಂ ತದ್ಬ್ರಹ್ಮಣಃ ಪರಮೇಷ್ಠಿನಃ ।
ದಿವ್ಯಂ ವರ್ಷಸಹಸ್ರಂ ತು ಸಾ ಚ ಧಾರಾ ಪ್ರವಾಹಿತಾ ॥ ೮೯ ॥

---

೮೬. ಹೀಗೆ ವಿಷ್ಣುವಿನ ಪುರುಷನನ್ನು ಸಂಹರಿಸಿ ತನ್ನ ಉತ್ತಮಪರಿವಾರ ಸ್ವರೂಪರಾದ ಪ್ರಥಮಗಣಗಳೊಡನೆ ಆ ದ್ವಾರಪಾಲನ ಕಳೇಬರವನ್ನು ತೆಗೆದು ಕೊಂಡು ಗೃಹದ ಅಭ್ಯಂತರಭಾಗವನ್ನು ಪ್ರವೇಶಮಾಡಿದನು.

೮೭. ಅಲ್ಲಿ ಪೂಜ್ಯನಾದ ನಾರಾಯಣನು ಜಗತ್ತಿನ ಉತ್ಪತ್ತಿಗೆ ಕಾರಣನಾದ ಆ ಪರಮೇಶ್ವರನನ್ನು ಕಂಡು ಲಲಾಟದಲ್ಲಿ ಒಂದು ಅಸ್ಥಿಯನ್ನು ಭೇದಿಸಿ ಅದರಿಂದ ರಕ್ತದ ಧಾರೆಯನ್ನು ಪ್ರವಹಿಸುವಂತೆ ಮಾಡಿದನು.

೮೮. ಅಪರಿಮಿತವಾದ ತೇಜಃಪುಂಜದಿಂದ ಕೂಡಿದ ಮತ್ತು ಪೂಜ್ಯನಾದ ಈಶ್ವರನೆ ! ನನ್ನ ಈ ಭಿಕ್ಷೆಯನ್ನು ತೆಗೆದುಕೊ, ತ್ರಿಪುರಾಸುರರನ್ನು ಮರ್ದಿಸಿದವನೆ ! ನಿನಗೆ ರಕ್ತಧಾರೆಗಿಂತ ಬೇರೆಯಾದ ಉಚಿತವಾದ ಮತ್ತೊಂದು ಭಿಕ್ಷಾದ್ರವ್ಯವು ಇಲ್ಲ.

೮೯. ಆ ರಕ್ತಧಾರೆಯು ದಿವ್ಯಕಾಲಪ್ರಮಾಣದಂತೆ ಸಹಸ್ರಾರು ವರ್ಷಗಳ ವರೆಗೆ ಪ್ರವಹಿಸಿತು. ಆದರೂ ಶಂಕರನು ಧರಿಸಿದ ಆ ಬ್ರಹ್ಮಕಪಾಲವು ಪರಿಪೂರ್ಣ ವಾಗಲಿಲ್ಲ.

ಅಥಾಬ್ರವೀತ್ ಕಾಲರುದ್ರಂ ಹರಿರ್ನಾರಾಯಣಃ ಪ್ರಭುಃ ।
ಸಂಸ್ತೂಯ ವಿವಿಧೈರ್ಭಾವೈರ್ಬಹುಮಾನಪುರಃಸರಮ್ ॥ ೯೦ ॥

ಕಿಮರ್ಥಮೇತದ್ವದನಂ ಬ್ರಹ್ಮಣೋ ಭವತಾ ಧೃತಮ್ ।
ಪ್ರೋವಾಚ ವೃತ್ತಮಖಿಲಂ ದೇವದೇವೋ ಮಹೇಶ್ವರಃ ॥ ೯೧ ॥

ಸಮಾಹೂಯ ಹೃಷೀಕೇಶೋ ಬ್ರಹ್ಮಹತ್ಯಾಮಥಾಚ್ಯುತಃ ।
ಪ್ರಾರ್ಥಯಾಮಾಸ ಭಗವಾನ್ ವಿಮುಂಚೇತಿ ತ್ರಿಶೂಲಿನಮ್ ॥ ೯೨ ॥

ನ ತತ್ಯಾಜಾಥ ಸಾ ಪಾರ್ಶ್ವಂ ವ್ಯಾಹೃತಾಪಿ ಮುರಾರಿಣಾ ।
ಚಿರಂ ಧ್ಯಾತ್ವಾ ಜಗದ್ಯೋನಿಂ ಶಂಕರಂ ಪ್ರಾಹ ಸರ್ವವಿತ್ ॥ ೯೩ ॥

---

೯೦. ಅನಂತರದಲ್ಲಿ ಜಲರಾಶಿಯಲ್ಲಿ ವಾಸಮಾಡುವವನೂ ಸರ್ವ ಸಮರ್ಥನೂ ಆದ ವಿಷ್ಣುವು ನಾನಾವಿಧವಾದ ಭಾವನೆಗಳಿಂದ ಗೌರವಪ್ರದರ್ಶನ ಪೂರ್ವಕವಾಗಿ ಕಾಲರುದ್ರನನ್ನು ಸ್ತುತಿಸಿ ಈ ರೀತಿ ಹೇಳಿದನು.

೯೧. ನಿನ್ನಿಂದ ಬ್ರಹ್ಮದೇವನ ಈ ಕಪಾಲವು ಏಕೆ ಧರಿಸಲ್ಪಟ್ಟಿದೆ ? ಎಂದು ವಿಷ್ಣುವು ಕೇಳಲು ದೇವತೆಗಳಿಗೆ ದೇವಾತಾರೂಪಿಯಾದ ಮಹೇಶ್ವರನು ಬ್ರಹ್ಮಕ ಪಾಲ ಪ್ರಾಪ್ತಿಯಾದ ಸರ್ವವೃತ್ತಾಂತವನ್ನು ಹೇಳಿದನು.

೯೨. ಆಗ ಇಂದ್ರಿಯಗಳಿಗೆ ಪ್ರೇರಕನೂ, ನಾಶರಹಿತನೂ ಆದ ವಿಷ್ಣುವು ಬ್ರಹ್ಮಹತ್ಯೆಯನ್ನು ಸಂಬೋಧಿಸಿ ತ್ರಿಶೂಲಧರನಾದ ಈಶ್ವರನನ್ನು ತ್ಯಜಿಸು ಎಂದು ಪ್ರಾರ್ಥನೆ ಮಾಡಿಕೊಂಡನು.

೯೩. ಆಗ ಮುರಾಸುರ ಸಂಹಾರಿಯಾದ ವಿಷ್ಣುವಿನಿಂದ ಆಜ್ಞಾಪಿಸಲ್ಪಟ್ಟರೂ ಬ್ರಹ್ಮಹತ್ಯೆಯು ಶಿವನ ಪಾರ್ಶ್ವವನ್ನು ಬಿಡಲಿಲ್ಲ. ಆಗ ಸರ್ವಜ್ಞನಾದ ನಾರಾಯಣನು ಚಿರಕಾಲದ ವರೆಗೆ ಧ್ಯಾನಿಸಿ ಜಗತ್ಕಾರಣನಾದ ಈಶ್ವರನನ್ನು ಕುರಿತು ಹೇಳಿದನು.

ವ್ರಜಸ್ವ ದಿವ್ಯಾಂ ಭಗವನ್ ಪುರೀಂ ವಾರಾಣಸೀಂ ಶುಭಾಮ್ ।
ಯತ್ರಾಖಿಲಜಗದ್ದೋಷಾನ್ ಕ್ಷಿಪ್ರಂ ನಾಶಯತೀಶ್ವರಃ ॥ ೯೪ ॥

ತತಃ ಸರ್ವಾಣಿ ಭೂತಾನಿ ತೀರ್ಥಾನ್ಯಾಯತನಾನಿ ಚ ।
ಜಗಾಮ ಲೀಲಯಾ ದೇವೋ ಲೋಕಾನಾಂ ಹಿತಕಾಮ್ಯಯಾ ॥ ೯೫ ॥

ಸಂಸ್ತೂಯಮಾನಃ ಪ್ರಮಥೈರ್ಮಹಾಯೋಗೇರಿತಸ್ತತಃ ।
ನೃತ್ಯಮಾನೋ ಮಹಾಯೋಗೀ ಹಸ್ತನ್ಯಸ್ತಕಲೇಬರಃ ॥ ೯೬ ॥

ತಮಭ್ಯಧಾವದ್ಭಗವಾನ್ ಹರಿರ್ನಾರಾಯಣಃ ಪ್ರಭುಃ ।
ಸಮಾಸ್ಥಾಯ ಪರಂ ರೂಪಂ ನೃತ್ಯದರ್ಶನಲಾಲಸಃ ॥ ೯೭ ॥

---

೯೪. ಭಗವಂತನಾದ ಈಶ್ವರನೇ ! ಮಂಗಳಕರವೂ ದಿವ್ಯವೂ ಮತ್ತು ವಾರಾಣಸಿ ಎಂದು ಪ್ರಸಿದ್ಧವೂ ಆದ ನಗರಕ್ಕೆ ಹೋಗು. ಅಲ್ಲಿ ಸರ್ವೇಶ್ವರನು ಸಮಸ್ತ ಜಗತ್ತಿನಲ್ಲಿ ಸಂಭವಿಸಿದ ದೋಷಗಳನ್ನು ಕ್ಷಿಪ್ರದಲ್ಲಿ ನಾಶಮಾಡುವನು.

೯೫. ಅನಂತರದಲ್ಲಿ ಶಂಕರನು ಲೋಕಗಳಿಗೆ ಹಿತವನ್ನು ಉಂಟುಮಾಡುವ ಸಂಕಲ್ಪದಿಂದ ಸಮಸ್ತ ಭೂತಗಳು ವಾಸಮಾಡುವ ಅನೇಕ ತೀರ್ಥಗಳನ್ನೂ ದೇವಾಲಯಗಳನ್ನೂ ಕುರಿತು ಲೀಲೆಯಿಂದ ಸಂಚಾರಮಾಡಿದನು.

೯೬. ಮತ್ತು ಪ್ರಮಥಗಣಳಿಂದ ಸ್ತುತಿಸಲ್ಪಡುವವನೂ, ಮಹಾಯೋಗಿಶ್ವರರಿಂದ ವಂದಿಸಲ್ಪಟ್ಟವನೂ, ಮತ್ತು ಹಸ್ತದಲ್ಲಿ ಧರಿಸಿದ ಕಳೇಬರವುಳ್ಳವನೂ ಆದ ಮಹಾಯೋಗಿಯಾದ ಈಶ್ವರನು ನರ್ತನಮಾಡುತ್ತ ಸಂಚಾರಮಾಡಿದನು.

೯೭. ಆಗ ಷಡ್ಗುಣ್ಯೈಶ್ವರ್ಯಸಂಪನ್ನನೂ, ಸರ್ವಪಾಪಭಂಜಕನೂ, ಮತ್ತು ಸರ್ವೇಶ್ವರನೂ ಆದ ನಾರಾಯಣನು ಶಂಕರನ ನೃತ್ಯಲೀಲೆಯನ್ನು ನೋಡಬೇಕೆಂಬ ಸಂಕಲ್ಪವುಳ್ಳವನಾಗಿ ಉತ್ತಮವಾದ ಮೂರ್ತಿಯನ್ನು ಧರಿಸಿ ಅವನನ್ನು ಹಿಂಬಾಲಿಸಿದನು.

ನಿರೀಕ್ಷಮಾಣೋ ಗೋವಿಂದಂ ವೃಷೇಂದ್ರಾಂಕಿತಶಾಸನಃ ।
ಸಸ್ಮಿತೋಽನಂತಯೋಗಾತ್ಮಾ ನೃತ್ಯತಿ ಸ್ಮ ಪುನಃ ಪುನಃ ॥ ೯೮ ॥

ಅನು ಚಾನುಚರೋ ರುದ್ರಂ ಸ ಹರಿರ್ಧರ್ಮವಾಹನಃ ।
ಭೇಜೇ ಮಹಾದೇವಪುರೀಂ ವಾರಾಣಸೀತಿ ವಿಶ್ರುತಾಮ್ ॥ ೯೯ ॥

ಪ್ರವಿಷ್ಟಮಾತ್ರೇ ವಿಶ್ವೇಶೇ ಬ್ರಹ್ಮಹತ್ಯಾ ಕಪರ್ದಿನಿ ।
ಹಾ ಹೇತ್ಯುಕ್ತ್ವಾ ಸನಾದಂ ವೈ ಪಾತಾಳಂ ಪ್ರಾಪ ದುಃಖಿತಾ ॥೧೦೦॥

ಪ್ರವಿಶ್ಯ ಪರಮಂ ಸ್ಥಾನಂ ಕಪಾಲಂ ಬ್ರಹ್ಮಣೋ ಹರಃ ।
ಗಣಾನಾಮಗ್ರತೋ ದೇವಃ ಸ್ಥಾಪಯಾಮಾಸ ಶಂಕರಃ ॥ ೧೦೧ ॥

---

೯೮. ವೃಷಭಗಳಲ್ಲಿ ಶ್ರೇಷ್ಠವಾದ ನಂದಿಯಿಂದ ಅಂಕಿತವಾದ ಶಾಸನವುಳ್ಳವನೂ, ಅನೇಕ ಯೋಗೇಶ್ವರಸ್ವರೂಪನೂ ಆದ ಈಶ್ವರನು ವಿಷ್ಣುವನ್ನು ನೋಡಿ, ಅಟ್ಟಹಾಸಮಾಡುತ್ತ ಮತ್ತೆ ಮತ್ತೆ ನೃತ್ಯಮಾಡಿದನು.

೯೯. ಧರ್ಮಪಥವನ್ನು ಸ್ಥಿರಗೊಳಿಸುವ ವಿಷ್ಣುವು ರುದ್ರನನ್ನು ಹಿಂಬಾಲಿಸಿ ಅವನ ಅನುಚರನಾಗಿ ವಾರಾಣಸೀ ಎಂದು ಪ್ರಸಿದ್ಧವಾಗಿರುವ ಮಹಾದೇವನ ಪುರವನ್ನು ಹೊಂದಿದನು.

೧೦೦. ವಿಶ್ವೇಶ್ವರನೂ ಜಟಾಜೂಟವನ್ನು ಧರಿಸಿದವನೂ ಆದ ಪರಮೇಶ್ವರನು ಆ ವಾರಾಣಸಿಗೆ ಪ್ರವೇಶಮಾಡಿದ ಕೂಡಲೆ ಬ್ರಹ್ಮಹತ್ಯೆಯು ಬಹಳ ದುಃಖಪಟ್ಟು ಉಚ್ಚಧ್ವನಿಯಿಂದ ಹಾಹಾಕಾರಮಾಡಿ ಪಾತಾಳಲೋಕವನ್ನು ಹೊಂದಿತು.

೧೦೧. ಸರ್ವಪಾಪಭಂಜಕನೂ ಲೋಕಕ್ಕೆ ಸುಖಕರನೂ ಆದ ಶಂಕರಸ್ವಾಮಿಯು ಉತ್ತಮಕ್ಷೇತ್ರವನ್ನು ಪ್ರವೇಶಿಸಿ ಪ್ರಮಥಗಣಗಳೆದುರಿಗೆ ಆ ಬ್ರಹ್ಮಕಪಾಲವನ್ನು ಕೆಳಗಿರಿಸಿದನು.

ಸ್ಥಾಪಯಿತ್ವಾ ಮಹಾದೇವೋ ದದೌ ತಚ್ಚ ಕಲೇವರಮ್ ।
ಉಕ್ತ್ವಾ ಸಜೀವಮಸ್ತ್ವಿತಿ ವಿಷ್ಣವೇಽಸೌ ಘೃಣಾನಿಧಿಃ ॥ ೧೦೨ ॥

ಯೇ ಸ್ಮರಂತಿ ಮಮಾಜಸ್ರಂ ಕಾಪಾಲಂ ವೇಷಮುತ್ತಮಮ್ ।
ತೇಷಾಂ ವಿನಶ್ಯತಿ ಕ್ಷಿಪ್ರಮಿಹಾಮುತ್ರ ಚ ಪಾತಕಮ್ ॥ ೧೦೩ ॥

ಆಗಮ್ಯ ತೀರ್ಥಪ್ರವರೇ ಸ್ನಾನಂ ಕೃತ್ವಾ ವಿಧಾನತಃ ।
ತರ್ಪಯಿತ್ವಾ ಪಿತ್ರೂನ್ ದೇವಾನ್ ಮುಚ್ಯತೇ ಬ್ರಹ್ಮಹತ್ಯಯಾ ॥೧೦೪॥

ಅಶಾಶ್ವತಂ ಜಗಜ್ಜ್ಞಾತ್ವಾ ವ್ರಜಧ್ವಂ ಪರಮಾಂ ಪುರೀಮ್ ।
ದೇಹಾಂತೇ ತತ್ಪರಂ ಜ್ಞಾನಂ ದದಾತಿ ಪರಮಂ ಪದಮ್ ॥ ೧೦೫ ॥

---

೧೦೨. ಕರುಣೆಗೆ ನಿಧಿಯಾದ ಮಹಾದೇವನು ಬ್ರಹ್ಮಕಪಾಲವನ್ನು ಇರಿಸಿ ತಾನು ಧರಿಸಿದ್ದ ಕಳೇಬರವನ್ನು ಸಜೀವವಾಗಲೆಂದು ಹರಸಿ ವಿಷ್ಣುವಿಗೆ ಆ ಕಲೇಬರವನ್ನು ಅರ್ಪಿಸಿದನು.

೧೦೩. ಯಾವ ಮಾನವರು ಉತ್ತಮವಾದ ನನ್ನ ಕಪಾಲಧಾರಿವೇಷವನ್ನು ಸಂತತವಾಗಿ ಭಕ್ತಿಯಿಂದ ಧ್ಯಾನಿಸುವರೊ, ಅವರ ಐಹಿಕ ಮತ್ತು ಪಾರತ್ರಿಕ ಸುಖ ಭೋಗಕ್ಕೆ ಅಡ್ಡಿಮಾಡುವ ಪಾತಕವು ಕ್ಷಿಪ್ರದಲ್ಲಿ ನಾಶಹೊಂದುವುದು.

೧೦೪. ಈ ಕಪಾಲಮೋಚನವೆಂಬ ಉತ್ತಮತೀರ್ಥಕ್ಕೆ ಬಂದು ಯಥಾವಿಧಿಯಾಗಿ ತೀರ್ಥಸ್ನಾನಮಾಡಿ ಪಿತೃಗಳಿಗೂ, ದೇವತೆಗಳಿಗೂ ತರ್ಪಣಾಂಜಲಿಯನ್ನು ಕೊಟ್ಟು ಬ್ರಹ್ಮಹತ್ಯೆಯಿಂದ ಬಿಡುಗಡೆಹೊಂದುವನು.

೧೦೫. ಮುನಿಗಳೆ ! ಈ ಪ್ರಪಂಚವು ಶಾಶ್ವತವಲ್ಲವೆಂದು ತಿಳಿದು ಉತ್ತಮವಾದ ವಾರಾಣಸೀ ಪುರಿಯನ್ನು ಕುರಿತು ನಡೆಯಿರಿ. ಅಲ್ಲಿ ದೇಹತ್ಯಾಗಸಮಯದಲ್ಲಿ ಪರಮೇಶ್ವರನು ಉತ್ತಮವಾದ ಜ್ಞಾನಯೋಗವನ್ನು ಕೊಡುವನು.

ಇತೀದಮುಕ್ತ್ವಾ ಭಗವಾನ್ ಸಮಾಲಿಂಗ್ಯ ಜನಾರ್ದನಮ್ ।
ಸಹೈವ ಪ್ರಮಥೇಶಾನೈಃ ಕ್ಷಣಾದಂತರಧೀಯತ ॥ ೧೦೬ ॥

ಸ ಲಬ್ಧ್ವಾ ಭಗವಾನ್ ಕೃಷ್ಣೋ ವಿಷ್ವಕ್ಸೇನಂ ತ್ರಿಶೂಲಿನಃ ।
ಸ್ವಂ ದೇಶಮಾಗಮತ್ತೂಷ್ಣೀಂ ಗೃಹೀತ್ವಾ ಪರಮಂ ಬುಧಃ ॥ ೧೦೭ ॥

ಏತದ್ವಃ ಕಥಿತಂ ಪುಣ್ಯಂ ಮಹಾಪಾತಕನಾಶನಮ್ ।
ಕಪಾಲಮೋಚನಂ ತೀರ್ಥಂ ಸ್ಥಾಣೋಃ ಪ್ರಿಯಕರಂ ಶುಭಮ್ ॥ ೧೦೮ ॥

ಯ ಇಮಂ ಪಠತೇಽಧ್ಯಾಯಂ ಬ್ರಾಹ್ಮಣಾನಾಂ ಸಮೀಪತಃ ।
ಮಾನಸೈರ್ವಾಚಿಕೈಃ ಪಾಪೈಃ ಕಾಯಿಕೈಶ್ಚ ಪ್ರಮುಚ್ಯತೇ ॥ ೧೦೯ ॥

ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇ
ಚತುರಶೀತಿತಮೋಽಧ್ಯಾಯಃ.

---

೧೦೬. ಷಡ್ಗುಣೈಶ್ವರ್ಯ ಸಂಪನ್ನನಾದ ಶಂಕರನು ಈ ವಚನವನ್ನು ಹೇಳಿ ಜನಾರ್ದನಸ್ವಾಮಿಯಾದ ನಾರಾಯಣನನ್ನು ಪ್ರೀತಿಯಿಂದ ಆಲಿಂಗಿಸಿ ತನ್ನ ಪ್ರಮಥಗಣೋತ್ತಮರ ಪರಿವಾರದೊಡನೆ ಕ್ಷಣಮಾತ್ರದಲ್ಲಿ ಅಂತರ್ಧಾನಹೊಂದಿದನು.

೧೦೭. ತರುವಾಯ ಸರ್ವಜ್ಞನೂ ಪರಮಪೂಜ್ಯನೂ ಆದ ಕೃಷ್ಣನು ತ್ರಿಶೂಲಧರನಾದ ಈಶ್ವರನಿಂದ ವಿಷ್ವಕ್ಸೇನನನ್ನು ತೆಗೆದುಕೊಂಡು ಪ್ರಶಸ್ತವಾದ ತನ್ನ ಸ್ಥಾನಕ್ಕೆ ಸುಮ್ಮನೆ ಪ್ರಯಾಣಮಾಡಿದನು.

೧೦೮. ಮುನಿಗಳೇ ! ಈ ರೀತಿಯಾಗಿ ಪವಿತ್ರವೂ ಮಹಾಪಾತಕಗಳನ್ನು ನಾಶಮಾಡುವುದೂ ಈಶ್ವರನಿಗೆ ಅತ್ಯಂತ ಪ್ರಿಯವಾದುದೂ ಮತ್ತು ಮಂಗಳಮಯವೂ ಆದ ಕಪಾಲಮೋಚನವೆಂಬ ತೀರ್ಥವು ನನ್ನಿಂದ ಹೇಳಲ್ಪಟ್ಟಿದೆ.

೧೦೯. ಬ್ರಾಹ್ಮಣರ ಪವಿತ್ರಸನ್ನಿಧಿಯಲ್ಲಿ ಈ ಅಧ್ಯಾಯವನ್ನು ಯಾವ ಮಾನವನು ಪಾರಾಯಣಮಾಡುವನೊ, ಅವನು ತಾನು ದೇಹ, ವಾಕ್, ಮಾನಸಗಳೆಂಬ ತ್ರಿಕರಣಗಳಿಂದ ಮಾಡಿದ ಪಾಪಗಳಿಂದ ಮುಕ್ತನಾಗುತ್ತಾನೆ.

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ಎಂಭತ್ತನಾಲ್ಕನೆಯ
ಅಧ್ಯಾಯವು ಮುಗಿದುದು.

॥ ಶ್ರೀ ॥

# ಕೂರ್ಮಪುರಾಣಂ



## ಪಂಚಾಶೀತಿತಮೋಽಧ್ಯಾಯಃ.

**ವ್ಯಾಸ ಉವಾಚ :—**

**ಸುರಾಪಸ್ತು ಸುರಾಂ ತಪ್ತಾಮಗ್ನಿವರ್ಣಾಂ ಪಿಬೇತ್ತದಾ ।**
**ನಿರ್ದಗ್ಧಕಾಯಃ ಸ ತಯಾ ಮುಚ್ಯತೇ ಚ ದ್ವಿಜೋತ್ತಮಃ ॥ ೧ ॥**

**ಗೋಮೂತ್ರಮಗ್ನಿವರ್ಣಂ ವಾ ಗೋಶಕೃದ್ರಸಮೇವ ವಾ ।**
**ಪಯೋ ಘೃತಂ ಜಲಂ ವಾಥ ಮುಚ್ಯತೇ ಪಾತಕಾತ್ತತಃ ॥ ೨ ॥**

---

## ಎಂಭತ್ತೈದನೆಯ ಅಧ್ಯಾಯವು

೧. ವ್ಯಾಸಮುನಿಯು ಈ ರೀತಿಯಾಗಿ ಹೇಳಿದನು:— ಸುರಾಪಾನಮಾಡಿರುವ ಮಹಾಪಾತಕಿಯು ಸುರೆಯನ್ನು ಕಾಯಿಸಿ, ಬೆಂಕಿಯ ಕೆಂಡದಂತೆ ಕೆಂಪುವರ್ಣವಾಗಿರುವುದನ್ನು ಕುಡಿಯಬೇಕು. ಆಗ ಅದರಿಂದ ಸುಟ್ಟುಹೋದ ದೇಹವುಳ್ಳ ದ್ವಿಜೋತ್ತಮನು ಆ ಪಾತಕದೋಷದಿಂದ ಶುದ್ಧನಾಗುತ್ತಾನೆ.

೨. ಅಥವಾ ಗೋಮೂತ್ರ, ಗೋಮಯದರಸ, ಕ್ಷೀರ, ಘೃತ, ಮತ್ತು ಜಲಗಳನ್ನಾದರೂ ಹಿಂದೆಹೇಳಿದಂತೆ ಅತ್ಯುಷ್ಣವಾಗಿ ಕಾಯಿಸಿ ಅದನ್ನು ಪಾನಮಾಡುವುದರಿಂದಲಾದರೂ ಸುರಾಪಾನದ ದೋಷದಿಂದ ಮುಕ್ತನಾಗುತ್ತಾನೆ.

ಜಲಾದ್ರ್ರವಾಸಾಃ ಪ್ರಯತೋ ಧ್ಯಾತ್ವಾ ನಾರಾಯಣಂ ಹರಿಮ್ ।
ಬ್ರಹ್ಮಹತ್ಯಾವ್ರತಂ ಚಾಥ ಚರೇತ್ ಪಾಪಪ್ರಶಾಂತಯೇ ॥ ೩ ॥

ಸುವರ್ಣಸ್ತೇಯಕೃದ್ವಿಪ್ರೋ ರಾಜಾನಮಭಿಗಮ್ಯ ತು ।
ಸ್ವಕರ್ಮ ಖ್ಯಾಪಯನ್ ಬ್ರೂಯಾನ್ಮಾಂ ಭವಾನನುಶಾಸ್ತ್ವಿತಿ ॥ ೪ ॥

ಗೃಹೀತ್ವಾ ಮುಸಲಂ ರಾಜಾ ಸಕೃದ್ಧನ್ಯಾತ್ತು ತಂ ಸ್ವಯಮ್ ।
ವಧೇ ತು ಶುದ್ಧ್ಯತೇ ಸ್ತೇನೋ ಬ್ರಾಹ್ಮಣಸ್ತಪಸಾಥ ವಾ ॥ ೫ ॥

ಸ್ಕಂಧೇನಾದಾಯ ಮುಸಲಂ ಲಗುಡಂ ವಾಥ ಖಾದಿರಮ್ ।
ಶಕ್ತಿಂ ಚಾದಾಯ ತೀಕ್ಷ್ಣಾಗ್ರಾಮಾಯಸಂ ದಂಡಮೇವ ವಾ ॥ ೬ ॥

---

೩. ಮತ್ತು ಜಲದಿಂದ ಆದ್ರ್ರವಾದ ವಸ್ತ್ರವನ್ನು ಧರಿಸಿ ಪರಿಶುದ್ಧನಾಗಿ ಜಲರಾಶಿಯನ್ನು ಪರಮಸ್ಥಾನವಾಗಿ ಮಾಡಿಕೊಂಡಿರುವ ಹರಿಯನ್ನು ಧ್ಯಾನಿಸಿ, ಮಹಾಪಾತಕದ ಶಾಂತಿಗೋಸ್ಕರ ಬ್ರಹ್ಮಹತ್ಯೆಗೆ ಹೇಳಿರುವ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

೪. ಸುವರ್ಣಚೌರ್ಯವೆಂಬ ಮಹಾಪಾತಕವನ್ನು ಆಚರಿಸಿದ ವಿಪ್ರನು ರಾಜನ ಸನ್ನಿಧಿಗೆ ಬಂದು ತಾನು ಮಾಡಿದ ಪಾಪವನ್ನು ರಾಜನಿಗೆ ನಿವೇದಿಸಿ " ಇಂತಹ ಪಾತಕಿಯಾದ ನನ್ನನ್ನು ನೀನು ಶಿಕ್ಷಿಸು " ಎಂದು ಕೇಳಿಕೊಳ್ಳಬೇಕು.

೫. ಆಗ ರಾಜನು ತಾನು ಮುಸಲವನ್ನು ತೆಗೆದುಕೊಂಡು ಆ ಚೋರನನ್ನು ಒಂದು ಸಲ ಮಾತ್ರ ಹೊಡೆಯಬೇಕು. ಅದರಿಂದ ವಧಿಸಲ್ಪಟ್ಟ ಚೋರನು ಪಾತಕದಿಂದ ಮುಕ್ತನಾಗುವನು. ಅಥವಾ ವ್ರತ-ನಿಯಮ-ತಪಸ್ಸುಗಳಿಂದಲೂ ಬ್ರಾಹ್ಮಣನು ಶುದ್ಧನಾಗುವನು.

೬. ಹೀಗೆ ಚೋರನು ತನ್ನ ಹೆಗಲಿನಲ್ಲಿ ದಂಡವನ್ನಾಗಲೀ, ಖದಿರ ವೃಕ್ಷದಿಂದ ಮಾಡಿದ ಮುಸಲವನ್ನಾಗಲೀ, ಹರಿತವಾದ ಅಗ್ರದಿಂದ ಕೂಡಿದ ಶಕ್ತಿ ಆಯುಧವನ್ನಾಗಲೀ, ಇಟ್ಟುಕೊಂಡು ರಾಜನ ಸಮೀಪಕ್ಕೆ ಬರಬೇಕು.

ರಾಜಾ ತೇನ ಚ ಗಂತವ್ಯೋ ಮುಕ್ತಕೇಶೇನ ಧಾವತಾ ।
ಆಚಕ್ಷಾಣೇನ ತತ್ಪಾಪಮೇತತ್ಕರ್ಮಾಸ್ಮಿ ಶಾಧಿ ಮಾಮ್ ॥ ೭ ॥

ಶಾಸನಾದ್ವಾ ವಿಮೋಕ್ಷಾದ್ವಾ ಸ್ತೇನಃ ಸ್ತೇಯಾದ್ವಿಮುಚ್ಯತೇ ।
ಅಶಾಸಿತ್ವಾ ತು ತಂ ರಾಜಾ ಸ್ತೇನಸ್ಯಾಪ್ನೋತಿ ಕಿಲ್ಬಿಷಮ್ ॥ ೮ ॥

ತಪಸಾಪನೋತ್ತುಮಿಚ್ಛಂಸ್ತು ಸುವರ್ಣಸ್ತೇಯಜಂ ಮಲಮ್ ।
ಚೀರವಾಸಾ ದ್ವಿಜೋಽರಣ್ಯೇ ಚರೇದ್ಬ್ರಹ್ಮಹಣೋ ವ್ರತಮ್ ॥ ೯ ॥

ಸ್ನಾತ್ವಾಶ್ವಮೇಧಾವಭೃಥೇ ಪೂತಃ ಸ್ಯಾದಥವಾ ದ್ವಿಜಃ ।
ಪ್ರದದ್ಯಾದ್ವಾಥ ವಿಪ್ರೇಭ್ಯಃ ಸ್ವಾತ್ಮತುಲ್ಯಂ ಹಿರಣ್ಯಕಮ್ ॥ ೧೦ ॥

---

೭. "ನಾನು ಇಂತಹ ನಿಂದಿತಕರ್ಮವನ್ನು ಮಾಡಿರುವೆನು. ನನ್ನನ್ನು ದಂಡಿಸು" ಹೀಗೆಂದು ಚೋರನು ತಾನು ಮಾಡಿದ ಮಹಾಪಾತಕವನ್ನು ಹೇಳಿಕೊಳ್ಳುತ್ತ ಕೇಶಗಳನ್ನು ಬಿಚ್ಚಿಹಾಕಿಕೊಂಡು ಓಡಿಬಂದು ರಾಜನನ್ನು ಕೇಳಿಕೊಳ್ಳಬೇಕು.

೮. ಆಗ ರಾಜನು ಆ ಚೋರನನ್ನು ದಂಡಿಸಲಿ, ದಂಡಿಸದೆ ಬಿಡಲಿ, ಚೋರನು ಪಾತಕದಿಂದ ಮುಕ್ತನಾಗುತ್ತಾನೆ. ಆದರೆ ಚೋರನನ್ನು ನಿಗ್ರಹಿಸದೆ ಬಿಟ್ಟ ರಾಜನು ಚೋರನ ಪಾತಕಕ್ಕೆ ಭಾಗಿಯಾಗುತ್ತಾನೆ.

೯. ಸುವರ್ಣಚೌರ್ಯದಿಂದ ಸಂಭವಿಸಿದ ಪಾತಕವನ್ನು ತಪೋಽನುಷ್ಠಾನದಿಂದ ಶೋಧಿಸಲು ಇಷ್ಟವುಳ್ಳ ದ್ವಿಜನು ನಾರುಬಟ್ಟೆಗಳನ್ನು ಧರಿಸಿಕೊಂಡವನಾಗಿ ಅರಣ್ಯದಲ್ಲಿದ್ದು ಬ್ರಹ್ಮಹತ್ಯಾ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

೧೦. ಅಥವಾ ದ್ವಿಜನು ಅಶ್ವಮೇಧಯಾಗಾಂಗವಾದ ಅವಭೃಥಕರ್ಮದಲ್ಲಿ ಸ್ನಾನಮಾಡಿ ಪವಿತ್ರನಾಗುವನು. ಅಥವಾ ತಾನು ಚೌರ್ಯಮಾಡಿದ ಹಿರಣ್ಯಕ್ಕೆ ಸಮಾನವಾದಷ್ಟು ಹಿರಣ್ಯವನ್ನು ವಿಪ್ರರಿಗೆ ದಾನಮಾಡಿ ಶುದ್ಧನಾಗುವನು.

ಚರೇದ್ವಾ ವತ್ಸರಂ ಕೃಚ್ಛ್ರಂ ಬ್ರಹ್ಮಚರ್ಯಪರಾಯಣಃ ।
ಬ್ರಾಹ್ಮಣಃ ಸ್ವರ್ಣಹಾರೀ ತು ತತ್ಪಾಪಸ್ಯಾಪನುತ್ತಯೇ ॥ ೧೧ ॥

ಗುರೋರ್ಭಾರ್ಯಾಂ ಸಮಾಗಮ್ಯ ಬ್ರಾಹ್ಮಣಃ ಕಾಮಮೋಹಿತಃ ।
ಅವಗೂಹೇತ್ ಸ್ತ್ರಿಯಂ ತಪ್ತಾಂ ದೀಪ್ತಾಂ ಕಾರ್ಷ್ಣಾಯಸೀಂ ಕೃತಾಮ್

ಸ್ವಯಂ ವಾ ಶಿಶ್ನವೃಷಣಾವುತ್ಕೃತ್ಯಾಧಾಯ ಚಾಂಜಲೌ ।
ಅಭಿಗಚ್ಛೇದ್ದಕ್ಷಿಣಾಶಾಮಾನಿಪಾತಾದಜಿಹ್ಮಗಃ ॥ ೧೩ ॥

ಗುರ್ವಂಗನಾಗಮಃ ಶುದ್ಧ್ಯೈ ಚರೇದ್ಬ್ರಹ್ಮಹಣೋ ವ್ರತಮ್ ।
ಶಾಖಾಂ ವಾ ಕಂಟಕೋಪೇತಾಂ ಪರಿಷ್ವಜ್ಯಾಥ ವತ್ಸರಮ್ ॥ ೧೪ ॥

---

೧೧. ಅಥವಾ ಸುವರ್ಣಸ್ತೇಯವೆಂಬ ಮಹಾಪಾತಕವನ್ನು ಆಚರಿಸಿದ ಬ್ರಾಹ್ಮಣನು ಆ ಪಾಪದ ನಿವೃತ್ತಿಗೆ ಬ್ರಹ್ಮಚರ್ಯ ನಿಯಮಗಳನ್ನು ಧರಿಸಿ ಒಂದು ವರ್ಷಕಾಲದವರೆಗೆ ಕೃಚ್ಛ್ರವೆಂಬ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

೧೨. ಬ್ರಾಹ್ಮಣನು ಕಾಮವಿಕಾರದಿಂದ ಮೋಹಗೊಂಡವನಾಗಿ ಗುರು ಭಾರ್ಯೆಯ ಸಂಗವನ್ನು ಮಾಡಿದರೆ ಆ ಪಾಪಶಾಂತಿಗೆ ಕಾಯಿಸಿ ಉರಿಯುವಂತೆ ಮಾಡಿದ ಉಕ್ಕಿನ ಸ್ತ್ರೀಪ್ರತಿಕೃತಿಯನ್ನು ಆಲಿಂಗಿಸಬೇಕು.

೧೩. ಅಥವಾ ಸರಳವಾದ ಗಮನವುಳ್ಳವನಾಗಿ ತನ್ನ ಶಿಶ್ನ–ವೃಷಣಗಳನ್ನು ತಾನೇ ಕಿತ್ತು ಅವುಗಳನ್ನು ತನ್ನ ಅಂಜಲಿಯಲ್ಲಿ ಇಟ್ಟುಕೊಂಡು ಕೆಳಗೆ ಉರುಳುವ ವರೆಗೆ ದಕ್ಷಿಣದಿಕ್ಕಿನ ಕಡೆಗೆ ಪ್ರಯಾಣ ಮಾಡಬೇಕು.

೧೪. ಗುರುಪತ್ನೀ ಸಮಾಗಮರೂಪವಾದ ಮಹಾಪಾತಕದಿಂದ ಶುದ್ಧಿಹೊಂದಲು ಬ್ರಹ್ಮಹತ್ಯೆಮಾಡಿದವನಿಗೆ ವಿಹಿತವಾದ ವ್ರತವನ್ನು ಆಚರಿಸಬೇಕು. ಅಥವಾ ಮುಳ್ಳು ಗಳಿಂದ ತುಂಬಿರುವ ಮರದ ಶಾಖೆಯನ್ನು ಆಲಿಂಗಿಸಿಕೊಂಡು ಒಂದು ವರ್ಷಕಾಲ ಶಯನಮಾಡಬೇಕು.

ಅಧಃ ಶಯೀತ ನಿಯತೋ ಮುಚ್ಯತೇ ಗುರುತಲ್ಪಗಃ ।
ಕೃಚ್ಛ್ರಂ ವಾಬ್ದಂ ಚರೇದ್ವಿಪ್ರಶ್ಚೀರವಾಸಾಃ ಸಮಾಹಿತಃ ॥ ೧೫ ॥

ಅಶ್ವಮೇಧಾವಭೃಥಕೇ ಸ್ನಾತ್ವಾ ವಾ ಶುದ್ಧ್ಯತೇ ದ್ವಿಜಃ ।
ಕಾಲೇಽಷ್ಟಮೇ ಚ ಭುಂಜಾನೋ ಬ್ರಹ್ಮಚಾರೀ ಸದಾ ವ್ರತೀ ॥ ೧೬ ॥

ಸ್ನಾನಾಶನಾಭ್ಯಾಂ ವಿಹರಂಸ್ತ್ರಿರಹ್ನೋಽಭ್ಯುಪಯತ್ನತಃ ।
ಅಧಃಶಾಯೀ ತ್ರಿಭಿರ್ವರ್ಷೈಸ್ತದ್ವ್ಯಪೋಹತಿ ಪಾತಕಮ್ ॥ ೧೭ ॥

ಚಾಂದ್ರಾಯಣಾನಿ ವಾ ಕುರ್ಯಾತ್ಪಂಚ ಚತ್ವಾರಿ ವಾ ಪುನಃ ।
ಪತಿತೈಃ ಸಂಪ್ರಯುಕ್ತಾತ್ಮಾ ಅಥ ವಕ್ಷ್ಯಾಮಿ ನಿಷ್ಕೃತಿಮ್ ॥ ೧೮ ॥

---

೧೫ ನಿಯಮಗಳಿಂದ ಕೂಡಿ ಭೂಮಿಯಲ್ಲಿ ಮುಳ್ಳಿನ ಶಾಖಾಲಿಂಗನ ಪೂರ್ವಕವಾಗಿ ಶಯನಮಾಡುವುದರಿಂದ ಗುರುಭಾರ್ಯಾಸಂಗಮಾಡಿದ ಪಾತಕಿಯು ಮುಕ್ತನಾಗುತ್ತಾನೆ ಅಥವಾ ನಿಗ್ರಹಿಸಿದ ಇಂದ್ರಿಯವುಳ್ಳವನೂ ಶಾಂತನೂ ಆಗಿ ನಾರುಬಟ್ಟೆಗಳನ್ನು ಧರಿಸಿ ಒಂದು ಸಂವತ್ಸರಕಾಲ ಕೃಚ್ಛ್ರಪ್ರಾಯಚಿತ್ತವನ್ನು ಮಾಡಬೇಕು.

೧೬. ಅಂತಹ ದ್ವಿಜನು ಅಶ್ವಮೇಧಯಾಗದ ಅವಭೃಥಸ್ನಾನದಿಂದಲೂ ಶುದ್ಧನಾಗುತ್ತಾನೆ. ಮತ್ತು ಸರ್ವಕಾಲಗಳಲ್ಲಿಯೂ ಬ್ರಹ್ಮಚರ್ಯನಿಯಮಂತನೂ, ವ್ರತಾನುಷ್ಠಾನಪರನೂ ಆಗಿ ದಿನದ ಎಂಟನೆಯ ಭಾಗದಲ್ಲಿ ಭೋಜನಮಾಡಬೇಕು.

೧೭. ಪ್ರಯತ್ನಪೂರ್ವಕವಾಗಿ ಒಂದು ದಿನದಲ್ಲಿ ತ್ರಿಷವಣಸ್ನಾನ ಮತ್ತು ನಿಯತಸಮಯದ ಭೋಜನಗಳಿಂದ ವಿಹರಿಸುತ್ತ ಭೂಮಿಶಯನಮಾಡುತ್ತಿದ್ದರೆ ಮೂರು ಸಂವತ್ಸರಗಳಲ್ಲಿ ಆ ಪಾಪವು ನಿವೃತ್ತಿಯಾಗುವುದು.

೧೮. ಮತ್ತು ಐದು ಅಥವಾ ನಾಲ್ಕು ಸಂಖ್ಯೆಯಷ್ಟು ಚಾಂದ್ರಾಯಣ ವ್ರತಗಳನ್ನಾದರೂ ಮತ್ತೆ ಮತ್ತೆ ಅನುಷ್ಠಾನ ಮಾಡಬೇಕು. ಮಹಾಪಾತಕಿಗಳೊಡನೆ ಸಂಗಮಾಡಿದವನೂ ಮಹಾಪಾತಕಿಯಾಗುವುದರಿಂದ ಆ ಸಂಸರ್ಗಪಾತಕದ ಪ್ರಾಯಶ್ಚಿತ್ತವನ್ನು ಇನ್ನು ಮುಂದೆ ಹೇಳುತ್ತೇನೆ.

ಪತಿತೇನ ತು ಸಂಸರ್ಗಂ ಯೋ ಯೇನ ಕುರುತೇ ದ್ವಿಜಃ ।
ಸ ತತ್ಪಾಪಾಪನೋದಾರ್ಥಂ ತಸ್ಯೈವ ವ್ರತಮಾಚರೇತ್ ॥ ೧೯ ॥

ತಪ್ತಕೃಚ್ಛ್ರಂ ಚರೇದ್ವಾಥ ಸಂವತ್ಸರಮತಂದ್ರಿತಃ ।
ಷಾಣ್ಮಾಸಿಕೇ ತು ಸಂಸರ್ಗೇ ಪ್ರಾಯಶ್ಚಿತ್ತಾರ್ಥಮಾಚರೇತ್ ॥ ೨೦ ॥

ಏಭಿರ್ವ್ರತೈರಪೋಹಂತಿ ಮಹಾಪಾತಕಿನೋ ಮಲಮ್ ।
ಪುಣ್ಯತೀರ್ಥಾಭಿಗಮನಾತ್ ಪೃಥಿವ್ಯಾಂ ವಾಥ ನಿಷ್ಕೃತಿಃ ॥ ೨೧ ॥

ಬ್ರಹ್ಮಹತ್ಯಾಂ ಸುರಾಪಾನಂ ಸ್ತೇಯಂ ಗುರ್ವಂಗನಾಗಮಮ್ ।
ಕೃತ್ವಾ ತೈಶ್ಚಾಪಿ ಸಂಸರ್ಗಂ ಬ್ರಾಹ್ಮಣಃ ಕಾಮಚಾರತಃ ॥ ೨೨ ॥

---

೧೯. ಯಾವ ದ್ವಿಜನು ಯಾವ ಮಹಾಪಾತಕದಿಂದ ಪತಿತನಾದವನ ಸಂಸರ್ಗವನ್ನು ಮಾಡುವನೋ ; ಆ ದ್ವಿಜನು ಆ ದ್ವಿಜನ ಆ ಸಂಸರ್ಗದೋಷವನ್ನು ಕಳೆದುಕೊಳ್ಳಲು ಆ ಮಹಾಪಾತಕಕ್ಕೆ ವಿಹಿತವಾದ ಪ್ರಾಯಶ್ಚಿತ್ತವ್ರತವನ್ನು ಆಚರಿಸಬೇಕು.

೨೦. ಪತಿತನೊಡನೆ ಆರುತಿಂಗಳವರೆಗೆ ಸಂಸರ್ಗಮಾಡಿ ಬಂದಿರುವ ಪಾಪವನ್ನು ನಿವೃತ್ತಿಮಾಡಿಕೊಳ್ಳಲು ಒಂದುವರ್ಷದವರೆಗೆ ಸ್ವಲ್ಪಮಾತ್ರವೂ ಆಲಸ್ಯವಿಲ್ಲದಂತೆ ತಪ್ತಕೃಚ್ಛ್ರವೆಂಬ ವ್ರತವನ್ನು ಪ್ರಾಯಶ್ಚಿತ್ತರೂಪವಾಗಿ ಆಚರಿಸಬೇಕು.

೨೧. ಮಹಾಪಾತಕಗಳನ್ನು ಆಚರಿಸಿದ ಪಾಪಿಗಳು ಹಿಂದೆ ಹೇಳಿರುವ ಈ ನಿಯಮಾನುಷ್ಠಾನಗಳಿಂದ ಪಾಪಗಳನ್ನು ಕಳೆದುಕೊಳ್ಳುವರು. ಅಥವಾ ಪೃಥಿವಿಯಲ್ಲಿರುವ ಅನೇಕ ಪುಣ್ಯತೀರ್ಥ-ಕ್ಷೇತ್ರಗಳ ಯಾತ್ರೆಯು ಪಾತಕಗಳಿಗೆ ಪ್ರಾಯಶ್ಚಿತ್ತವಾಗುವುದು.

೨೨. ತನ್ನ ಇಚ್ಛಾವೃತ್ತಿಯಿಂದ ಸ್ವತಂತ್ರನಾಗಿರುವ ಬ್ರಾಹ್ಮಣನು ಬ್ರಹ್ಮಹತ್ಯೆ, ಮದ್ಯಪಾನ, ಸುವರ್ಣಚೌರ್ಯ, ಗುರುಪತ್ನೀಸಂಗ, ಮತ್ತು ಈ ಮಹಾಪಾತಕಗಳನ್ನು ಮಾಡಿರುವವರ ಸಂಸರ್ಗಗಳಿಂದ ದೋಷಿಯಾಗುತ್ತಾನೆ.

ಕುರ್ಯಾದನಶನಂ ವಿಪ್ರಃ ಪುಣ್ಯತೀರ್ಥೇ ಸಮಾಹಿತಃ ।
ಜ್ವಲಂತಂ ವಾ ವಿಶೇದಗ್ನಿಂ ಧ್ಯಾತ್ವಾ ದೇವಂ ಕಪರ್ದಿನಮ್ ॥ ೨೩ ॥

ನ ಹ್ಯನ್ಯಾ ನಿಷ್ಕೃತಿರ್ದೃಷ್ಟಾ ಮುನಿಭಿರ್ಧರ್ಮವಾದಿಭಿಃ ।
ತಸ್ಮಾತ್ ಪುಣ್ಯೇಷು ತೀರ್ಥೇಷು ದಹನ್ ವಾಪಿ ಸ್ವದೇಹಕಮ್ ॥ ೨೪ ॥

ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇ
ಪಂಚಾಶೀತಿತಮೋಽಧ್ಯಾಯಃ.

---

೨೩. ಹೀಗೆ ದೋಷಭಾಗಿಯಾದ ವಿಪ್ರನು ತೀರ್ಥಕ್ಷೇತ್ರದಲ್ಲಿ ಶಾಂತನಾಗಿ ವಾಸಮಾಡಿ ಉಪವಾಸವ್ರತವನ್ನು ಆಚರಿಸಬೇಕು. ಅಥವಾ ಜಟಾಜೂಟಧಾರಿಯಾದ ಮಹೇಶ್ವರನನ್ನು ಧ್ಯಾನಿಸುತ್ತಾ ಜ್ವಲಿಸುತ್ತಿದ್ದ ಅಗ್ನಿಯಲ್ಲಿ ಪ್ರವೇಶಮಾಡಬೇಕು.

೨೪. ಮಹಾ ಪಾತಕಿಗಳಿಗೆ ಆ ಪಾಪದೋಷನಿವೃತ್ತಿಗೆ ಬೇರೊಂದು ವಿಧವಾದ ಪ್ರಾಯಶ್ಚಿತ್ತವು ಧರ್ಮವಾದಿಗಳಾದ ಮುನಿಗಳಿಂದ ಎಲ್ಲಿಯೂ ಬೋಧಿಸಲ್ಪಡಲಿಲ್ಲ. ಆದ್ದರಿಂದ ಪವಿತ್ರ ತೀರ್ಥಭೂಮಿಗಳಲ್ಲಿ ತನ್ನ ದೇಹವನ್ನು ದಹಿಸಿಕೊಂಡಾದರೂ ದೇಹತ್ಯಾಗದಿಂದ ಶುದ್ಧನಾಗಬೇಕು.

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ಎಂಭತ್ತೈದನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಕೂರ್ಮ ಪುರಾಣಂ

---

## ಷಡಶೀತಿತಮೋಽಧ್ಯಾಯಃ.

ವ್ಯಾಸ ಉವಾಚ :—

ಗತ್ವಾ ದುಹಿತರಂ ವಿಪ್ರಃ ಸ್ವಸಾರಂ ವಾ ಸ್ನುಷಾಮಪಿ ।
ಪ್ರವಿಶೇಜ್ಜ್ವಲನಂ ದೀಪ್ತಂ ಮತಿಪೂರ್ವಮಿತಿ ಸ್ಥಿತಿಃ ॥ ೧ ॥

ಮಾತೃಷ್ವಸಾಂ ಮಾತುಲಾನೀಂ ತಥೈವ ಚ ಪಿತೃಷ್ವಸಾಮ್ ।
ಭಾಗಿನೇಯೀಂ ಸಮಾರುಹ್ಯ ಕುರ್ಯಾತ್ ಕೃಚ್ಛ್ರಾತಿಕೃಚ್ಛ್ರಕೌ ॥ ೨ ॥

ಚಾಂದ್ರಾಯಣಂ ಚ ಕುರ್ವೀತ ತಸ್ಯ ಪಾಪಸ್ಯ ಶಾಂತಯೇ ।
ಧ್ಯಾಯನ್ ದೇವಂ ಜಗದ್ಯೋನಿಮನಾದಿನಿಧನಂ ಹರಿಮ್ ॥ ೩ ॥

---

## ಎಂಭತ್ತಾರನೆಯ ಅಧ್ಯಾಯವು

೧. ವ್ಯಾಸಮುನಿಯು ಹೀಗೆಂದು ಮತ್ತೆ ಹೇಳಿದನು:— ಕಾಮುಕನಾದ ವಿಪ್ರನು ಮೋಹಾಧೀನನಾಗಿ ಜ್ಞಾನಪೂರ್ವಕವಾಗಿ ತನ್ನ ಪುತ್ರಿ, ಭಗಿನಿ, ಅಥವಾ ಸೊಸೆ ಇವರ ಸಂಪರ್ಕವನ್ನು ಮಾಡಿದರೆ ಜ್ವಲಿಸುವ ಅಗ್ನಿಯನ್ನು ಪ್ರವೇಶಿಸಬೇಕು ಎಂಬುದು ಶಾಸ್ತ್ರಸಿದ್ಧಾಂತವು.

೨. ಜನನಿಯ ಭಗಿನಿ, ಮಾತುಲನ ಪತ್ನಿ, ಜನಕನ ಭಗಿನಿ ಅಥವಾ ಭಗಿನಿಯಲ್ಲಿ ಹುಟ್ಟಿದಪುತ್ರಿ ಇಂತಹವರಲ್ಲಿ ಕಾಮಸುಖಭೋಗವನ್ನು ಮಾಡಿದ ಪಾಪಿಯು ಕೃಚ್ಛ್ರ ಅತಿಕೃಚ್ಛ್ರಗಳೆಂಬ ಪ್ರಾಯಶ್ಚಿತ್ತವನ್ನು ಮಾಡಬೇಕು.

೩. ಮತ್ತು ಆದಿ-ಅಂತಗಳಿಂದ ವರ್ಜಿತನೂ, ಸಕಲ ಪ್ರಪಂಚಕ್ಕೆ ಮೂಲ ಕಾರಣನೂ ಆದ ವಿಷ್ಣುಪರಮಾತ್ಮನನ್ನು ಧ್ಯಾನಮಾಡುತ್ತ ಆ ಪಾಪದೋಷದ ಶಾಂತಿಗೆ ಚಾಂದ್ರಾಯಣವ್ರತವೆಂಬ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

ಭ್ರಾತೃಭಾರ್ಯಾಂ ಸಮಾರುಹ್ಯ ಕುರ್ಯಾತ್ ತತ್ಪಾಪಶಾಂತಯೇ ।
ಚಾಂದ್ರಾಯಣಾನಿ ಚತ್ವಾರಿ ಪಂಚ ವಾ ಸುಸಮಾಹಿತಃ ॥ ೪ ॥

ಪಿತೃಷ್ವಸ್ರೇಯಿಮಾಂ ಗತ್ವಾ ತು ಸ್ವಸ್ರೀಯಾಂ ಮಾತುರೇವ ಚ ।
ಮಾತುಲಸ್ಯ ಸುತಾಂ ವಾಪಿ ಗತ್ವಾ ಚಾಂದ್ರಾಯಣಂ ಚರೇತ್ ॥ ೫ ॥

ಸಖಿಭಾರ್ಯಾಂ ಸಮಾರುಹ್ಯ ಗತ್ವಾ ಶ್ಯಾಲೀಂ ತಥೈವ ಚ ।
ಅಹೋರಾತ್ರೋಷಿತೋ ಭೂತ್ವಾ ತತಃ ಕೃಚ್ಛ್ರಂ ಸಮಾಚರೇತ್॥ ೬ ॥

ಉದಕ್ಯಾಗಮನೇ ವಿಪ್ರಸ್ತ್ರಿರಾತ್ರೇಣ ವಿಶುದ್ಧ್ಯತಿ ।
ಚಾಂಡಾಲೀಗಮನೇ ಚೈವ ತಪ್ತಕೃಚ್ಛ್ರತ್ರಯಂ ವಿದುಃ ॥ ೭ ॥

---

೪. ಸಹೋದರನ ಪತ್ನಿಯಲ್ಲಿ ಸಂಗಮಾಡಿ ಆ ಪಾಪದಿಂದ ಬಿಡುಗಡೆ ಹೊಂದಲು ಇಷ್ಟವುಳ್ಳ ಮಾನವನು ಅದಕ್ಕೋಸ್ಕರ ಸಮಾಧಾನಚಿತ್ತರಿಂದ ಇದ್ದು ಐದು ಅಥವಾ ನಾಲ್ಕು ಸಂಖ್ಯೆಯಷ್ಟು ಚಾಂದ್ರಾಯಣಗಳನ್ನು ಮಾಡಬೇಕು.

೫. ಹಾಗೆ ಪಿತೃಷ್ವಸೃವಿನಪುತ್ರಿ, ಮಾತೃಷ್ವಸೃವಿನ ಪುತ್ರಿ, ಅಥವಾ ಮಾತುಲನ ಪುತ್ರಿಯರೆಂಬ ಅಗಮ್ಯರಾದ ಬಂಧು ಸ್ತ್ರೀ ಸಂಗಮಾಡಿದ ಪಾಪಶಾಂತಿಗೆ ಚಾಂದ್ರಾಯಣವ್ರತವನ್ನು ಪ್ರಾಯಶ್ಚಿತ್ತರೂಪವಾಗಿ ಆಚರಿಸಬೇಕು.

೬. ಮಿತ್ರನ ಭಾರ್ಯೆ, ಪತ್ನಿಯ ಸಹೋದರಿ, ಇವರ ಸಂಗಮಾಡಿದ ಪಾತಕಿಯು ಒಂದುದಿನ ಪೂರ್ತಿಯಾಗಿ ಉಪವಾಸಮಾಡಿ ಕೃಚ್ಛ್ರಪ್ರಾಯಶ್ಚಿತ್ತಾನುಷ್ಠಾನದಿಂದ ಶುದ್ಧಿಯನ್ನು ಹೊಂದಬೇಕು.

೭. ರಜಸ್ವಲೆಯಾದ ನಾರಿಯಸಂಗದಿಂದ ದೋಷಿಯಾದ ವಿಪ್ರನು ಮೂರು ದಿನ ಪ್ರಾಯಶ್ಚಿತ್ತಾನುಷ್ಠಾನದಿಂದ ಪವಿತ್ರನಾಗುತ್ತಾನೆ. ಚಂಡಾಲ ಸ್ತ್ರೀ ಸಂಗ ಮಾಡಿದರೆ ಮೂರು ತಪ್ತಕೃಚ್ಛ್ರಪ್ರಾಯಶ್ಚಿತ್ತಗಳನ್ನು ಮಾಡಬೇಕೆಂದು ಧರ್ಮಜ್ಞರು ತಿಳಿದಿರುವರು.

ಶುದ್ಧಿಃ ಸಾಂತಪನೇನ ಸ್ಯಾನ್ನಾನ್ಯಥಾ ನಿಷ್ಕೃತಿಃ ಸ್ಮೃತಾ ।
ಮಾತೃಗೋತ್ರಾಂ ಸಮಾರುಹ್ಯ ಸಮಾನಪ್ರವರಾಂ ತಥಾ ॥ ೮ ॥

ಚಾಂದ್ರಾಯಣೇನ ಶುದ್ಧ್ಯೇತ ಪ್ರಯತಾತ್ಮಾ ಸಮಾಹಿತಃ ।
ಬ್ರಾಹ್ಮಣೋ ಬ್ರಾಹ್ಮಣೀಂ ಗತ್ವಾ ಕೃಚ್ಛ್ರಮೇಕಂ ಸಮಾಚರೇತ್ ॥

ಕನ್ಯಕಾಂ ದೂಷಯಿತ್ವಾ ತು ಚರೇಚ್ಚಾಂದ್ರಾಯಣವ್ರತಮ್ ।
ಅಮಾನುಷೀಷು ಪುರುಷ ಉದಕ್ಯಾಯಾಮಯೋನಿಷು ॥ ೧೦ ॥

ರೇತಃ ಸಿಕ್ತ್ವಾ ಜಲೇ ಚೈವ ಕೃಚ್ಛ್ರಂ ಸಾಂತಪನಂ ಚರೇತ್ ।
ವಾರ್ಧಿಕೀಗಮನೇ ವಿಪ್ರಸ್ತ್ರಿರಾತ್ರೇಣ ವಿಶುದ್ಧ್ಯತಿ ॥ ೧೧ ॥

---

೮. ಮತ್ತು ಈ ಅಗಮ್ಯಸ್ತ್ರೀಗಮನ ಪಾತಕದಿಂದ ಶುದ್ಧಿಯು ಸಾಂತಪನ ವೆಂಬ ಪ್ರಾಯಶ್ಚಿತ್ತದಿಂದ ಆಗುವುದೇ ವಿನಹ ಮತ್ತಾವುದರಿಂದಲೂ ಆಗಲಾರ ದೆಂದು ಸ್ಮರಿಸಲ್ಪಟ್ಟಿದೆ. ಜನನಿಯ ಗೋತ್ರದಲ್ಲಿ ಹುಟ್ಟಿದ ಕನ್ಯೆಯು ಮತ್ತು ಸಮಾನ ಪ್ರವರದಲ್ಲಿ ಹುಟ್ಟಿದ ಕನ್ಯೆಯ ಸಂಗವನ್ನು ಮಾಡಬಾರದು.

೯. ಹಾಗೆ ಮಾತೃಗೋತ್ರ, ಸಮಾನಪ್ರವರಗಳಿಂದ ಕೂಡಿದ ಸ್ತ್ರೀಸಂಗಮಾಡಿ ದವನು ಪವಿತ್ರನೂ, ಸಮಾಧಾನಚಿತ್ತನೂ ಆಗಿದ್ದು, ಚಾಂದ್ರಾಯಣ ಪ್ರಾಯಶ್ಚಿತ್ತ ದಿಂದ ಶುದ್ಧಿಹೊಂದುತ್ತಾನೆ. ಬ್ರಾಹ್ಮಣನು ಬ್ರಾಹ್ಮಣಜಾತಿಯ ಅನ್ಯಸ್ತ್ರೀಯಸಂಗ ವನ್ನುಮಾಡಿ ಒಂದು ಕೃಚ್ಛ್ರಪ್ರಾಯಶ್ಚಿತ್ತಾನುಷ್ಠಾನದಿಂದ ಆ ದೋಷದಿಂದ ಮುಕ್ತ ನಾಗುತ್ತಾನೆ.

೧೦. ಋತುಮತಿಯಾಗದಿರುವ ಕನ್ಯಕೆಯನ್ನು ದೂಷಿಸಿದವನು ಚಾಂದ್ರಾ ಯಣವ್ರತ ಪ್ರಾಯಶ್ಚಿತ್ತವನ್ನು ಮಾಡಬೇಕು. ಪುರುಷನು ಮನುಷ್ಯಜಾತಿಗೆ ಸೇರ ದಿರುವ ರಜಸ್ವಲೆಯಾದ ಬೇರೆಜಾತಿ ಸ್ತ್ರೀ ವ್ಯಕ್ತಿಯಲ್ಲಿ ರೇತಃಸೇಚನವನ್ನು ಮಾಡ ಬಾರದು.

೧೧. ಹಾಗೆ ಅನ್ಯಜಾತಿ ಸ್ತ್ರೀ ವ್ಯಕ್ತಿಯಲ್ಲಿಯೂ ಜಲದಲ್ಲಿಯೂ ರೇತ ಸ್ಸನ್ನು ವಿಸರ್ಜನೆಮಾಡಿದವನು ಕೃಚ್ಛ್ರ, ಸಾಂತಪನ ಪ್ರಾಯಶ್ಚಿತ್ತವನ್ನು ಮಾಡಿ ದೋಷಮುಕ್ತನಾಗುತ್ತಾನೆ. ವೇಶ್ಯಾ ಸ್ತ್ರೀ ಸಂಗಮಾಡಿದ ಪಾತಕಿಯು ಮೂರುದಿನ ಪ್ರಾಯಶ್ಚಿತ್ತನಿಯಮಾನುಷ್ಠಾನದಿಂದ ಶುದ್ಧನಾಗುತ್ತಾನೆ.

ಗವಿ ಮೈಥುನಮಾಸೇವ್ಯ ಚರೇಚ್ಚಾಂದ್ರಾಯಣವ್ರತಮ್ ।
ವೇಶ್ಯಾಯಾಂ ಮೈಥುನಂ ಕೃತ್ವಾ ಪ್ರಾಜಾಪತ್ಯಂ ಚರೇದ್ದ್ವಿಜಃ ॥ ೧೨ ॥

ಪತಿತಾಂ ಚ ಸ್ತ್ರಿಯಂ ಗತ್ವಾ ತ್ರಿಭಿಃ ಕೃಚ್ಛ್ರೈರ್ವಿಶುದ್ಧ್ಯತಿ ।
ಪುಲ್ಕಸೀಗಮನೇ ಚೈವ ಕೃಚ್ಛ್ರಂ ಚಾಂದ್ರಾಯಣಂ ಚರೇತ್ ॥ ೧೩ ॥

ನಟೀಂ ಶೈಲೂಷಕೀಂ ಚೈವ ರಜಕೀಂ ವೇಣುಜೀವಿನೀಮ್ ।
ಗತ್ವಾ ಚಾಂದ್ರಾಯಣಂ ಕುರ್ಯಾತ್ತಥಾ ಚರ್ಮೋಪಜೀವಿನೀಮ್ ॥

ಬ್ರಹ್ಮಚಾರೀ ಸ್ತ್ರಿಯಂ ಗಚ್ಛೇತ್ ಕಥಂಚಿತ್ ಕಾಮಮೋಹಿತಃ ।
ಸಪ್ತಾಗಾರಂ ಚರೇದ್ಭೈಕ್ಷಂ ವಸಿತ್ವಾ ಗರ್ದಭಾಜಿನಮ್ ॥ ೧೫ ॥

---

೧೨. ದ್ವಿಜನು ಗೋವ್ಯಕ್ತಿಯಲ್ಲಿ ಮೈಥುನಕರ್ಮವನ್ನು ಆಚರಿಸಿ ಚಾಂದ್ರಾಯಣವ್ರತವನ್ನ ಆಚರಿಸಬೇಕು. ಹಾಗು ವೇಶ್ಯೆಯಲ್ಲಿ ಕಾಮಭೋಗವನ್ನು ಹೊಂದಿದವನು ಪ್ರಾಜಾಪತ್ಯ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

೧೩. ಪತಿತಳಾದ ನಾರಿಯಲ್ಲಿ ರಮಿಸಿದವನು ಮೂರು ಸಂಖ್ಯೆಯ ಕೃಚ್ಛ್ರ ಪ್ರಾಯಶ್ಚಿತ್ತದ ಆಚರಣೆಯಿಂದ ಶುದ್ಧನಾಗುವನು. ಮತ್ತು ಚಂಡಾಲ ಸ್ತ್ರೀ ಸಂಗ ಮಾಡಿದ ಪಾತಕಿಯು ಆ ಪಾಪಶಾಂತಿಗೆ ಕೃಚ್ಛ್ರ ಚಾಂದ್ರಾಯಣ ಗಳನ್ನು ಮಾಡಬೇಕು.

೧೪. ನಟರಜಾತಿಯ ಸ್ತ್ರೀ, ನರ್ತಕೀ, ರಜಕನ ಸ್ತ್ರೀ, ಬಿದಿರಿನ ಕೆಲಸ ಮಾಡುವ ಮೇದರ ಜಾತಿಯಸ್ತ್ರೀ, ಮತ್ತು ಚರ್ಮಕಾರನ ಸ್ತ್ರೀ, ಇವರಲ್ಲಿ ಸಂಗಮಾಡಿರುವವನು ಚಾಂದ್ರಾಯಣಪ್ರಾಯಶ್ಚಿತ್ತವನ್ನು ಮಾಡಬೇಕು.

೧೫. ಬ್ರಹ್ಮಚರ್ಯಾಶ್ರಮದಲ್ಲಿರುವವನು ಕಾಮ ವಿಕಾರಾಧೀನನಾಗಿ ಎಲ್ಲಿಯಾದರೂ ಸ್ತ್ರೀ ಸಂಗವನ್ನುಮಾಡಿದರೆ ಅದಕ್ಕೆ ಪ್ರಾಯಶ್ಚಿತ್ತವಾಗಿ ಗರ್ದಭದ ಚರ್ಮವನ್ನು ಹೊದ್ದುಕೊಂಡು ಏಳುಮನೆಗಳಲ್ಲಿ ಭಿಕ್ಷಾನ್ನವನ್ನು ಬೇಡಿತರಬೇಕು.

ಉಪಸ್ಪೃಶೇತ್ತ್ರಿಷವಣಂ ಸ್ವಪಾಪಂ ಪರಿಕೀರ್ತಯನ್ ।
ಸಂವತ್ಸರೇಣ ಚೈಕೇನ ತಸ್ಮಾತ್ ಪಾಪಾತ್ಪ್ರಮುಚ್ಯತೇ　　॥ ೧೬ ॥

ಬ್ರಹ್ಮಚರ್ಯಾವ್ರತಂ ಚಾಪಿ ಷಣ್ಮಾಸಾನ್ ವಿಚರಂತ್ಯಮಿ ।
ಮುಚ್ಯತೇ ಹ್ಯವಕೀರ್ಣೀ ತು ಬ್ರಾಹ್ಮಣಾನುಮತೇ ಸ್ಥಿತಃ　　॥ ೧೭ ॥

ಸಪ್ತರಾತ್ರಮಕೃತ್ವಾ ತು ಭೈಕ್ಷಚರ್ಯಾಗ್ನಿಪೂಜನಮ್ ।
ರೇತಸಶ್ಚ ಸಮುತ್ಸರ್ಗೇ ಪ್ರಾಯಶ್ಚಿತ್ತಂ ಸಮಾಚರೇತ್　　॥ ೧೮ ॥

ಓಂಕಾರಪೂರ್ವಿಕಾಭಿಸ್ತು ಮಹಾವ್ಯಾಹೃತಿಭಿಃ ಸದಾ ।
ಸಂವತ್ಸರಂ ತು ಭುಂಜಾನೋ ನಕ್ತಂ ಭಿಕ್ಷಾಶನಃ ಶುಚಿಃ　　॥ ೧೯ ॥

---

೧೬. ಮತ್ತು ತನ್ನ ಪಾಪವನ್ನು ಪ್ರಕಾಶವಾಗಿ ಕೀರ್ತಿಸುತ್ತ ತ್ರಿಷವಣಸ್ನಾನ ಮಾಡಿ ಆಚಮನಮಾಡಬೇಕು. ಹೀಗೆ ಒಂದುವರ್ಷಕಾಲ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದರಿಂದ ಆ ಪಾತಕದಿಂದ ಮುಕ್ತನಾಗುತ್ತಾನೆ.

೧೭. ಹಾಗೆ ಪ್ರಾಯಶ್ಚಿತ್ತಾರ್ಹರಾದವರು ಆರುಮಾಸಗಳವರೆಗೆ ಬ್ರಹ್ಮಚರ್ಯ ಆಶ್ರಮಕ್ಕೆ ವಿಹಿತವಾದ ವ್ರತಗಳನ್ನು ಆಚರಿಸಬೇಕು. ಬ್ರಾಹ್ಮಣೋಚಿತವಾದ ಆಚಾರವಂತನಾಗಿ ಅವರಿಗೆ ಪ್ರಿಯನಾಗಿದ್ದ ಬ್ರಹ್ಮಚಾರಿಯು ವ್ರತಭಂಗವನ್ನು ಹೊಂದಿದರೆ ಪಾಪಮುಕ್ತನಾಗುವನು.

೧೮. ಬ್ರಹ್ಮಚಾರಿಯು ಭಿಕ್ಷಾಟನ ಅಗ್ನಿಕಾರ್ಯಗಳನ್ನು ಏಳು ದಿನಗಳವರೆಗೆ ಬಿಟ್ಟರಾಗಲಿ, ರೇತಸ್ಸನ್ನು ವಿಸರ್ಜನೆಮಾಡಿದರಾಗಲಿ, ಪಾತಕಿಯಾಗುವುದರಿಂದ ಪ್ರಾಯಶ್ಚಿತ್ತವನ್ನು ಮಾಡಿ ಶುದ್ಧನಾಗಬೇಕು.

೧೯. ಅಥವಾ ತಾನು ತಂದ ಭಿಕ್ಷಾನ್ನವನ್ನು ಪವಿತ್ರನಾಗಿ ಓಂಕಾರವನ್ನು ಆದಿಯಲ್ಲಿ ಉಚ್ಚರಿಸಿ ತರುವಾಯ ಮಹಾ ವ್ಯಾಹೃತಿಮಂತ್ರಗಳನ್ನು ಪಠಿಸುತ್ತಾ ಒಂದು ಸಂವತ್ಸರಪರ್ಯಂತವಾಗಿ ನಕ್ತಭೋಜನ ಮಾಡಿದರೆ ಶುದ್ಧನಾಗುತ್ತಾನೆ.

ಸಾವಿತ್ರೀಂ ಚ ಜಪೇನ್ನಿತ್ಯಂ ಸತ್ವರಃ ಕ್ರೋಧವರ್ಜಿತಃ ।
ನದೀತೀರೇಷು ತೀರ್ಥೇಷು ತಸ್ಮಾತ್ಪಾಪಾದ್ವಿಮುಚ್ಯತೇ ॥ ೨೦ ॥

ಹತ್ವಾ ತು ಕ್ಷತ್ರಿಯಂ ವಿಪ್ರಃ ಕುರ್ಯಾದ್ಬ್ರಹ್ಮಹಣೋ ವ್ರತಮ್ ।
ಅಕಾಮತೋ ವೈ ಷಣ್ಮಾಸಾನ್ ದದ್ಯಾತ್ ಪಂಚಶತಂ ಗವಾಮ್॥೨೧॥

ಅಬ್ದಂ ಚರೇದ್ಧ್ಯಾನಯುತೋ ವನವಾಸೀ ಸಮಾಹಿತಃ ।
ಪ್ರಾಜಾಪತ್ಯಂ ಸಾಂತಪನಂ ತಪ್ತಕೃಚ್ಛ್ರಂ ತು ವಾ ಸ್ವಯಮ್ ॥ ೨೨ ॥

ಪ್ರಮಾದಾತ್ ಕಾಮತೋ ವೈಶ್ಯಂ ಕುರ್ಯಾತ್ ಸಂವತ್ಸರತ್ರಯಮ್ ।
ಗೋಸಹಸ್ರಂ ತು ಪಾದಂ ತು ಪ್ರದದ್ಯಾದ್ಬ್ರಹ್ಮಣೋ ವ್ರತಮ್॥ ೨೩॥

---

೨೦. ಮತ್ತು ಆಸಕ್ತಿಯಿಂದ ಕೂಡಿ ಕ್ರೋಧಾದಿದೋಷಗಳಿಂದ ವರ್ಜಿತನಾಗಿ ಪುಣ್ಯನದಿಗಳ ತೀರಭೂಮಿ, ತೀರ್ಥಕ್ಷೇತ್ರಗಳಲ್ಲಿ ಸಾವಿತ್ರೀ ಮಂತ್ರವನ್ನು ಜಪಿಸುವುದರಿಂದ ಆ ಪಾಪದಿಂದ ಮುಕ್ತನಾಗುತ್ತಾನೆ.

೨೧. ವಿಪ್ರನು ಸ್ವಸಂಕಲ್ಪವಿಲ್ಲದೆ ಪ್ರಮಾದದಿಂದ ಕ್ಷತ್ರಿಯನನ್ನು ವಧಿಸಿದರೆ ಬ್ರಹ್ಮಹತ್ಯಾಪ್ರಾಯಶ್ಚಿತ್ತವನ್ನು ಆರು ತಿಂಗಳುಗಳವರೆಗೆ ಆಚರಿಸಿ ಐದುನೂರು ಗೋವುಗಳನ್ನು ದಾನಮಾಡಬೇಕು.

೨೨. ಅಥವಾ ವನದಲ್ಲಿ ವಾಸಿಸುವವನೂ, ಸಮಾಧಾನಚಿತ್ತನೂ, ಮತ್ತು ಧ್ಯಾನಾಸಕ್ತನೂ ಆಗಿ ಒಂದುವರ್ಷದವರೆಗೆ ಪ್ರಾಜಾಪತ್ಯ, ಸಾಂತಪನ ಅಥವಾ ತಪ್ತಕೃಚ್ಛ್ರವೆಂಬ ಪ್ರಾಯಶ್ಚಿತ್ತಗಳನ್ನು ಆಚರಿಸಬೇಕು.

೨೩. ಹಾಗು ಪ್ರಾಮಾದಿಕವಾಗಿ ಕಾಮನಾಪೂರ್ವಕವಾಗಿ ವೈಶ್ಯನನ್ನು ಕೊಂದರೆ ಈ ವ್ರತವನ್ನು ಮೂರುಸಂವತ್ಸರ ಪರ್ಯಂತವಾಗಿ ಆಚರಿಸಬೇಕು. ಮತ್ತು ಪಾದಸಂಖ್ಯಾದಿಯಾಗಿ ಸಹಸ್ರ ಸಂಖ್ಯೆಯಷ್ಟು ಗೋದಾನವನ್ನು ಬ್ರಾಹ್ಮಣನಿಗೆ ಮಾಡಬೇಕು.

ಕೃಚ್ಛ್ರಾತಿಕೃಚ್ಛ್ರೌ ವಾ ಕುರ್ಯಾಚ್ಚಾಂದ್ರಾಯಣಮಥಾಪಿ ವಾ ।
ಸಂವತ್ಸರಂ ವ್ರತಂ ಕುರ್ಯಾಚ್ಛೂದ್ರಂ ಹತ್ವಾ ಪ್ರಮಾದತಃ ॥ ೨೪ ॥

ಗೋಸಹಸ್ರಾರ್ಧಪಾದಂ ಚ ದದ್ಯಾತ್ತತ್ಪಾಪಶಾಂತಯೇ ॥ ೨೫ ॥

ಅಷ್ಟೌ ವರ್ಷಾಣಿ ವಾ ತ್ರೀಣಿ ಕುರ್ಯಾದ್ಬ್ರಹ್ಮಹಣೋ ವ್ರತಮ್ ।
ಹತ್ವಾ ತು ಕ್ಷತ್ರಿಯಂ ವೈಶ್ಯಂ ಶೂದ್ರಂ ಚೈವ ಯಥಾಕ್ರಮಮ್ ॥ ೨೬ ॥

ನಿಹತ್ಯ ಬ್ರಾಹ್ಮಣೀಂ ವಿಪ್ರಸ್ತ್ವಷ್ಟವರ್ಷಂ ವ್ರತಂ ಚರೇತ್ ।
ರಾಜನ್ಯಾಂ ವರ್ಷಷಟ್ಕಂ ತು ವೈಶ್ಯಾಂ ಸಂವತ್ಸರತ್ರಯಮ್ ॥ ೨೭ ॥

---

೨೪. ಅಥವಾ ಕೃಚ್ಛ್ರ ಅತಿಕೃಚ್ಛ್ರ ಚಾಂದ್ರಾಯಣ ಮುಂತಾದ ಪ್ರಾಯಶ್ಚಿತ್ತಗಳನ್ನಾದರೂ ಆಚರಿಸಬೇಕು. ಪ್ರಮಾದದಿಂದ ಶೂದ್ರನನ್ನು ಸಂಹರಿಸಿದ ಪಾತಕಿಯು ಒಂದುವರ್ಷದವರೆಗೆ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

೨೫. ಅಂತಹ ಪಾಪವನ್ನು ನಿರ್ಮೂಲವಾಗಿ ನಾಶಮಾಡಲು ಸಹಸ್ರ ಮತ್ತು ಅದರ ಪಾದಾರ್ಧಸಂಖ್ಯೆಯಷ್ಟು ಗೋವುಗಳನ್ನು ದಾನಮಾಡಿ ಆ ಪಾಪಕ್ಕೆ ಶಾಂತಿಯನ್ನು ಮಾಡಬೇಕು.

೨೬. ಮತ್ತು ಎಂಟುವರ್ಷಪರ್ಯಂತವೂ, ಆರು ವರ್ಷಪರ್ಯಂತವೂ, ಅಥವಾ ಮೂರುವರ್ಷಪರ್ಯಂತವೂ ಕ್ರಮವಾಗಿ ಕ್ಷತ್ರಿಯ, ವೈಶ್ಯ, ಶೂದ್ರರನ್ನು ಕೊಂದಿರುವ ಪಾತಕಿಯು ಬ್ರಹ್ಮಹತ್ಯಾ ಪ್ರಾಯಶ್ಚಿತ್ತವನ್ನು ಮಾಡಬೇಕು.

೨೭. ವಿಪ್ರನು ಬ್ರಾಹ್ಮಣಸ್ತ್ರೀಯನ್ನು ಕೊಂದು ಎಂಟುವರ್ಷಗಳ ವರೆಗೆ ಪ್ರಾಯಶ್ಚಿತ್ತವನ್ನು ಆಚರಿಸಬೇಕು. ಕ್ಷತ್ರಿಯಸ್ತ್ರೀಯನ್ನು ಕೊಂದು ಆರುವರ್ಷಗಳವರೆಗೆ ಪ್ರಾಯಶ್ಚಿತ್ತವನ್ನು ಮಾಡಬೇಕು. ಮತ್ತು ವೈಶ್ಯಸ್ತ್ರೀಯನ್ನು ಕೊಂದು ಮೂರುವರ್ಷಗಳವರೆಗೆ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

ವತ್ಸರೇಣ ವಿಶುದ್ಧ್ಯೇತ ಶೂದ್ರೀಂ ಹತ್ವಾ ದ್ವಿಜೋತ್ತಮಃ ।
ವೈಶ್ಯಾಂ ಹತ್ವಾ ದ್ವಿಜಾತಿಸ್ತು ಕಿಂಚಿದ್ದದ್ಯಾದ್ದ್ವಿಜಾತಯೇ ॥ ೨೮ ॥

ಅಂತ್ಯಜಾನಾಂ ವಧೇ ಚೈವ ಕುರ್ಯಾಚ್ಚಾಂದ್ರಾಯಣವ್ರತಮ್ ।
ಪರಾಕೇಣಾಥವಾ ಶುದ್ಧಿರಿತ್ಯಾಹ ಭಗವಾನಜಃ ॥ ೨೯ ॥

ಮಂಡೂಕಂ ನಕುಲಂ ಕಾಕಂ ಬಿಡಾಲಂ ಖರಮೂಷಕೌ ।
ಶ್ವಾನಂ ಹತ್ವಾ ದ್ವಿಜಃ ಕುರ್ಯಾತ್ ಷೋಡಶಾಂಶಂ ಮಹಾವ್ರತಮ್ ॥

ಪಯಃ ಪಿಬೇತ್ತ್ರಿರಾತ್ರಂ ತು ಶ್ವಾನಂ ಹತ್ವಾ ಹ್ಯತಂದ್ರಿತಃ ।
ಮಾರ್ಜಾರಂ ವಾಥ ನಕುಲಂ ಯೋಜನಂ ಚಾಧ್ವನೋ ವ್ರಜೇತ್॥೩೧॥

---

೨೮. ದ್ವಿಜೋತ್ತಮನು ಶೂದ್ರಸ್ತ್ರೀಯನ್ನು ವಧಿಸಿ ಒಂದು ಸಂವತ್ಸರ ಪೂರ್ತಿಯಾಗಿ ಪ್ರಾಯಶ್ಚಿತ್ತದಿಂದ ಶುದ್ಧನಾಗುತ್ತಾನೆ. ದ್ವಿಜಾತಿಯು ವೈಶ್ಯಸ್ತ್ರೀಯನ್ನು ಕೊಂದರೆ ದ್ವಿಜಾತಿಗೆ ಯಾವುದಾದರೂ ದ್ರವ್ಯವನ್ನು ದಾನಮಾಡಬೇಕು.

೨೯. ಅಂತ್ಯಜನರನ್ನು ವಧಮಾಡಿದವನು ಚಾಂದ್ರಾಯಣವ್ರತವನ್ನು ಆಚರಿಸಬೇಕು. ಅಥವಾ ಪರಾಕವೆಂಬ ಪ್ರಾಯಶ್ಚಿತ್ತಾನುಷ್ಠಾನದಿಂದ ಶುದ್ಧಿಯಾಗುವುದೆಂದು ಪೂಜ್ಯನಾದ ಬ್ರಹ್ಮದೇವನು ಬೋಧಿಸಿರುವನು.

೩೦. ದ್ವಿಜನು ಮಂಡೂಕ, ಮುಂಗಸಿ, ಕಾಕ, ಬೆಕ್ಕು, ಗರ್ದಭ, ಮೂಷಕ ಮತ್ತು ಶ್ವಾನವನ್ನು ಕೊಂದು ಆ ವಧಪಾಪದ ನಿವೃತ್ತಿಗೆ ಷೋಡಶಾಂಶದಷ್ಟು ಮಹಾವ್ರತವನ್ನು ಆಚರಿಸಬೇಕು.

೩೧. ಶ್ವಾನವನ್ನು ಕೊಂದವನು ಸೋಮಾರಿತನವಿಲ್ಲದೆ ಮೂರು ದಿನಗಳವರೆಗೆ ಕ್ಷೀರವನ್ನು ಮಾತ್ರ ಪಾನಮಾಡಬೇಕು. ಮಾರ್ಜಾಲ ಅಥವಾ ನಕುಲಗಳನ್ನು ಕೊಂದವನು ಒಂದು ಯೋಜನ ಪರಿಮಾಣವುಳ್ಳ ಮಾರ್ಗವನ್ನು ನಡೆದು ಪ್ರಾಯಶ್ಚಿತ್ತವನ್ನು ಮಾಡಬೇಕು.

ಕೃಚ್ಛ್ರಂ ದ್ವಾದಶರಾತ್ರಂ ತು ಕುರ್ಯಾದಶ್ವವಧೇ ದ್ವಿಜಃ ।
ಅರ್ಚಾಂ ಕಾರ್ಷ್ಣಾಯಸೀಂ ದದ್ಯಾತ್ ಸರ್ಪಂ ಹತ್ವಾ ದ್ವಿಜೋತ್ತಮಃ ॥

ಪಲಾಲಭಾರಕಂ ಷಂಢೇ ಸೀಸಕಂ ಚೈಕಮಾಷಕಮ್ ।
ಘೃತಕುಂಭಂ ವರಾಹೇ ತು ತಿಲದ್ರೋಣಂ ತು ತಿತ್ತಿರೇ ॥ ೩೩ ॥

ಶಿಶುಂ ದ್ವಿಹಾಯನಂ ವತ್ಸಂ ಕ್ರೌಂಚಂ ಹತ್ವಾ ತ್ರಿಹಾಯನಮ್ ।
ಹತ್ವಾ ಹಂಸಂ ಬಲಾಕಾಂ ಚ ಬಕಂ ಬರ್ಹಿಣಮೇವ ಚ ॥ ೩೪ ॥

ವಾನರಂ ಶ್ಯೇನಭಾಸಂ ಚ ಸ್ಪರ್ಶಯೇದ್ಬ್ರಾಹ್ಮಣಾಯ ಗಾಮ್ ।
ಕ್ರವ್ಯಾದಾಂಸ್ತು ಮೃಗಾನ್ ಹತ್ವಾ ಧೇನುಂ ದದ್ಯಾತ್ಪಯಸ್ವಿನೀಮ್ ॥

---

೩೨. ದ್ವಿಜನು ಅಶ್ವವನ್ನು ವಧಿಸಿದ ದೋಷಕ್ಕೆ ಪ್ರಾಯಶ್ಚಿತ್ತವಾಗಿ ಹನ್ನೆರಡು ದಿನಗಳವರೆಗೆ ಕೃಚ್ಛ್ರಪ್ರಾಯಶ್ಚಿತ್ತವನ್ನು ಮಾಡಬೇಕು. ಮತ್ತು ದ್ವಿಜೋತ್ತಮನು ಸರ್ಪಹತ್ಯೆಮಾಡಿದರೆ ಕಬ್ಬಿಣದಿಂದ ಮಾಡಿದ ಪ್ರತಿಮೆಯನ್ನು ದಾನ ಮಾಡಬೇಕು.

೩೩. ಷಂಢನ ವಧದಲ್ಲಿ ಪಲಾಲಭಾರ ಮತ್ತು ಏಕಮಾಷ ಪರಿಮಾಣದಷ್ಟು ಸೀಸವನ್ನೂ, ವರಾಹವಧದಲ್ಲಿ ಘೃತಪೂರ್ಣವಾದ ಕುಂಭವನ್ನೂ, ಮತ್ತು ತಿತ್ತಿರಿ ಪಕ್ಷಿಯ ವಧದಲ್ಲಿ ದ್ರೋಣಪರಿಮಾಣದಷ್ಟು ತಿಲಧಾನ್ಯವನ್ನೂ ಪ್ರಾಯಶ್ಚಿತ್ತರೂಪದಿಂದ ದಾನಮಾಡಬೇಕು.

೩೪. ಶಿಶುವನ್ನೂ, ಎರಡುವರ್ಷ ಕಳೆದಿರುವ ಬಾಲನನ್ನೂ, ಮೂರುವರ್ಷಗಳು ತುಂಬಿರುವ ಕ್ರೌಂಚಪಕ್ಷಿಯನ್ನೂ, ಹಂಸವನ್ನೂ, ಬಲಾಕಾಪಕ್ಷಿಯನ್ನೂ ಬಕವನ್ನೂ, ಮತ್ತು ಮಯೂರವನ್ನೂ ಕೊಂದವನು ಗೋದಾನಪ್ರಾಯಶ್ಚಿತ್ತವನ್ನು ಆಚರಿಸಬೇಕು.

೩೫. ವಾನರವನ್ನೂ, ಗೃಧ್ರಪಕ್ಷಿಯನ್ನೂ, ಭಾಸಪಕ್ಷಿಯನ್ನೂ ಕೊಂದವನು ಬ್ರಾಹ್ಮಣನಿಗೆ ಗೋವನ್ನು ದಾನಮಾಡಬೇಕು. ಮತ್ತು ಮಾಂಸಾಶನ ಮಾಡುವ ಮೃಗಗಳನ್ನು ಕೊಂದವನು ಹಾಲುಕರೆಯುವಂತಹ ಧೇನುವನ್ನು ದಾನಮಾಡಬೇಕು.

ಅಕ್ರವ್ಯಾದಾನ್ ವತ್ಸತರೀಪುಂಷ್ಟ್ರಂ ಹತ್ವಾ ತು ಕೃಷ್ಣಲವ್ ।
ಕಿಂಚಿದ್ದೇಯಂ ತು ವಿಪ್ರಾಯ ದದ್ಯಾದಸ್ಥಿಮತಾಂ ವಧೇ ॥ ೩೬ ॥

ಅನಸ್ಥ್ನಾಂ ಚೈವ ಹಿಂಸಾಯಾಂ ಪ್ರಾಣಾಯಾಮೇನ ಶುಧ್ಯತಿ ।
ಫಲದಾನಾಂ ತು ವೃಕ್ಷಾಣಾಂ ಛೇದನೇ ಜಪ್ಯಮೃಕ್ಶತಮ್ ॥ ೩೭ ॥

ಗುಲ್ಮವಲ್ಲೀಲತಾನಾಂ ತು ಪುಷ್ಪಿತಾನಾಂ ಚ ವೀರುಧಾಮ್ ।
ಅಂಡಜಾನಾಂ ಚ ಸರ್ವೇಷಾಂ ಸ್ವೇದಜಾನಾಂ ಚ ಸರ್ವಶಃ ॥ ೩೮ ॥

ಫಲಪುಷ್ಪೋದ್ಭವಾನಾಂ ಚ ಘೃತಪ್ರಾಶೋ ವಿಶೋಧನಮ್ ।
ಹಸ್ತಿನಾಂ ಚ ವಧೇ ದೃಷ್ಟಂ ತಪ್ತಕೃಚ್ಛ್ರಂ ವಿಶೋಧನಮ್ ॥ ೩೯ ॥

೩೬. ಮಾಂಸಾಶನ ಮಾಡದಿರುವ ಮೃಗಗಳನ್ನು ಸಣ್ಣ ವಯಸ್ಸಿನ ಕರುವನ್ನೂ ಒಂಟೆಯನ್ನೂ, ಸಂಹಾರಮಾಡಿ ಅಥವಾ ಯಾವುದಾದರೂ ಅಸ್ಥಿಯುಳ್ಳ ಪ್ರಾಣಿಯನ್ನು ಸಂಹಾರಮಾಡಿ ಆ ಪಾಪದ ಪರಿಹಾರಕ್ಕೆ ಸುವರ್ಣ ನಿರ್ಮಿತವಾದ ಮಾಷದ್ರವ್ಯವನ್ನು ವಿಪ್ರನಿಗೆ ದಾನಮಾಡಬೇಕು.

೩೭. ಅಸ್ಥಿರಹಿತವಾದ ಪ್ರಾಣಿಯನ್ನು ಹಿಂಸಿಸಿದರೆ-ಪ್ರಾಣಾಯಾಮವೆಂಬ ಪ್ರಾಯಶ್ಚಿತ್ತದಿಂದ ಶುದ್ಧನಾಗುತ್ತಾನೆ. ಫಲವನ್ನು ಕೊಡುವ ವೃಕ್ಷಗನಳ್ನು ಛೇದನಮಾಡಿದರೆ ಒಂದು ನೂರುಋಙ್ಮಂತ್ರಗಳನ್ನೂ ಪ್ರಾಣಾಯಶ್ಚಿತ್ತಕ್ಕೋಸ್ಕರ ಜಪಿಸಬೇಕು.

೩೮. ಪೊದೆಗಳು, ಲತೆ, ವಲ್ಲೀ ಮತ್ತು ಹೂ ಬಿಟ್ಟಿರುವ ಲತೆಗಳಗಳನ್ನು ಛೇಧಿಸಿದರಾಗಲಿ ಸಮಸ್ತ ಜಾತಿಯ ಅಂಡಜ, ಸ್ವೇದಜವೆಂಬ ಬಗೆಯ ಪ್ರಾಣಿಗಳನ್ನು ವಧಿಸಿದರಾಗಲಿ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

೩೯. ಫಲ-ಪುಷ್ಪಗಳನ್ನು ಕೊಡುವ ವೃಕ್ಷಾದಿಗಳನ್ನು ಛೇಧಿಸಿದರೆ ಘೃತಪ್ರಾಶನವು ಆ ಪಾಪವನ್ನು ಕಳೆಯುವ ಪ್ರಾಯಶ್ಚಿತ್ತವು, ಗಜಗಳನ್ನು ಕೊಂದರೆ ತಪ್ತ ಕೃಚ್ಛ್ರಾಚರಣೆಯು ಆ ಪಾಪವನ್ನು ದೂರಮಾಡುವ ಪ್ರಾಯಶ್ಚಿತ್ತವು.

**ಚಾಂದ್ರಾಯಣಂ ಪರಾಕಂ ವಾ ಗಾಂ ಹತ್ವಾ ತು ಪ್ರಮಾದತಃ ।**
**ಮತಿಪೂರ್ವವಧೇ ಚಾಸ್ಯಾಃ ಪ್ರಾಯಶ್ಚಿತ್ತಂ ನ ವಿದ್ಯತೇ ॥ ೪೦ ॥**

**ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇ**
**ಷಡಶೀತಿತಮೋಽಧ್ಯಾಯಃ.**

---

೪೦. ಅಜ್ಞಾನದಿಂದ ಪ್ರಾಮಾದಿಕವಾಗಿ ಗೋವನ್ನು ವಧಮಾಡಿದರೆ ಚಾಂದ್ರಾಯಣ ಅಥವಾ ಪರಾಕ ವೆಂಬ ಪ್ರಾಯಶ್ಚಿತ್ತವನ್ನು ಮಾಡಬೇಕು. ಬುದ್ಧಿಪೂರ್ವಕವಾಗಿ ಮಾಡಿದ ಗೋವಧದ ಪಾಪಕ್ಕೆ ಪ್ರಾಯಶ್ಚಿತ್ತವು ಇಲ್ಲ.

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ಎಂಭತ್ತಾರನೆಯ
ಅಧ್ಯಾಯವು ಮುಗಿದುದು.

---

ಶ್ರೀಃ

# ಕೂರ್ಮಪುರಾಣಂ

---

## ಸಪ್ತಾಶೀತಿತಮೋಽಧ್ಯಾಯಃ.

ವ್ಯಾಸ ಉವಾಚ:—

ಮನುಷ್ಯಾಣಾಂ ತು ಹರಣಂ ಕೃತ್ವಾ ಸ್ತ್ರೀಣಾಂ ಗೃಹಸ್ಯ ಚ ।
ವಾಪೀಕೂಪಜಲಾನಾಂ ಚ ಶುದ್ಧ್ಯೇಚ್ಚಾಂದ್ರಾಯಣೇನ ತು ॥ ೧ ॥

ದ್ರವ್ಯಾಣಾಮಲ್ಪಸಾರಾಣಾಂ ಸ್ತೇಯಂ ಕೃತ್ವಾನ್ಯವೇಶ್ಮನಃ ।
ಚರೇತ್ ಸಾಂತಪನಂ ಕೃಚ್ಛ್ರಂ ತನ್ನಿರ್ಯಾತ್ಯಾತ್ಮಶುದ್ಧಯೇ ॥ ೨ ॥

ಧಾನ್ಯಾನ್ನಧನಚೌರ್ಯಂ ತು ಕೃತ್ವಾ ಕಾಮಾದ್ದ್ವಿಜೋತ್ತಮಃ ।
ಸ್ವಜಾತೀಯಗೃಹಾದೇವ ಕೃಚ್ಛ್ರಾರ್ಧೇನ ವಿಶುದ್ಧ್ಯತಿ ॥ ೩ ॥

---

## ಎಂಭತ್ತೇಳನೆಯ ಅಧ್ಯಾಯವು

೧. ವ್ಯಾಸಮುನಿಯು ಇಂತೆಂದನು:—ಮನುಷ್ಯರನ್ನೂ ಸ್ತ್ರೀಯರನ್ನೂ, ಗೃಹವನ್ನೂ ವಾಪಿ-ಕೂಪ-ತಟಾಕ ರೂಪವಾದ ಜಲಾಶಯಗಳನ್ನೂ ಅಪಹರಿಸಿದ ಪಾತಕಿಯು ಚಾಂದ್ರಾಯಣ ವ್ರತದಿಂದ ಶುದ್ಧನಾಗುವನು.

೨. ಬೇರೊಬ್ಬನ ಮನೆಯಿಂದ ಅಲ್ಪವಾದ ಮೂಲ್ಯಬಾಳುವ ದ್ರವ್ಯಗಳನ್ನು ಚೌರ್ಯಮಾಡಿದರೆ ಅದರಿಂದ ದುಷ್ಟವಾದ ಆತ್ಮವನ್ನು ಶುದ್ಧಿಮಾಡಲು ಆ ದ್ರವ್ಯವನ್ನು ಹಿಂದಕ್ಕೆ ಕೊಟ್ಟು ಸಾಂತಪನ ಕೃಚ್ಛ್ರಪ್ರಾಯಶ್ಚಿತ್ತಗಳನ್ನು ಮಾಡಬೇಕು.

೩. ದ್ವಿಜ ಶ್ರೇಷ್ಠನೆನಿಸಿದವನು ಲೋಭದಿಂದ ತನ್ನ ಜಾತಿಗೆ ಸೇರಿದ ಮತ್ತೊಬ್ಬನ ಗೃಹದಿಂದ ಧಾನ್ಯ, ಅನ್ನ ಅಥವಾ ಧನಗಳನ್ನು ಚೌರ್ಯಮಾಡಿದರೆ ಅರ್ಧಕೃಚ್ಛ್ರ ಪ್ರಾಯಶ್ಚಿತ್ತಾನುಷ್ಠಾನದಿಂದ ಶುದ್ಧನಾಗುತ್ತಾನೆ.

ಭಕ್ಷ್ಯಭೋಜ್ಯೋಪಹರಣೇ ಯಾನಶಯ್ಯಾಸನಸ್ಯ ಚ ।
ಪುಷ್ಪಮೂಲಫಲಾನಾಂ ಚ ಪಂಚಗವ್ಯಂ ವಿಶೋಧನಮ್ ॥ ೪ ॥

ತೃಣಕಾಷ್ಠದ್ರುಮಾಣಾಂ ಚ ಶುಷ್ಕಾನ್ನಸ್ಯ ಗುಡಸ್ಯ ಚ ।
ಚೈಲಚರ್ಮಾಮಿಷಾಣಾಂ ಚ ತ್ರಿರಾತ್ರಂ ಸ್ಯಾದಭೋಜನಮ್ ॥ ೫ ॥

ಮಣಿಮುಕ್ತಾಪ್ರವಾಲಾನಾಂ ತಾಮ್ರಸ್ಯ ರಜತಸ್ಯ ಚ ।
ಅಯಸ್ಕಾಂತೋಪಲಾನಾಂ ಚ ದ್ವಾದಶಾಹಂ ಕಣಾಶನಮ್ ॥ ೬ ॥

ಕಾರ್ಪಾಸಸ್ಯೈವ ಹರಣೇ ದ್ವಿಶಫೈಕಶಫಸ್ಯ ಚ ।
ಪುಷ್ಪಗಂಧೌಷಧೀನಾಂ ಚ ಪಿಬೇಚ್ಚೈವ ತ್ರ್ಯಹಂ ಪಯಃ ॥ ೭ ॥

---

೪. ಭಕ್ಷ್ಯ ಭೋಜ್ಯಗಳನ್ನು ಅಪಹರಿಸಿದರೆ ಅಥವಾ ವಾಹನ ಶಯ್ಯೆ ಪೀಠ ಪುಷ್ಪ, ಮೂಲ ಮತ್ತು ಫಲ ಮುಂತಾದುವುಗಳನ್ನು ಚೌರ್ಯಮಾಡಿದರೆ ಪಂಚಗವ್ಯ ಪ್ರಾಶನವು ಆ ಪಾಪದಿಂದ ಶುದ್ಧಿ ಮಾಡುವುದು.

೫. ಹೀಗೆ ಹುಲ್ಲು, ಕಾಷ್ಠ, ಗಿಡ, ಶುಷ್ಕವಾದ ಅನ್ನ, ಗುಡ, ವಸ್ತ್ರ, ಚರ್ಮ ಮತ್ತು ಮಾಂಸಗಳನ್ನು ಅಪಹರಿಸಿದರೆ ಅದರಿಂದ ಒದಗಿದ ಪಾಪವನ್ನು ಕಳೆಯಲು ಮೂರು ದಿನಗಳವರೆಗೆ ಉಪವಾಸಪ್ರಾಯಶ್ಚಿತ್ತವನ್ನು ಮಾಡಬೇಕು.

೬. ರತ್ನ, ಮುತ್ತು, ಹವಳ ತಾಮ್ರ, ಬೆಳ್ಳಿ, ಅಯಸ್ಕಾಂತಮಣಿ, ಮತ್ತು ಉತ್ತಮವಾದ ಶಿಲೆಗಳನ್ನು ಅಪಹಾರಮಾಡಿದರೆ ಹನ್ನೆರಡುದಿನಗಳವರೆಗೆ ಆರಿಸಿದ ಕಣಗಳನ್ನು ಮಾತ್ರ ಭುಂಜಿಸುವ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

೭. ಕಾರ್ಪಾಸ, ಎರಡು ಗೊರಸುಗಳಿಂದ ಕೂಡಿದಪ್ರಾಣಿ, ಒಂದು ಗೊರಸು ಇರುವ ಪ್ರಾಣಿ, ಪುಷ್ಪ, ಗಂಧ, ಮತ್ತು ಔಷಧಿಗಳನ್ನು ಕದ್ದು ಆ ಪಾಪದ ನಿವೃತ್ತಿಗೆ ಮೂರುದಿನ ಕ್ಷೀರವನ್ನು ಮಾತ್ರ ಪಾನಮಾಡುವ ಪ್ರಾಯಶ್ಚಿತ್ತವನ್ನು ಮಾಡಬೇಕು.

ನರಮಾಂಸಾಶನಂ ಕೃತ್ವಾ ಚಾಂದ್ರಾಯಣಮಥಾಚರೇತ್ ।
ಕಾಕಂ ಚೈವ ತಥಾ ಶ್ವಾನಂ ಜಗ್ಧ್ವಾ ಹಸ್ತಿನಮೇವ ಚ ॥ ೮ ॥

ವರಾಹಂ ಕುಕ್ಕುಟಂ ವಾಥ ತಪ್ತಕೃಚ್ಛ್ರೇಣ ಶುದ್ಧ್ಯತಿ ।
ಕ್ರವ್ಯಾದಾನಾಂ ಚ ಮಾಂಸಾನಿ ಪುರೀಷಂ ಮೂತ್ರಮೇವ ವಾ ॥ ೯ ॥

ಗೋಗೋಮಾಯುಕಪೀನಾಂ ಚ ತದೇವ ವ್ರತಮಾಚರೇತ್ ।
ಶಿಶುಮಾರಂ ತಥಾ ಚಾಷಂ ಮತ್ಸ್ಯಮಾಂಸಂ ತಥೈವ ಚ ॥ ೧೦ ॥

ಉಪೋಷ್ಯ ದ್ವಾದಶಾಹಂ ಚ ಕೂಷ್ಮಾಂಡೈರ್ಜುಹುಯಾದ್ಘೃತಮ್ ।
ನಕುಲೋಲೂಕಮಾರ್ಜಾರಾನ್ ಜಗ್ಧ್ವಾ ಸಾಂತಪನಂ ಚರೇತ್॥೧೧ ॥

---

೮. ಮನುಷ್ಯನು ಮಾಂಸವನ್ನು ಭುಂಜಿಸಿದರೆ ಆ ಪಾಪದ ಪ್ರಾಯಶ್ಚಿತ್ತವಾಗಿ ಚಾಂದ್ರಾಯಣವ್ರತವನ್ನು ಆಚರಿಸಬೇಕು. ಕಾಕ, ಶ್ವಾನ, ಗಜಗಳನ್ನು ಕೊಂದು ಮಾಂಸಾಶನಮಾಡಿದರೆ ತಪ್ತಕೃಚ್ಛ್ರಪ್ರಾಯಶ್ಚಿತ್ತದಿಂದ ಶುದ್ಧಿಯಾಗುವುದು.

೯. ವರಾಹ, ಕುಕ್ಕುಟ, ಮಾಂಸಾಶಿಯಾದ ಪ್ರಾಣಿಗಳ ಮಾಂಸ, ಮತ್ತು ಅಂತಹ ಪ್ರಾಣಿಗಳ ಮೂತ್ರ ಪುರೀಷಗಳನ್ನು ಭುಂಜಿಸಿದರೆ ತಪ್ತಕೃಚ್ಛ್ರವೆಂಬ ಪ್ರಾಯಶ್ಚಿತ್ತವನ್ನು ಆಚರಿಸಿ ಪವಿತ್ರನಾಗುತ್ತಾನೆ.

೧೦. ಗೋವು, ಗೋಮಾಯು, ಕಪಿಗಳನ್ನು ಭುಂಜಿಸಿದರೆ ಹಿಂದೆ ಹೇಳಿದ ತಪ್ತಕೃಚ್ಛ್ರವ್ರತದ ಪ್ರಾಯಶ್ಚಿತ್ತವನ್ನು ಮಾಡಬೇಕು. ಶಿಶುಮಾರವೆಂಬ ಮತ್ಸ್ಯ ವಿಶೇಷ, ಚಾಷ , ಮತ್ತು ಮತ್ಸ್ಯ ಮಾಂಸಗಳನ್ನು ಭುಂಜಿಸಿದರೆ ಅದಕ್ಕೆ ವಿಹಿತವಾದ ಪ್ರಾಯಶ್ಚಿತ್ತವನ್ನು ಮಾಡಬೇಕು.

೧೧. ಹನ್ನೆರಡುದಿನಗಳವರೆಗೆ ಉಪವಾಸಮಾಡಿ ಘೃತದಿಂದ ಕೂಷ್ಮಾಂಡ ಸೂಕ್ತ ಪಾಠಪೂರ್ವಕವಾಗಿ ಹೋಮಮಾಡುವುದು ಹಿಂದೆ ಹೇಳಿದ ಪಾಪಕರ್ಮಕ್ಕೆ ಪ್ರಾಯಶ್ಚಿತ್ತವಾಗಿ ವಿಹಿತವಾಗಿದೆ. ಮುಂಗಸಿ, ಗೂಬೆ, ಬೆಕ್ಕು, ಮುಂತಾದುವುಗಳನ್ನು ಭಕ್ಷಿಸಿ, ಸಾಂತಪನಪ್ರಾಯಶ್ಚಿತ್ತವನ್ನು ಮಾಡಬೇಕು.

ಶ್ವಾಪದೋಷ್ಟ್ರಖರಾನ್ ಜಗ್ಧ್ವಾ ತಪ್ತಕೃಚ್ಛ್ರೇಣ ಶುದ್ಧ್ಯತಿ ।
ಪ್ರಕುರ್ಯಾಚ್ಚೈವ ಸಂಸ್ಕಾರಂ ಪೂರ್ವೇಣ ವಿಧಿನೈವ ತು ॥ ೧೨ ॥

ಬಕಂ ಚೈವ ಬಲಾಕಾಂ ಚ ಹಂಸಂ ಕಾರಂಡವಾಂಸ್ತಥಾ ।
ಚಕ್ರವಾಕಪಲಂ ಜಗ್ಧ್ವಾ ದ್ವಾದಶಾಹಮಭೋಜನಮ್ ॥ ೧೩ ॥

ಕಪೋತಟಿಟ್ಟಿಭಾಂಶ್ಚೈವ ಶುಕಂ ಸಾರಸಮೇವ ಚ ।
ಉಲೂಕಂ ಜಾಲಪಾದಂ ಚ ಜಗ್ಧ್ವಾಪ್ಯೇತದ್ವ್ರತಂ ಚರೇತ್ ॥ ೧೪ ॥

ಶಿಶುಮಾರಂ ತಥಾ ಚಾಷಂ ಮತ್ಸ್ಯಮಾಂಸಂ ತಥೈವ ಚ ।
ಜಗ್ಧ್ವಾ ಚೈವ ಕಟಾಹಾರಮೇತದೇವ ವ್ರತಂ ಚರೇತ್ ॥ ೧೫ ॥

---

೧೨. ಶ್ವಾಪದ ಉಷ್ಟ್ರ ಗದರ್ಭಗಳನ್ನು ಭುಂಜಿಸಿದರೆ ತಪ್ತಕೃಚ್ಛ್ರ ಪ್ರಾಯಶ್ಚಿತ್ತವನ್ನು ಆಚರಿಸಿ ಶುದ್ಧನಾಗುತ್ತಾನೆ. ಹಾಗು ಈ ಪ್ರಾಯಶ್ಚಿತ್ತಗಳನ್ನು ಮಾಡಿ ಯಥಾವಿಧಿಯಾಗಿ ಕೂಷ್ಮಾಂಡಹೋಮ ಸಂಸ್ಕಾರವನ್ನು ಮಾಡಬೇಕು.

೧೩. ಬಕ, ಬಲಾಕಾ, ಹಂಸ, ಕಾರಂಡವ ಮತ್ತು ಚಕ್ರವಾಕ ಪಕ್ಷಿಗಳ ಮಾಂಸವನ್ನು ಭುಂಜಿಸಿದರೆ ಹನ್ನೆರಡು ದಿನಗಳವರೆಗೆ ಉಪವಾಸವೆಂಬ ಪ್ರಾಯಶ್ಚಿತ್ತಮಾಡಿ ಶುದ್ಧನಾಗುವನು.

೧೪. ಕಪೋತ, ಟಿಟ್ಟಿಭ, ಶುಕ, ಸಾರಸ, ಉಲೂಕ, ಹಂಸ, ಮುಂತಾದ ಪ್ರಾಣಿಗಳನ್ನು ಕೊಂದು ತಿಂದರೆ ಹನ್ನೆರಡು ದಿನಗಳವರೆಗೆ ಉಪವಾಸವೆಂಬ ವ್ರತವನ್ನು ಪ್ರಾಯಶ್ಚಿತ್ತವಾಗಿ ಆಚರಿಸಬೇಕು.

೧೫. ಶಿಶುಮಾರಮತ್ಸ್ಯ ಚಾಷಪಕ್ಷಿ, ಮತ್ಸ್ಯಮಾಂಸ, ಹುಲ್ಲು, ಕಡ್ಡಿಯನ್ನು ತಿನ್ನುವ ಒಂದುಬಗೆಯ ಪಕ್ಷಿ ಇವುಗಳನ್ನು ಕೊಂದು ತಿಂದರೆ ಹಿಂದೆ ಹೇಳಿರುವ ಹನ್ನೆರಡು ದಿನಗಳು ಪೂರ್ತಿಯಾಗಿ ಉಪವಾಸ ಪ್ರಾಯಶ್ಚಿತ್ತವನ್ನು ಮಾಡಬೇಕು.

ಕೋಕಿಲಂ ಚೈವ ಮತ್ಸ್ಯಾದಾನ್ ಮಂಡೂಕಂ ಭುಜಗಂ ತಥಾ ।
ಗೋಮೂತ್ರಯಾವಕಾಹಾರೋ ಮಾಸೇನೈಕೇನ ಶುಧ್ಯತಿ ॥ ೧೬ ॥

ಜಲೇಚರಾಂಶ್ಚ ಜಲಜಾನ್ ಪ್ರಣುದಾನಥ ವಿಷ್ಕಿರಾನ್ ।
ರಕ್ತಪಾದಾಂಸ್ತಥಾ ಜಗ್ಧ್ವಾ ಸಪ್ತಾಹಂ ಚೈತದಾಚರೇತ್ ॥ ೧೭ ॥

ಶುನೋ ಮಾಂಸಂ ಶುಷ್ಕಮಾಂಸಮಾತ್ಮಾರ್ಥಂ ಚ ತಥಾ ಕೃತಮ್ ।
ಭುಕ್ತ್ವಾ ಮಾಸಂ ಚರೇದೇತತ್ತತ್ಪಾಪಸ್ಯಾಪನುತ್ತಯೇ ॥ ೧೮ ॥

ವೃಂತಾಕಂ ಭೂತೃಣಂ ಶಿಗ್ರುಂ ಕಟಿಕಂ ಚಟಿಕಂ ತಥಾ ।
ಪ್ರಾಜಾಪತ್ಯಂ ಚರೇಜ್ಜಗ್ಧ್ವಾ ಖಡ್ಗಂ ಕುಂಭೀಕಮೇವ ಚ ॥ ೧೯ ॥

---

೧೬. ಕೋಕಿಲ, ಮತ್ಸ್ಯವನ್ನು ತಿನ್ನುವಪಕ್ಷಿ, ಮಂಡೂಕ, ಸರ್ಪಗಳನ್ನು ಕೊಂದು ಭಕ್ಷಿಸಿದರೆ ಗೋಮೂತ್ರ-ಯಾವಕಗಳನ್ನು ಮಾತ್ರ ಒಂದು ಮಾಸ ಪೂರ್ತಿಯಾಗಿ ಆಹಾರವಾಗಿ ಸೇವಿಸಿದರೆ ಶುದ್ಧನಾಗುತ್ತಾನೆ.

೧೭. ಜಲಚರ ಪ್ರಾಣಿಗಳನ್ನೂ, ಜಲದಲ್ಲಿ ಹುಟ್ಟಿದುವುಗಳನ್ನೂ, ಪ್ರಣುದವೆಂಬ ಪಕ್ಷಿಗಳನ್ನೂ ಮತ್ತು ರಕ್ತಪಾದವೆಂಬ ಹಂಸಗಳನ್ನೂ ಕೊಂದು ಭುಂಜಿಸಿದರೆ ಏಳು ದಿನಗಳವರೆಗೆ ಹಿಂದೆ ಹೇಳಿರುವ ವ್ರತವನ್ನು ಆಚರಿಸಬೇಕು.

೧೮. ಶ್ವಾನದ ಮಾಂಸವನ್ನೂ ಇತರ ಶುಷ್ಕಮಾಂಸವನ್ನೂ, ತನ್ನ ಆಹಾರಕ್ಕಾಗಿ ಸಂಸ್ಕರಿಸಿ, ಭುಂಜಿಸಿದ ಮಾನವನು ಆ ಪಾಪದ ಶಾಂತಿಗೆ ಒಂದು ಮಾಸದವರೆಗೆ ಇದೇ ವ್ರತವನ್ನು ಆಚರಿಸಿ ಶುದ್ಧನಾಗುತ್ತಾನೆ.

೧೯. ವೃಂತಾಕ, ಭೂತೃಣ, ಶಿಗ್ರು, ಕುಟಕವೆಂಬ ಶಾಕಾಹಾರವನ್ನೂ ಚಟಕ, ಖಡ್ಗ, ಕುಂಭೀಕವೆಂಬ ಪ್ರಾಣಿಗಳನ್ನೂ ಭುಂಜಿಸಿ, ಪ್ರಾಜಾಪತ್ಯವೆಂಬ ಪ್ರಾಯಶ್ಚಿತ್ತವನ್ನು ಆಚರಿಸಿ ಪವಿತ್ರನಾಗುತ್ತಾನೆ

ಪಲಾಂಡುಂ ಲಶುನಂ ಚೈವ ಭುಕ್ತ್ವಾ ಚಾಂದ್ರಾಯಣಂ ಚರೇತ್ ।
ನಾಲೀಕಾಂ ತಂಡುಲೀಯಕಂ ಚ ಪ್ರಾಜಾಪತ್ಯೇನ ಶುದ್ಧ್ಯತಿ ॥ ೨೦ ॥

ಅಶ್ಮಾಂತಕಂ ತಥಾ ಪೋತಂ ತಪ್ತಕೃಚ್ಛ್ರೇಣ ಶುದ್ಧ್ಯತಿ ।
ಪ್ರಾಜಾಪತ್ಯೇನ ಶುದ್ಧಿಃ ಸ್ಯಾತ್ ಕುಸುಂಭಸ್ಯ ಚ ಭಕ್ಷಣೇ ॥ ೨೧ ॥

ಅಲಾಬುಂ ಕಿಂಶುಕಂ ಚೈವ ಭುಕ್ತ್ವಾಪ್ಯೇತದ್ವ್ರತಂ ಚರೇತ್ ।
ಏತೇಷಾಂ ಚ ವಿಕಾರಾಣಿ ಪೀತ್ವಾ ಮೋಹೇನ ವಾ ಪುನಃ ॥ ೨೨ ॥

ಗೋಮೂತ್ರಯಾವಕಾಹಾರಃ ಸಪ್ತರಾತ್ರೇಣ ಶುದ್ಧ್ಯತಿ ।
ಉದುಂಬರಂ ಚ ಕಾಮೇನ ತಪ್ತಕೃಚ್ಛ್ರೇಣ ಶುದ್ಧ್ಯತಿ ॥ ೨೩ ॥

---

೨೦. ಪಲಾಂಡು, ಲಶುನಗಳನ್ನು ಭುಂಜಿಸಿದರೆ ಚಾಂದ್ರಾಯಣ ಪ್ರಾಯಶ್ಚಿತ್ತವನ್ನು ಆಚರಿಸಬೇಕು. ನಾಳೀಕಾ, ತಂಡುಲೀಯವೆಂಬ ಧಾನ್ಯಕ್ಕೆ ಬರುವ ಕ್ರಿಮಿ ವಿಶೇಷಗಳನ್ನು ಭುಂಜಿಸಿದರೆ ಪ್ರಾಜಾಪತ್ಯ ಪ್ರಾಯಶ್ಚಿತ್ತಾನುಷ್ಠಾನದಿಂದ ಶುದ್ಧಿಯನ್ನು ಹೊಂದುತ್ತಾನೆ.

೨೧. ಅಶ್ಮಾಂತಕ, ಪೋತ, ಕುಸಂಭವೆಂಬ ಔಷಧಿ ವಿಶೇಷಗಳನ್ನು ಭುಂಜಿಸಿದರೆ ತಪ್ತಕೃಚ್ಛ್ರ ಪ್ರಾಯಶ್ಚಿತ್ತದಿಂದಲೂ, ಪ್ರಾಜಾಪತ್ಯ ವ್ರತಾಚರಣೆಯಿಂದಲೂ, ಶುದ್ಧನಾಗುತ್ತಾನೆ.

೨೨. ಅಲಾಬು, ಕಿಂಶುಕಗಳನ್ನು ಭುಂಜಿಸಿದರೆ ಕೂಡ ಪ್ರಾಜಾಪತ್ಯವ್ರತವನ್ನು ಪ್ರಾಯಶ್ಚಿತ್ತರೂಪವಾಗಿ ಆಚರಿಸಬೇಕು. ಅಲಾಬು ಮುಂತಾದ ಅಭಕ್ಷ್ಯ ವಸ್ತುಗಳಿಂದ ಮಾಡಿದ ವ್ಯಂಜನಾದಿ ವಿಕಾರಗಳನ್ನು ಮೋಹದಿಂದಲಾದರೂ ಭುಂಜಿಸಿದರೆ ಪ್ರಾಯಶ್ಚಿತ್ತಾರ್ಹನಾಗುವನು.

೨೩. ಆಗ ಏಳು ದಿನಗಳವರೆಗೆ ಗೋಮೂತ್ರ-ಯಾವಕಗಳನ್ನು ಆಹಾರವಾಗಿ ಭುಂಜಿಸಿ, ಅದರಿಂದ ಪವಿತ್ರನಾಗುತ್ತಾನೆ. ತಾನು ಇಷ್ಟಪಟ್ಟು ಉದುಂಬರ ಫಲವನ್ನು ತಿಂದರೆ ತಪ್ತಕೃಚ್ಛ್ರ ಪ್ರಾಯಶ್ಚಿತ್ತದಿಂದ ಶುದ್ಧನಾಗುತ್ತಾನೆ.

ಭುಕ್ತ್ವಾ ಚೈವ ನವಶ್ರಾದ್ಧೇ ಮೃತಕೇ ಸೂತಕೇ ತಥಾ ।
ಚಾಂದ್ರಾಯಣೇನ ಶುದ್ಧ್ಯೇತ ಬ್ರಾಹ್ಮಣಃ ಸುಸಮಾಹಿತಃ ॥ ೨೪ ॥

ಯಸ್ಯಾಗ್ನೌ ಹೂಯತೇ ನಿತ್ಯಮನ್ನಸ್ಯಾಗ್ರಂ ನ ದೀಯತೇ ।
ಚಾಂದ್ರಾಯಣಂ ಚರೇತ್ ಸಮ್ಯಕ್ ತಸ್ಯಾನ್ನಪ್ರಾಶನೇ ದ್ವಿಜಃ ॥ ೨೫ ॥

ಅಭೋಜ್ಯಾನ್ನಂ ತು ಸರ್ವೇಷಾಂ ಭುಕ್ತ್ವಾ ಚಾನ್ನಮುಪಸ್ಕೃತಮ್ ।
ಅಂತಾವಸಾಯಿನಾಂ ಚೈವ ತಪ್ತಕೃಚ್ಛ್ರೇಣ ಶುದ್ಧ್ಯತಿ ॥ ೨೬ ॥

ಚಾಂಡಾಲಾನ್ನಂ ದ್ವಿಜೋ ಭುಕ್ತ್ವಾ ಸಮ್ಯಕ್ ಚಾಂದ್ರಾಯಣಂ ಚರೇತ್
ಬುದ್ಧಿಪೂರ್ವಂ ತು ಕೃಚ್ಛ್ರಾಬ್ದಂ ಪುನಃ ಸಂಸ್ಕಾರಮೇವ ಚ ॥ ೨೭ ॥

---

೨೪. ನವಶ್ರಾದ್ಧಾನ್ನವನ್ನೂ, ಮೃತಸಂತತಿಯ ಅನ್ನವನ್ನೂ, ಭುಂಜಿಸಿದ ಬ್ರಾಹ್ಮಣನು ಶಾಂತಚಿತ್ತನಾಗಿ ಚಾಂದ್ರಾಯಣಪ್ರಾಯಶ್ಚಿತ್ತವನ್ನು ಮಾಡಿ ಅದರಿಂದ ಪಾಪದಿಂದ ಮುಕ್ತನಾಗುತ್ತಾನೆ.

೨೫. ಯಾವ ಗೃಹಸ್ಥನ ಗೃಹ್ಯಾಗ್ನಿಯಲ್ಲಿ ಅವನ ಅನ್ನವನ್ನು ಪ್ರತಿದಿನವೂ ಹೋಮ ಮಾಡುತ್ತಲಿದ್ದು ಅವನಿಗೆ ಆ ಹೋಮದ್ರವ್ಯಕ್ಕೆ ಬದಲು ಅನ್ನವನ್ನು ಕೊಡದೆ ವಂಚಿಸಿ ಅವನ ಅನ್ನವನ್ನು ಪ್ರಾಶನಮಾಡಿದ ದ್ವಿಜನು ಯಥಾವಿಧಿಯಾಗಿ ಚಾಂದ್ರಾಯಣ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

೨೬. ಎಲ್ಲ ಕಡೆಯಲ್ಲಿಯೂ ಸಂಸ್ಕಾರಗಳಿಂದ ಪರಿಷ್ಕರಿಸಿದ ಉತ್ತಮಾನ್ನದ ಲೋಭದಿಂದ ಅಭೋಜ್ಯವಾದ ಅನ್ನವನ್ನೂ, ಚಂಡಾಲನ ಅನ್ನವನ್ನೂ ಭುಂಜಿಸಿದರೆ ತಪ್ತಕೃಚ್ಛ್ರಪ್ರಾಯಶ್ಚಿತ್ತದಿಂದ ಶುದ್ಧನಾಗುತ್ತಾನೆ.

೨೭. ದ್ವಿಜನು ಚಂಡಾಲನ ಅನ್ನವನ್ನು ಅಜ್ಞಾನದಿಂದ ತಿಂದರೆ ಚಾಂದ್ರಾಯಣವ್ರತವನ್ನು ಸಾಂಗವಾಗಿ ಮಾಡಿ ಶುದ್ಧನಾಗುತ್ತಾನೆ. ಬುದ್ಧಿಪೂರ್ವಕವಾಗಿ ಅದನ್ನು ಭುಂಜಿಸಿದ ಒಂದು ಸಂವತ್ಸರಪೂರ್ತಿಯಾಗಿ ಕೃಚ್ಛ್ರಪ್ರಾಯಶ್ಚಿತ್ತವನ್ನೂ ಪುನಃ ಸಂಸ್ಕಾರವನ್ನೂ ಮಾಡಿ ಶುದ್ಧನಾಗುತ್ತಾನೆ.

ಅಸುರಾಮದ್ಯಪಾನೇನ ಕುರ್ಯಾಚ್ಚಾಂದ್ರಾಯಣವ್ರತಮ್ ।
ಅಭೋಜ್ಯಾನ್ನಂ ತು ಭುಕ್ತ್ವಾ ಚ ಪ್ರಾಜಾಪತ್ಯೇನ ಶುದ್ಧ್ಯತಿ ॥ ೨೮ ॥

ವಿಣ್ಮೂತ್ರಪ್ರಾಶನಂ ಕೃತ್ವಾ ರೇತಸಶ್ಚೈತದಾಚರೇತ್ ।
ಅನಾದಿಷ್ಟೇ ತು ಚೈಕಾಹಂ ಸರ್ವತ್ರ ತು ಯಥಾರ್ಥತಃ ॥ ೨೯ ॥

ವಿಡ್ವರಾಹಖರೋಷ್ಟ್ರಾಣಾಂ ಗೋಮಾಯೋಃ ಕಪಿಕಾಕಯೋಃ ।
ಪ್ರಾಶ್ಯ ಮೂತ್ರಪುರೀಷಾಣಿ ದ್ವಿಜಶ್ಚಾಂದ್ರಾಯಣಂ ಚರೇತ್ ॥ ೩೦ ॥

ಅಜ್ಞಾನಾತ್ ಪ್ರಾಶ್ಯ ವಿಣ್ಮೂತ್ರಂ ಸುರಾಸಂಸ್ಪೃಷ್ಟಮೇವ ಚ ।
ಪುನಃ ಸಂಸ್ಕಾರಮರ್ಹಂತಿ ತ್ರಯೋ ವರ್ಣಾ ದ್ವಿಜಾತಯಃ ॥ ೩೧ ॥

೨೮. ಸುರೆಯಲ್ಲದ ಇತರ ಜಾತಿಯ ಮದ್ಯಪಾನದಿಂದ ಪತಿತನಾದವನು ಚಾಂದ್ರಾಯಣ ವ್ರತವನ್ನು ಶುದ್ಧಿಗೋಸ್ಕರ ಆಚರಿಸಬೇಕು. ಅಭೋಜ್ಯವಾದ ಅನ್ನವನ್ನು ಭುಂಜಿಸಿದರೆ ಪ್ರಾಜಾಪತ್ಯವ್ರತಾಚರಣೆಯಿಂದ ಶುದ್ಧಿಯಾಗುವುದು.

೨೯. ಮೂತ್ರ, ಪುರೀಷ, ರೇತಸ್ಸುಗಳ ಪ್ರಾಶನವನ್ನು ಮಾಡಿದರೆ ಪ್ರಾಜಾಪತ್ಯ ವ್ರತಾನುಷ್ಠಾನವನ್ನು ಮಾಡಬೇಕು. ಹೀಗೆ ಪ್ರಾಯಶ್ಚಿತ್ತಕ್ಕೆ ಕಾಲವನ್ನು ವಿಧಿಸದಿರುವ ಪಾಪಕರ್ಮಗಳಲ್ಲಿ ಎಲ್ಲ ಒಂದುದಿನ ಅವಧಿಯನ್ನು ತಿಳಿಯಬೇಕು.

೩೦. ವಿಟ್, ವರಾಹ, ಗರ್ದಭ, ಉಷ್ಟ್ರ ಜಂಬುಕ, ಕಪಿ ಮತ್ತು ಕಾಕಗಳ ಮೂತ್ರಪುರೀಷಗಳನ್ನು ಪ್ರಾಶನಮಾಡಿರುವ ದ್ವಿಜನು ಆ ಅಭಕ್ಷ್ಯ ಭಕ್ಷಣ ಪಾಪದ ಶಾಂತಿಗೋಸ್ಕರ ಚಾಂದ್ರಾಯಣವ್ರತವನ್ನು ಮಾಡಬೇಕು.

೩೧. ದ್ವಿಜಾತಿಗಳೆಂದು ಎನಿಸಿರುವ ಬ್ರಹ್ಮ, ಕ್ಷತ್ರ, ವೈಶ್ಯರೆಂಬ ತ್ರೈವರ್ಣಿಕರು ಅಜ್ಞಾನವಶದಿಂದ ಮೂತ್ರ ಪುರೀಷಗಳನ್ನೂ, ಮದ್ಯಸಂಪರ್ಕವನ್ನು ಹೊಂದಿದ ವಸ್ತುವನ್ನೂ ಪ್ರಾಶನಮಾಡಿ ಪುನಃ ಸಂಸ್ಕಾರಕ್ಕೆ ಅರ್ಹರಾಗುವರು.

ಕ್ರವ್ಯಾದಾಂ ಪಕ್ಷಿಣಾಂ ಚೈವ ಪ್ರಾಶ್ಯ ಮೂತ್ರಪುರೀಷಕಮ್ ।
ಮಹಾಸಾಂತಪನಂ ಮೋಹಾತ್ತಥಾ ಕುರ್ಯಾದ್ದ್ವಿಜೋತ್ತಮಃ ॥ ೩೨ ॥

ಭಾಸಮಂಡೂಕಕುರರೇ ವಿಷ್ಕಿರೇ ಕೃಚ್ಛ್ರಮಾಚರೇತ್ ।
ಪ್ರಾಜಾಪತ್ಯೇನ ಶುದ್ಧ್ಯೇತ ಬ್ರಾಹ್ಮಣೋಚ್ಛಿಷ್ಟಭೋಜನೇ ॥ ೩೩ ॥

ಕ್ಷತ್ರಿಯೇ ತಪ್ತಕೃಚ್ಛ್ರಂ ಸ್ಯಾದ್ವೈಶ್ಯೇ ಚೈವಾತಿಕೃಚ್ಛ್ರಕಮ್ ।
ಶೂದ್ರೋಚ್ಛಿಷ್ಟಾನ್ ದ್ವಿಜೋ ಭುಕ್ತ್ವಾ ಕುರ್ಯಾಚ್ಚಾಂದ್ರಾಯಣ ವ್ರತಮ್ ॥ ೩೪ ॥

ಸುರಾಯಾ ಭಾಂಡಕೇ ವಾರಿ ಪೀತ್ವಾ ಚಾಂದ್ರಾಯಣಂ ಚರೇತ್ ।
ಸಮುಚ್ಛಿಷ್ಟಂ ದ್ವಿಜೋ ಭುಕ್ತ್ವಾ ತ್ರಿರಾತ್ರೇಣ ವಿಶುದ್ಧ್ಯತಿ ॥ ೩೫ ॥

---

೩೨. ದ್ವಿಜಶ್ರೇಷ್ಠನು ಮಾಂಸಾಶನಮಾಡುವ ಪಶುಗಳ ಮತ್ತು ಪಕ್ಷಿಗಳ ಮೂತ್ರ ಪುರೀಷಗಳನ್ನು ಮೋಹದಿಂದ ಪ್ರಾಶನಮಾಡಿದರೆ ಆ ಪಾಪವನ್ನು ಕಳೆದ ಕೊಳ್ಳಲು ಮಹಾಸಾಂತಪನ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

೩೩. ಭಾಸಪಕ್ಷಿ, ಮಂಡೂಕ, ಕುರರಪಕ್ಷಿ ಮತ್ತು ಇತರ ಪಕ್ಷಿಸಾಮಾನ್ಯವನ್ನು ಭುಂಜಿಸಿದವನು ಕೃಚ್ಛ್ರಪ್ರಾಯಶ್ಚಿತ್ತವನ್ನು ಮಾಡಬೇಕು. ಬ್ರಾಹ್ಮಣರ ಉಚ್ಛಿಷ್ಟಭೋಜನ ಮಾಡಿದರೆ ಪ್ರಾಜಾಪತ್ಯವ್ರತಾಚರಣೆಯಿಂದ ಶುದ್ಧನಾಗುವನು.

೩೪. ದ್ವಿಜನು ಕ್ಷತ್ರಿಯನ ಉಚ್ಛಿಷ್ಟವನ್ನು ಭುಂಜಿಸಿದರೆ ತಪ್ತಕೃಚ್ಛ್ರವನ್ನೂ ವೈಶ್ಯನ ಉಚ್ಛಿಷ್ಟಭೋಜನಮಾಡಿದರೆ ಅತಿಕೃಚ್ಛ್ರ ಪ್ರಾಯಶ್ಚಿತ್ತವನ್ನೂ ಮತ್ತು ಶೂದ್ರನ ಉಚ್ಛಿಷ್ಟವನ್ನು ಭುಂಜಿಸಿದರೆ ಚಾಂದ್ರಾಯಣವ್ರತವನ್ನೂ ಆಚರಿಸಬೇಕು.

೩೫. ಸುರೆಯ ಪಾತ್ರದಲ್ಲಿ ಸಂಪರ್ಕಹೊಂದಿದ ಜಲವನ್ನು ಪಾನಮಾಡಿದರೆ ಚಾಂದ್ರಾಯಣ ವ್ರತವನ್ನು ಆಚರಿಸಬೇಕು. ದ್ವಿಜನು ಪರನ ಉಚ್ಛಿಷ್ಟವನ್ನು ಭುಂಜಿಸಿದರೆ ತ್ರಿರಾತ್ರವ್ರತಾನುಷ್ಠಾನದಿಂದ ಪರಿಶುದ್ಧನಾಗುತ್ತಾನೆ.

ಗೋಮೂತ್ರಯಾವಕಾಹಾರಃ ಪೀತಶೇಷಂ ಚ ವಾ ಗವಾಮ್ ॥ ೩೬ ॥

ಅಪೋ ಮೂತ್ರಪುರೀಷಾದ್ಯೈರ್ದೂಷಿತಾಃ ಪ್ರಾಶಯೇದ್ಯದಿ ।
ತದಾ ಸಾಂತಪನಂ ಕೃಚ್ಛ್ರಂ ವ್ರತಂ ಪಾಪವಿಶೋಧನಮ್ ॥ ೩೭ ॥

ಚಾಂಡಾಲಕೂಪೇ ಭಾಂಡೇಷು ಯದಿ ಜ್ಞಾನಾತ್ ಪಿಬೇಜ್ಜಲಮ್ ।
ಚರೇತ್ ಸಾಂತಪನಂ ಕೃಚ್ಛ್ರಂ ಬ್ರಾಹ್ಮಣಃ ಪಾಪಶೋಧನಮ್ ॥೩೮॥

ಚಾಂಡಾಲೇನ ತು ಸಂಸ್ಪೃಷ್ಟಂ ಪೀತ್ವಾ ವಾರಿ ದ್ವಿಜೋತ್ತಮಃ ।
ತ್ರಿರಾತ್ರವ್ರತಮುಖ್ಯೇನ ಪಂಚಗವ್ಯೇನ ಶುದ್ಧ್ಯತಿ ॥ ೩೯ ॥

---

೩೬. ಆ ತ್ರಿರಾತ್ರವ್ರತವನ್ನು ಆಚರಿಸುವ ಸಮಯದಲ್ಲಿ ಗೋಮೂತ್ರ ಅಥವಾ ಯಾವಕವೆಂಬ ಧಾನ್ಯ, ಮತ್ತು ಗೋವುಗಳು ಪಾನಮಾಡಿ ಮಿಕ್ಕಿರುವ ಜಲಾದಿಗಳ ಆಹಾರವನ್ನು ಸೇವಿಸುತ್ತಿರಬೇಕು.

೩೭. ಮೂತ್ರ ಪುರೀಷಗಳಿಂದ ಸಂಪರ್ಕಹೊಂದಿ ದುಷ್ಟವಾದ ಜಲವನ್ನು ಪ್ರಾಶನಮಾಡುವುದಾದರೆ ಆಗ ಸಾಂತಪನ ಕೃಚ್ಛ್ರಪ್ರಾಯಶ್ಚಿತ್ತಗಳು ಆ ಪಾಪ ಗಳನ್ನು ಕಳೆದು ಪರಿಶುದ್ಧಿಯನ್ನು ಉಂಟುಮಾಡುವುವು.

೩೮. ಬ್ರಾಹ್ಮಣನು ಚಂಡಾಲನ ಕೂಪದಲ್ಲಿಯೂ ಚಂಡಾಲನ ಪಾತ್ರ ಗಳಲ್ಲಿಯೂ, ಇರುವ ಜಲವನ್ನು ಜ್ಞಾನಪೂರ್ವಕವಾಗಿ ಪಾನಮಾಡಿದರೆ ಸಾಂತಪನ ಕೃಚ್ಛ್ರಪ್ರಾಯಶ್ಚಿತ್ತಗಳನ್ನು ಆಚರಿಸಬೇಕು. ಈ ಪ್ರಾಯಶ್ಚಿತ್ತಾನುಷ್ಠಾನದಿಂದ ಪಾಪನಿವೃತ್ತಿಯಾಗುವುದು.

೩೯. ದ್ವಿಜಶ್ರೇಷ್ಠನು ಚಾಂಡಾಲನಿಂದ ಸ್ಪರ್ಶಿಸಲ್ಪಟ್ಟ ಜಲವನ್ನು ಪಾನ ಮಾಡಿ, ಪಂಚಗವ್ಯ ಪ್ರಾಶನವೆಂಬ ಮುಖ್ಯವ್ರತದಿಂದ ಕೂಡಿದ ತ್ರಿರಾತ್ರಪ್ರಾಯ ಶ್ಚಿತ್ತಾನುಷ್ಠಾನದಿಂದ ಶುದ್ಧಿಯನ್ನು ಹೊಂದುವನು.

ಮಹಾಪಾತಕಿಸಂಸ್ಪರ್ಶೇ ಭುಕ್ತ್ವಾ ಸ್ನಾತ್ವಾ ದ್ವಿಜೋ ಯದಿ ।
ಬುದ್ಧಿಪೂರ್ವಂ ಯದಾ ಮೋಹಾತ್ ತಪ್ತಕೃಚ್ಛ್ರಂ ಸಮಾಚರೇತ್ ॥

ಸ್ಪೃಷ್ಟ್ವಾ ಮಹಾಪಾತಕಿನಂ ಚಂಡಾಲಂ ಚ ರಜಸ್ವಲಾಮ್ ।
ಪ್ರಮಾದಾದ್ಭೋಜನಂ ಕೃತ್ವಾ ತ್ರಿರಾತ್ರೇಣ ವಿಶುದ್ಧ್ಯತಿ ॥ ೪೧ ॥

ಸ್ನಾನಾರ್ಹೋ ಯದಿ ಭುಂಜೀತ ಹ್ಯಹೋರಾತ್ರೇಣ ಶುದ್ಧ್ಯತಿ ।
ಬುದ್ಧಿಪೂರ್ವಂ ತು ಕೃಚ್ಛ್ರೇಣ ಭಗವಾನಾಹ ಪದ್ಮಜಃ ॥ ೪೨ ॥

ಭುಕ್ತ್ವಾ ಪರ್ಯುಷಿತಾದೀನಿ ಗವಾದಿಪ್ರತಿದೂಷಿತಾಃ ।
ಭುಕ್ತ್ವೋಪವಾಸಂ ಕುರ್ವೀತ ಕೃಚ್ಛ್ರಪಾದಮಥಾಪಿ ವಾ ॥ ೪೩ ॥

---

೪೦. ದ್ವಿಜನು ಮಹಾಪಾತಕಿಯೊಡನೆ ಸಂಸ್ಪರ್ಶಹೊಂದಿ ಸ್ನಾನ ಭೋಜನಾದಿ ಕರ್ಮಗಳನ್ನು ಸಂಸ್ಪರ್ಶಜ್ಞಾನಪೂರ್ವಕವಾಗಿ ಅಜ್ಞಾನದಿಂದ ಮಾಡಿದರೆ ತಪ್ತಕೃಚ್ಛ್ರ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

೪೧, ಮಹಾಪಾತಕಿಯನ್ನೂ ಚಂಡಾಲನನ್ನೂ ಅಥವಾ ರಜಸ್ವಲೆಯನ್ನೂ ಸ್ಪರ್ಶಮಾಡಿ ಪ್ರಮಾದದಿಂದ ಹಾಗಿಯೇ ಭೋಜನವನ್ನು ಮಾಡಿದರೆ ಮೂರು ದಿನಗಳವರೆಗೆ ಪ್ರಾಯಶ್ಚಿತ್ತವ್ರತಾನುಷ್ಠಾನದಿಂದ ಶುದ್ಧನಾಗುತ್ತಾನೆ.

೪೨. ಯಾವುದಾದರೊಂದು ನಿಮಿತ್ತದಿಂದ ಸ್ನಾನಕ್ಕೆ ಅರ್ಹನಾದವನು ಹಾಗೆಯೇ ಭೋಜನಮಾಡಿದರೆ ಒಂದು ಅಹೋರಾತ್ರವ್ರತದಿಂದ ಶುದ್ಧನಾಗುತ್ತಾನೆ. ಆದರೆ ಬುದ್ಧಿಪೂರ್ವಕವಾಗಿ ಭುಂಜಿಸಿದರೆ ಕೃಚ್ಛ್ರವ್ರತಾನುಷ್ಠಾನದಿಂದ ಶುದ್ಧನಾಗುವನೆಂದು ಪೂಜ್ಯನಾದ ಬ್ರಹ್ಮದೇವನು ಬೋಧಿಸಿರುವನು.

೪೩. ಗೋವು ಮುಂತಾದ ಪ್ರಾಣಿಗಳ ಸ್ಪರ್ಶಾದಿಗಳಿಂದ ದುಷ್ಟವಾದ, ತಂಗಳು ಮುಂತಾದ ಅಭಕ್ಷ್ಯಗಳನ್ನು ಭುಂಜಿಸಿದರೆ ಆ ದೋಷಶಾಂತಿಗೆ ಉಪವಾಸ ಅಥವಾ ಪಾದಕೃಚ್ಛ್ರ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

ಸಂವತ್ಸರಾಂತೇ ಕೃಚ್ಛ್ರಂ ತು ಚರೇದ್ವಿಪ್ರಃ ಪುನಃ ಪುನಃ ।
ಅಜ್ಞಾತಭುಕ್ತಶುದ್ಧ್ಯರ್ಥಂ ಜ್ಞಾತಸ್ಯ ತು ವಿಶೇಷತಃ ॥ ೪೪ ॥

ವ್ರಾತ್ಯಾನಾಂ ಯಾಜನಂ ಕೃತ್ವಾ ಪರೇಷಾಮಂತ್ಯಕರ್ಮ ಚ ।
ಅಭಿಚಾರಮಹೀನಂ ಚ ತ್ರಿಭಿಃ ಕೃಚ್ಛ್ರೈರ್ವಿಶುದ್ಧ್ಯತಿ ॥ ೪೫ ॥

ಬ್ರಾಹ್ಮಣಾದಿಹತಾನಾಂ ತು ಕೃತ್ವಾ ದಾಹಾದಿಕಂ ದ್ವಿಜಃ ।
ಗೋಮೂತ್ರಯಾವಕಾಹಾರಃ ಪ್ರಾಜಾಪತ್ಯೇನ ಶುದ್ಧ್ಯತಿ ॥ ೪೬ ॥

ತೈಲಾಭ್ಯಕ್ತೋಽಥ ವಾಂತೋ ವಾ ಕುರ್ಯಾನ್ಮೂತ್ರಪುರೀಷಕೇ ।
ಅಹೋರಾತ್ರೇಣ ಶುದ್ಧ್ಯೇತ ಶ್ಮಶ್ರುಕರ್ಮಣಿ ಮೈಥುನೇ ॥ ೪೭ ॥

---

೪೪. ವಿಪ್ರನು ಅಜ್ಞಾನಪೂರ್ವಕವಾಗಿ ಅಭಕ್ಷ್ಯವನ್ನು ಭುಂಜಿಸಿದರೆ ಶುದ್ಧಿಗೋಸ್ಕರ ಪ್ರತಿಯೊಂದು ಸಂವತ್ಸರದ ಕಡೆಯಲ್ಲಿ ಮತ್ತೆ ಮತ್ತೆ ಕೃಚ್ಛ್ರ ಪ್ರಾಯಶ್ಚಿತ್ತವನ್ನೂ ಜ್ಞಾನಪೂರ್ವಕವಾಗಿ ಮಾಡಿದ ಆ ಪಾಪ ಪರಿಹಾರಕ್ಕೆ ವಿಶೇಷ ವಾಗಿ ಪ್ರಾಯಶ್ಚಿತ್ತಗಳನ್ನೂ ಮಾಡಬೇಕು.

೪೫. ಸಂಸ್ಕಾರ ಹೀನರಾದಂತಹ ಪತಿತರಿಗೆ ಯಾಗಮಾಡಿಸುವುದು, ಪರ ರಿಗೆ ಅಂತ್ಯಕರ್ಮವನ್ನು ಮಾಡುವುದು, ಮತ್ತು ಸಾಂಗವಾಗಿ ಪರರ ಮರಣಾರ್ಥ ವಾಗಿ ಅಭಿಚಾರ ಕರ್ಮಗಳನ್ನು ಮಾಡುವುದು, ಮುಂತಾದ ಪಾಪಗಳಿಂದ ಶುದ್ಧಿಯಾಗಲು ಮೂರು ಕೃಚ್ಛ್ರ ಪ್ರಾಯಶ್ಚಿತ್ತಗಳನ್ನು ಆಚರಿಸಬೇಕು.

೪೬. ದ್ವಿಜನು ಬ್ರಾಹ್ಮಣ ಮುಂತಾದವರಿಂದ ವಧಿಸಲ್ಪಟ್ಟವರಿಗೆ ದಾಹ ಸಂಚಯನ ಮುಂತಾದ ಕರ್ಮಗಳನ್ನು ನೆರವೇರಿಸಿದರೆ ಗೋಮೂತ್ರ ಯಾವಕ ಧಾನ್ಯಗಳ ಆಹಾರವನ್ನು ಸೇವಿಸುತ್ತ ಪ್ರಾಜಾಪತ್ಯ ವ್ರತಾಚರಣೆಯಿಂದ ಶುದ್ಧ ನಾಗುವನು.

೪೭. ತೈಲವನ್ನು ಲೇಪಿಸಿಕೊಂಡಿರುವ ಸಮಯದಲ್ಲಿಯೂ ವಮನಮಾಡಿದ ಸಮಯದಲ್ಲಿಯೂ, ಮೂತ್ರ-ಪುರೀಷಗಳನ್ನು ವಿಸರ್ಜನೆಮಾಡಿದರೆ ಅಹೋರಾತ್ರ ವ್ರತಾಚರಣೆಯಿಂದ ಶುದ್ಧನಾಗುತ್ತಾನೆ. ಆಯುಷ್ಕರ್ಮ, ಮೈಥುನ ಮುಂತಾದ ಅಶುಚಿ ಅವಸ್ಥೆಗಳಿಂದ ಒಂದು ಅಹೋರಾತ್ರದಲ್ಲಿ ಶುದ್ಧನಾಗುತ್ತಾನೆ.

ಏಕಾಹೇನ ವಿಹಾಯಾಗ್ನಿಂ ಪರಿಹಾಪ್ಯ ದ್ವಿಜೋತ್ತಮಃ ।
ತ್ರಿರಾತ್ರೇಣ ವಿಶುದ್ಧ್ಯೇತ ತ್ರಿರಾತ್ರಾತ್ ಷಡಹಃ ಪರಮ್ ॥ ೪೮ ॥

ದಶಾಹಂ ದ್ವಾದಶಾಹಂ ವಾ ಪರಿಹಾಪ್ಯ ಪ್ರಮಾದತಃ ।
ಕೃಚ್ಛ್ರಂ ಚಾಂದ್ರಾಯಣಂ ಕುರ್ಯಾತ್ ತತ್ಪಾಪಸ್ಯೋಪಶಾಂತಯೇ ॥

ಪತಿತಾದ್ದ್ರವ್ಯಮಾದಾಯ ತದುತ್ಸರ್ಗೇಣ ಶುದ್ಧ್ಯತಿ ।
ಚರೇಚ್ಚ ವಿಧಿನಾ ಕೃಚ್ಛ್ರಮಿತ್ಯಾಹ ಭಗವಾನ್ಮನುಃ ॥ ೫೦ ॥

ಅನಾಶಕಾನ್ನಿವೃತ್ತಾಸ್ತು ಪ್ರವ್ರಜ್ಯಾವಸಿತಾಸ್ತಥಾ ।
ಚರೇಯುಸ್ತ್ರೀಣಿ ಕೃಚ್ಛ್ರಾಣಿ ತ್ರೀಣಿ ಚಾಂದ್ರಾಯಣಾನಿ ಚ ॥ ೫೧ ॥

---

೪೮. ದ್ವಿಜಶ್ರೇಷ್ಠನು ಒಂದುದಿನ ಗೃಹ್ಯಾಗ್ನಿಯನ್ನು ಬಿಟ್ಟು ನಿರಗ್ನಿಯಾದರೆ ಮೂರುದಿನಗಳ ಪ್ರಾಯಶ್ಚಿತ್ತದಿಂದಲೂ ತ್ರಿರಾತ್ರದವರೆಗೆ ಅಗ್ನಿಯನ್ನು ಬಿಟ್ಟರೆ ಅದಕ್ಕಿಂತ ಹೆಚ್ಚಾಗಿ ಆರು ದಿನಗಳ ಪ್ರಾಯಶ್ಚಿತ್ತದಿಂದಲೂ ಶುದ್ಧನಾಗುತ್ತಾನೆ.

೪೯. ಪ್ರಮಾದದಿಂದ ಹತ್ತು ಅಥವಾ ಹನ್ನೆರಡು ದಿನಗಳವರೆಗೆ ನಿರಗ್ನಿಯಾಗುವುದಾದರೆ ಅಗ್ನಿತ್ಯಾಗದಿಂದ ಸಂಭವಿಸಿದ ಪಾಪದ ಶಾಂತಿಗೆ ಕೃಚ್ಛ್ರಚಾಂದ್ರಾಯಣ ಪ್ರಾಯಶ್ಚಿತ್ತಗಳನ್ನು ಮಾಡಬೇಕು.

೫೦. ಪತಿತನಿಂದ ದ್ರವ್ಯವನ್ನು ಸ್ವೀಕರಿಸಿದರೆ ಆ ದ್ರವ್ಯವನ್ನು ಪರಿತ್ಯಾಗ ಮಾಡಿ ಯಥಾವಿಧಿಯಾಗಿ ಕೃಚ್ಛ್ರಪ್ರಾಯಶ್ಚಿತ್ತಾಚರಣೆಯಿಂದ ಶುದ್ಧನಾಗುವನೆಂದು ಪೂಜ್ಯನಾದ ಮನುಪ್ರಜಾಪತಿಯು ಉಪದೇಶಮಾಡಿರುವನು.

೫೧. ಉಪವಾಸವೇ ಮುಖ್ಯವಾಗಿ ಇರುವ ವಾನಪ್ರಸ್ಥಾಶ್ರಮ ನಿಯಮದಿಂದಲೂ ಸನ್ಯಾಸಾಶ್ರಮನಿಯಮದಿಂದಲೂ ಹಿಂದೆ ಬಂದಿರುವವರು ಮೂರು ಕೃಚ್ಛ್ರಗಳನ್ನೂ ಮೂರು ಚಾಂದ್ರಾಯಣಗಳನ್ನೂ ಪ್ರಾಯಶ್ಚಿತ್ತರೂಪವಾಗಿ ಆಚರಿಸಬೇಕು.

ಪುನಶ್ಚ ಜಾತಕರ್ಮಾದಿಸಂಸ್ಕಾರೈಃ ಸಂಸ್ಕೃತಾ ದ್ವಿಜಾಃ ।
ಶುದ್ಧ್ಯೇಯುಸ್ತದ್ವ್ರತಂ ಸಮ್ಯಕ್ ಚರೇಯುರ್ಧರ್ಮದರ್ಶಿನಃ ॥ ೫೨ ॥

ಅನುಪಾಸಿತಸಂಧ್ಯಸ್ತು ತದಹರ್ಯಾವಕೇ ಭವೇತ್ ।
ಅನಶ್ನನ್ ಸಂಯುತಮನಾ ರಾತ್ರೌ ಚೇದ್ರಾತ್ರಿಮೇವ ಹಿ ॥ ೫೩ ॥

ಅಕೃತ್ವಾ ಸಮಿದಾಧಾನಂ ಶುಚಿಃ ಸ್ನಾತ್ವಾ ಸಮಾಹಿತಃ ।
ಗಾಯತ್ರ್ಯಷ್ಟಸಹಸ್ರಸ್ಯ ಜಪ್ಯಂ ಕುರ್ಯಾದ್ವಿಶುದ್ಧಯೇ ॥ ೫೪ ॥

ಉಪವಾಸೀ ಚರೇತ್ ಸಂಧ್ಯಾಂ ಗೃಹಸ್ಥೋ ಹಿ ಪ್ರಮಾದತಃ ।
ಸ್ನಾತ್ವಾ ವಿಶುದ್ಧ್ಯತೇ ಸದ್ಯಃ ಪರಿಶ್ರಾಂತಶ್ಚ ಸಂಯತಃ ॥ ೫೫ ॥

---

೫೨. ಮತ್ತು ಪುನಃ ಜಾತಕರ್ಮ ಮುಂತಾದ ಸಂಸ್ಕಾರಗಳಿಂದ ಸಂಸ್ಕರಿಸಲ್ಪಟ್ಟು ದ್ವಿಜರು ಶುದ್ಧಿಹೊಂದುವರು. ಈ ವ್ರತವನ್ನು ಧರ್ಮದಲ್ಲಿ ಶ್ರದ್ಧಾವಂತರಾಗಿ ಚನ್ನಾಗಿ ಆಚರಿಸಬೇಕು.

೫೩. ಸಂಧ್ಯೋಪಾಸನೆಯನ್ನು ಮಾಡದಿರುವವನು ಆ ದಿನದ ಹಗಲಿನಲ್ಲಿ ಯಾವಕ ಧಾನ್ಯವನ್ನು ಮಾತ್ರ ಭುಂಜಿಸಿಕೊಂಡಿರಬೇಕು. ಸಾಯಂಕಾಲದ ಸಂಧ್ಯೋಪಾಸನೆಯನ್ನು ಬಿಟ್ಟರೆ ಆ ರಾತ್ರಿಕಾಲ ಸಂಪೂರ್ಣವಾಗಿ ಉಪವಾಸಮಾಡಿ ಮನೋನಿಗ್ರಹದಿಂದ ಇರಬೇಕು.

೫೪. ಬ್ರಹ್ಮಚಾರಿಯು ಸಮಿದಾಧಾನವನ್ನು ಮಾಡದಿದ್ದರೆ ಸ್ನಾನಮಾಡಿ ಶುಚಿಯೂ ಶಾಂತಚಿತ್ತನೂ ಆಗಿ ಆ ದೋಷಶುದ್ಧಿಗೆ ಎಂಟು ಸಹಸ್ರ ಸಂಖ್ಯೆಯಷ್ಟು ಗಾಯತ್ರೀಮಂತ್ರ ಜಪವನ್ನು ಮಾಡಬೇಕು.

೫೫. ಗೃಹಸ್ಥಾಶ್ರಮಿಯು ಪ್ರಮಾದದಿಂದ ಸಂಧ್ಯಾಕರ್ಮವನ್ನು ಬಿಟ್ಟರೆ ಉಪವಾಸದಿಂದ ಇದ್ದು ಮತ್ತೆ ಆ ಸಂಧ್ಯಾವಂದನೆಯನ್ನು ಮಾಡಬೇಕು. ಪಾತಕಿಯು ಸ್ನಾನ, ಉಪವಾಸಾದಿಗಳಿಂದ ಆಯಾಸ, ಮತ್ತು ನಿಗ್ರಹಗಳಿಂದ ಕೂಡಲೆ ಶುದ್ಧನಾಗುವನು.

ವೇದೋದಿತಾನಿ ನಿತ್ಯಾನಿ ಕರ್ಮಾಣಿ ಚ ವಿಲೋಪ್ಯ ತು ।
ಸ್ನಾತಕೋ ವ್ರತಲೋಪಂ ತು ಕೃತ್ವಾ ಚೋಪವಸೇದ್ದಿನಮ್ ॥ ೫೬ ॥

ಸಂವತ್ಸರಂ ಚರೇತ್ ಕೃಚ್ಛ್ರಮನ್ಯೋತ್ಸಾದೀ ದ್ವಿಜೋತ್ತಮಃ ।
ಚಾಂದ್ರಾಯಣಂ ಚರೇದ್ವ್ರಾತ್ಯೋ ಗೋಪ್ರದಾನೇನ ಶುದ್ಧ್ಯತಿ ॥೫೭॥

ನಾಸ್ತಿಕ್ಯಂ ಯದಿ ಕುರ್ವೀತ ಪ್ರಾಜಾಪತ್ಯಂ ಚರೇದ್ದ್ವಿಜಃ ।
ದೇವದ್ರೋಹಂ ಗುರುದ್ರೋಹಂ ತಪ್ತಕೃಚ್ಛ್ರೇಣ ಶುದ್ಧ್ಯತಿ ॥ ೫೮ ॥

ಉಷ್ಟ್ರಯಾನಂ ಸಮಾರುಹ್ಯ ಖರಯಾನಂ ಚ ಕಾಮತಃ ।
ತ್ರಿರಾತ್ರೇಣ ವಿಶುಧ್ಯೇಚ್ಚ ನಗ್ನೋ ವಾ ಪ್ರವಿಶೇಜ್ಜಲಮ್ ॥ ೫೯ ॥

---

೫೬. ವೇದಗಳಲ್ಲಿ ವಿಧಿಸಿರುವ ನಿತ್ಯಕರ್ಮಗಳನ್ನು ಆಚರಿಸದೆ ಲೋಪ ಮಾಡಿರುವ ಪಾತಕಿಯು ಹಿಂದೆ ಹೇಳಿದ ಸ್ನಾನಾದಿಗಳನ್ನು ಮಾಡಬೇಕು. ಸ್ನಾತಕನು ತನ್ನ ವ್ರತಗಳಿಗೆ ಲೋಪಮಾಡಿದರೆ ಒಂದುದಿನ ಉಪವಾಸಮಾಡಬೇಕು.

೫೭. ಮತ್ತೊಬ್ಬರಿಗೆ ಪೀಡೆಯನ್ನು ಕೊಟ್ಟ ಬ್ರಾಹ್ಮಣೋತ್ತಮನು ಒಂದು ಸಂವತ್ಸರದ ಕಾಲದವರೆಗೆ ಕೃಚ್ಛ್ರಪ್ರಾಯಶ್ಚಿತ್ತವನ್ನು ಮಾಡಬೇಕು. ಮತ್ತು ಪತಿತನಾಗಿ ಸಂಸ್ಕಾರ ಹೀನನಾದ ವ್ರಾತ್ಯನು ಗೋದಾನ ಚಾಂದ್ರಾಯಣ ವ್ರತಗಳಿಂದ ಶುದ್ಧನಾಗುತ್ತಾನೆ.

೫೮. ದ್ವಿಜನು ಈಶ್ವರ ಮುಂತಾದ ಅತೀಂದ್ರಿಯ ವಸ್ತುಗಳಲ್ಲಿ ಶ್ರದ್ಧೆಯಿಡದೆ ನಾಸ್ತಿಕ್ಯಭಾವನೆಯನ್ನು ಮಾಡುವುದಾದರೆ ಪ್ರಾಜಾಪತ್ಯವ್ರತವನ್ನು ಆಚರಿಸಬೇಕು. ದೇವತಾದ್ರೋಹ, ಗುರುದ್ರೋಹಗಳನ್ನು ಮಾಡಿದರೆ ತಪ್ತಕೃಚ್ಛ್ರಪ್ರಾಯಶ್ಚಿತ್ತದಿಂದ ಶುದ್ಧನಾಗುತ್ತಾನೆ.

೫೯. ಒಂಟೆಯ ವಾಹನವನ್ನೂ ಗರ್ದಭವಾಹನವನ್ನೂ ತನ್ನ ಇಷ್ಟದಿಂದ ಏರುವುದಾದರೆ ಮೂರುದಿನಗಳವರೆಗೆ ವ್ರತಾಪ್ತ ಸ್ನಾನದಿಂದ ಪೂತನಾಗುತ್ತಾನೆ ಹಾಗು ದಿಗಂಬರನಾಗಿ ಜಲವನ್ನು ಪ್ರವೇಶಿಸಿದರೆ ಅವನಿಗೆ ತ್ರಿರಾತ್ರವ್ರತದಿಂದ ಶುದ್ಧಿಯಾಗುವುದು.

ಷಷ್ಠಾನ್ನಕಾಲತಾ ಮಾಸಂ ಸಂಹಿತಾಜಪ ಏವ ಚ ।
ಹೋಮಾಶ್ಚ ಶಾಕಲಾ ನಿತ್ಯಮಪಾಂಕ್ತಾನಾಂ ವಿಶೋಧನಮ್ ॥ ೬೦ ॥

ನೀಲಂ ರಕ್ತಂ ವಸಿತ್ವಾ ಚ ಬ್ರಾಹ್ಮಣೋ ವಸ್ತ್ರಮೇವ ಹಿ ।
ಅಹೋರಾತ್ರೋಷಿತಃ ಸ್ನಾತಃ ಪಂಚಗವ್ಯೇನ ಶುಧ್ಯತಿ ॥ ೬೧ ॥

ವೇದಧರ್ಮಪುರಾಣಾನಾಂ ಚಂಡಾಲಸ್ಯ ತು ಭಾಷಣೇ ।
ಚಾಂದ್ರಾಯಣೇನ ಶುದ್ಧಿಃ ಸ್ಯಾನ್ನ ಹ್ಯನ್ಯಾ ತಸ್ಯ ನಿಷ್ಕೃತಿಃ ॥ ೬೨ ॥

ಉದ್ಬಂಧನಾದಿನಿಹತಂ ಸಂಸ್ಪೃಶ್ಯ ಬ್ರಾಹ್ಮಣಂ ಕ್ವಚಿತ್ ।
ಚಾಂದ್ರಾಯಣೇನ ಶುದ್ಧಿಃ ಸ್ಯಾತ್ ಪ್ರಾಜಾಪತ್ಯೇನ ವಾ ಪುನಃ ॥ ೬೩ ॥

---

೬೦. ಪಂಕ್ತಿಬಾಹ್ಯರಿಗೆ ಆಯಾಯ ಪಾಪಗಳನ್ನು ಶೋಧಿಸಲು ಒಂದು ಮಾಸಪರ್ಯಂತವಾಗಿ ಹಗಲಿನ ಆರನೆಯ ಭಾಗದಲ್ಲಿ ಭುಂಜಿಸುವುದೂ, ಸಂಹಿತಾ ಪಾರಾಯಣವೂ, ಮತ್ತು ಶಾಕಲ ಮಂತ್ರಗಳಿಂದ ಮಾಡುವ ಹೋಮಗಳೂ, ಉತ್ತಮಪ್ರಾಯಶ್ಚಿತ್ತಗಳಾಗಿವೆ.

೬೧. ಬ್ರಾಹ್ಮಣನು ಕಪ್ಪು ಅಥವಾ ಕೆಂಪುಬಣ್ಣದ ವಸ್ತ್ರವನ್ನು ಧರಿಸಿದರೆ ಆ ಪಾಪದ ನಿವೃತ್ತಿಗೆ ಒಂದು ಅಹೋರಾತ್ರದವರೆಗೆ ಉಪವಾಸಮಾಡಿ ಸ್ನಾನ ಮತ್ತು ಪಂಚಗವ್ಯಪ್ರಾಶನಮಾಡಿ ಪರಿಶುದ್ಧನಾಗುತ್ತಾನೆ.

೬೨. ಚಂಡಾಲನಿಗೆ ವೇದ ಧರ್ಮಶಾಸ್ತ್ರ ಮತ್ತು ಪುರಾಣಗಳನ್ನು ಬೋಧಿಸಿದರೆ ಚಾಂದ್ರಾಯಣ ವ್ರತಾನುಷ್ಠಾನದಿಂದ ಆ ಪಾಪನಿವೃತ್ತಿಯಾಗುವುದು. ಇದು ಹೊರತು ಮತ್ತಾವ ಪ್ರಾಯಶ್ಚಿತ್ತವೂ ಇಲ್ಲ.

೬೩. ನೇಣು ಹಾಕಿಕೊಳ್ಳುವುದು ಮುಂತಾದ ವಿಧಾನದಿಂದ ಮರಣ ಹೊಂದಿದ ಬ್ರಾಹ್ಮಣನನ್ನು ಎಲ್ಲಿಯಾದರೂ ಸ್ಪರ್ಶಮಾಡಿದರೆ ಚಾಂದ್ರಾಯಣ ಅಥವಾ ಪ್ರಾಜಾಪತ್ಯ ಪ್ರಾಯಶ್ಚಿತ್ತಾನುಷ್ಠಾನದಿಂದ ಶುದ್ಧಿಯಾಗುತ್ತಾನೆ.

ಉಚ್ಛಿಷ್ಟೋ ಯದ್ಯನಾಚಾಂತಶ್ಚಾಂಡಾಲಾದೀನ್ ಸ್ಪೃಶೇದ್ದ್ವಿಜಃ ।
ಪ್ರಮಾದಾದ್ವೈ ಜಪೇತ್ ಸ್ನಾತ್ವಾ ಗಾಯತ್ರ್ಯಷ್ಟಸಹಸ್ರಕಮ್ ॥ ೬೪॥

ದ್ರುಪದಾನಾಂ ಶತಂ ವಾಪಿ ಬ್ರಹ್ಮಚಾರೀ ಸಮಾಹಿತಃ ।
ತ್ರಿರಾತ್ರೋಪೋಷಿತಃ ಸಮ್ಯಕ್ ಪಂಚಗವ್ಯೇನ ಶುದ್ಧ್ಯತಿ ॥ ೬೫ ॥

ಚಾಂಡಾಲಪತಿತಾದೀಂಸ್ತು ಕಾಮಾದ್ಯಃ ಸಂಸ್ಪೃಶೇದ್ದ್ವಿಜಃ ।
ಉಚ್ಛಿಷ್ಟಸ್ತತ್ರ ಕುರ್ವೀತ ಪ್ರಾಜಾಪತ್ಯಂ ವಿಶುದ್ಧಯೇ ॥ ೬೬ ॥

ಚಾಂಡಾಲಸೂತಕಿಶವಾಂಸ್ತಥಾ ನಾರೀಂ ರಜಸ್ವಲಾಮ್ ।
ಸ್ಪೃಷ್ಟ್ವಾ ಸ್ನಾಯಾದ್ವಿಶುದ್ಧ್ಯರ್ಥಂ ತತ್ಸ್ಪೃಷ್ಟಪತಿತಾಂಸ್ತಥಾ ॥ ೬೭ ॥

---

೬೪. ಉಚ್ಛಿಷ್ಟನಾದ ದ್ವಿಜನು ಪ್ರಮಾದದಿಂದ ಆಚಮನ ಮಾಡದೆ ಚಂಡಾಲ ಮುಂತಾದ ಅಶುಚಿಜನರನ್ನು ಸ್ಪರ್ಶಮಾಡಿದರೆ ಅಂತಹ ಪಾಪ ಪರಿಹಾರಕ್ಕೆ ಸ್ನಾನಮಾಡಿ ಎಂಟುಸಹಸ್ರ ಸಂಖ್ಯೆಯಷ್ಟು ಗಾಯತ್ರೀ ಮಂತ್ರವನ್ನು ಜಪಿಸಬೇಕು.

೬೫. ಬ್ರಹ್ಮಚರ್ಯನಿಯಮದಿಂದ ಕೂಡಿ ಶಾಂತಚಿತ್ತನಾಗಿ ದ್ರುಪದಾಮಂತ್ರವನ್ನು ಒಂದುನೂರು ಸಂಖ್ಯೆಯಷ್ಟು ಜಪಮಾಡಿ ಮೂರುದಿನ ಉಪವಾಸ ಮಾಡಿ ಪಂಚಗವ್ಯಪ್ರಾಶನದಿಂದ ಪವಿತ್ರನಾಗುತ್ತಾನೆ

೬೬. ಉಚ್ಛಿಷ್ಟನಾಗಿರುವ ದ್ವಿಜನು ಕಾಮನಾಪೂರ್ವಕವಾಗಿ ಚಂಡಾಲ, ಪತಿತ ಮುಂತಾದ ಅಶುಚಿಜನರನ್ನು ಸ್ಪರ್ಶಮಾಡಿದರೆ ಆ ಪಾಪದಿಂದ ಪರಿಶುದ್ಧಿ ಹೊಂದಲು ಪ್ರಾಜಾಪತ್ಯವ್ರತವನ್ನು ಆಚರಿಸಬೇಕು.

೬೭. ಚಂಡಾಲ, ಸೂತಕವುಳ್ಳವನು, ಶವ, ರಜಸ್ವಲೆಯಾದ ನಾರಿ, ಇವರ ಸ್ಪರ್ಶದಿಂದ ಅಪವಿತ್ರನಾದವನು ಮತ್ತು ಪತಿತ ಇವರನ್ನು ಸ್ಪರ್ಶಮಾಡಿದರೆ ಈ ಅಶುಚಿಸಂಗದಿಂದ ಶುದ್ಧನಾಗಲು ಸ್ನಾನಮಾಡಬೇಕು.

ಚಾಂಡಾಲಸೂತಕಿಶವೈಃ ಸಂಸ್ಪೃಷ್ಟಂ ಸಂಸ್ಪೃಶೇದ್ಯದಿ ।
ತತಃ ಸ್ನಾತ್ವಾಥ ಆಚಮ್ಯ ಜಪಂ ಕುರ್ಯಾತ್ ಸಮಾಹಿತಃ ॥ ೬೮ ॥

ತತ್ಸ್ಪೃಷ್ಟಸ್ಪರ್ಶಿನಂ ಸ್ಪೃಷ್ಟ್ವಾ ಬುದ್ಧಿಪೂರ್ವಂ ದ್ವಿಜೋತ್ತಮಃ ।
ಸ್ನಾತ್ವಾಚಮೇದ್ವಿಶುದ್ಧ್ಯರ್ಥಂ ಪ್ರಾಹ ದೇವಃ ಪಿತಾಮಹಃ ॥ ೬೯ ॥

ಭುಂಜಾನಸ್ಯ ತು ವಿಪ್ರಸ್ಯ ಕದಾಚಿತ್ ಸಂಸ್ಪೃಶೇದ್ಯದಿ ।
ಕೃತ್ವಾ ಶೌಚಂ ತತಃ ಸ್ನಾಯಾದುಪೋಷ್ಯ ಜುಹುಯಾದ್ವ್ರತವ್ ॥

ಚಾಂಡಾಲಂ ತು ಶವಂ ಸ್ಪೃಷ್ಟ್ವಾ ಕೃಚ್ಛ್ರಂ ಕುರ್ಯಾದ್ವಿಶುದ್ಧ್ಯತಿ ।
ಸ್ಪೃಷ್ಟ್ವಾಭ್ಯಕ್ತಸ್ತ್ವಸಂಸ್ಪೃಶ್ಯ ಅಹೋರಾತ್ರೇಣ ಶುದ್ಧ್ಯತಿ ॥ ೭೧ ॥

---

೬೮. ಚಂಡಾಲ, ಸೂತಕಿ, ಶವಗಳಿಂದ ಸ್ಪರ್ಶಹೊಂದಿದವರನ್ನು ಸ್ಪರ್ಶ ಮಾಡಿದರೆ ಆಗ ಸ್ನಾನ ಆಚಮನಗಳನ್ನು ಮಾಡಿ ಶಾಂತಚಿತ್ತನಾಗಿದ್ದು ಮಂತ್ರಜಪ ವನ್ನು ಮಾಡಬೇಕು.

೬೯. ಬ್ರಾಹ್ಮಣೋತ್ತಮನು ಚಂಡಾಲಾದಿಗಳ ಸ್ಪರ್ಶವುಳ್ಳವನನ್ನು ಸ್ಪರ್ಶ ಮಾಡಿದವನನ್ನು ಬುದ್ಧಿಪೂರ್ವಕವಾಗಿ ಸ್ಪರ್ಶಮಾಡಿದರೆ ಅದರಿಂದ ಶುದ್ಧಿಹೊಂದಲು ಸ್ನಾನ ಆಚಮನಗಳನ್ನು ಮಾಡಬೇಕೆಂದು ಲೋಕಪಿತಾಮಹನಾದ ಬ್ರಹ್ಮದೇವನು ಉಪದೇಶಿಸಿರುವನು.

೭೦. ಭೋಜನಮಾಡುತ್ತಿರುವ ಸಮಯದಲ್ಲಿ ಉಚ್ಛಿಷ್ಟನಾದ ಬ್ರಾಹ್ಮಣ ನನ್ನು ಯಾವಾಗಲಾದರೂ ಮುಟ್ಟಿದರೆ ಶೌಚಾನುಷ್ಠಾನವನ್ನು ಮಾಡಿ ಸ್ನಾನ ಮತ್ತು ಉಪವಾಸ ಮಾಡಿ ಕೂಷ್ಮಾಂಡ ಹೋಮವ್ರತವನ್ನು ಮಾಡಬೇಕು.

೭೧. ಚಂಡಾಲ, ಶವಗಳನ್ನು ಸ್ಪರ್ಶಮಾಡಿದರೆ ಕೃಚ್ಛ್ರಪ್ರಾಯಶ್ಚಿತ್ತಾ ನುಷ್ಠಾನದಿಂದ ಶುದ್ಧನಾಗುತ್ತಾನೆ. ತಾನು ಸ್ಪರ್ಶಮಾಡದೆ ಸ್ಪರ್ಶಿಯಾದ ಮತ್ತೊ ಬ್ಬನಿಂದ ಸ್ಪರ್ಶಹೊಂದಿದರೆ ಅಹೋರಾತ್ರವ್ರತದಿಂದ ಶುದ್ಧನಾಗುವನು.

ಸುರಾಂ ಸ್ಪೃಷ್ಟ್ವಾ ದ್ವಿಜಃ ಕುರ್ಯಾತ್ ಪ್ರಾಣಾಯಾಮತ್ರಯಂ ಶುಚಿಃ।
ಪಲಾಂಡುಂ ಲಶುನಂ ಚೈವ ಘೃತಂ ಪ್ರಾಶ್ಯ ತತಃ ಶುಚಿಃ ॥ ೭೨ ॥

ಬ್ರಾಹ್ಮಣಸ್ತು ಶುನಾ ದಷ್ಟಸ್ತ್ರ್ಯಹಂ ಸಾಯಂ ಪಯಃ ಪಿಬೇತ್ ।
ನಾಭೇರೂರ್ಧ್ವಂ ತು ದಷ್ಟಸ್ಯ ತದೇವ ದ್ವಿಗುಣಂ ಭವೇತ್ ॥ ೭೩ ॥

ಸ್ಯಾದೇತತ್ತ್ರಿಗುಣಂ ಬಾಹ್ವೋರ್ಮೂರ್ಧ್ನಿ ಚ ಸ್ಯಾಚ್ಚತುರ್ಗುಣಮ್ ।
ಸ್ನಾತ್ವಾ ಜಪೇದ್ವಾ ಸಾವಿತ್ರೀಂ ಶ್ವಭಿರ್ದಷ್ಟೋ ದ್ವಿಜೋತ್ತಮಃ ॥ ೭೪ ॥

ಅನಿವರ್ತ್ಯ ಮಹಾಯಜ್ಞಾನ್ ಯೋ ಭುಂಕ್ತೇ ತು ದ್ವಿಜೋತ್ತಮಃ ।
ಅನಾತುರಃ ಸತಿ ಧನೇ ಕೃಚ್ಛ್ರಾರ್ಧೇನ ಸ ಶುದ್ಧ್ಯತಿ ॥ ೭೫ ॥

---

೭೨. ದ್ವಿಜನು ಸುರೆಯನ್ನು ಸ್ಪರ್ಶಮಾಡಿದರೆ ಮೂರುಸಲ ಪ್ರಾಣಾಯಾಮ ಮಾಡುವುದರಿಂದ ಶುದ್ಧನಾಗುತ್ತಾನೆ. ಹಾಗು ಪಲಾಂಡು ಲಶುನಗಳನ್ನು ಭಕ್ಷಿಸಿದರೆ ಘೃತವನ್ನು ಪ್ರಾಶನಮಾಡುವುದರಿಂದ ಶುಚಿಯಾಗುತ್ತಾನೆ.

೭೩. ನಾಯಿಯಿಂದ ಕಡಿಯಲ್ಪಟ್ಟ ಬ್ರಾಹ್ಮಣನು ಮೂರು ದಿನಗಳವರೆಗೆ ಸಾಯಂಕಾಲ ಹಾಲನ್ನು ಕುಡಿಯಬೇಕು. ನಾಭಿಯಿಂದ ಮೇಲುಭಾಗದ ಅಂಗದಲ್ಲಿ ಕಡಿದರೆ ಆ ಪ್ರಾಯಶ್ಚಿತ್ತವನ್ನು ದ್ವಿಗುಣವಾಗಿ ಆಚರಿಸಬೇಕು.

೭೪. ಭುಜಗಳಲ್ಲಿ ಕಡಿಯಲ್ಪಟ್ಟವನಿಗೆ ತ್ರಿಗುಣವಾದ ಪ್ರಾಯಶ್ಚಿತ್ತವೂ ಶಿರದಲ್ಲಿ ಕಡಿಯಲ್ಪಟ್ಟವನಿಗೆ ಚತುರ್ಗುಣಪ್ರಾಯಶ್ಚಿತ್ತವೂ ವಿಹಿತವಾಗಿವೆ. ಅಥವಾ ನಾಯಿಗಳಿಂದ ಕಡಿಯಲ್ಪಟ್ಟ ದ್ವಿಜೋತ್ತಮನು ಸ್ನಾನಮಾಡಿ ಸಾವಿತ್ರೀ ಜಪವನ್ನು ಮಾಡಬೇಕು.

೭೫. ಯಾವ ದ್ವಿಜಶ್ರೇಷ್ಠನು ಯಾವುದೊಂದು ವಿಪತ್ತು ಇಲ್ಲದಿರುವಾಗಲೂ ಧನಸಂಪತ್ತಿಯಿರುವಾಗಲೂ ಮಹಾಯಜ್ಞಗಳನ್ನು ಮಾಡದಿರುವನೊ; ಅವನು ಕೃಚ್ಛ್ರಪ್ರಾಯಶ್ಚಿತ್ತದಿಂದಲೂ ಪರಿಶುದ್ಧನಾಗುತ್ತಾನೆ.

ಆಹಿತಾಗ್ನಿರುಪಸ್ಥಾನಂ ನ ಕುರ್ಯಾದ್ಯಸ್ತು ಪರ್ವಣಿ ।
ಋತೌ ನ ಗಚ್ಛೇದ್ಭಾರ್ಯಾಂ ವಾ ಸೋಽಪಿ ಕೃಚ್ಛ್ರಾರ್ಧಮಾಚರೇತ್

ವಿನಾದ್ಭಿರಪ್ಸು ನಾಪ್ಯಾರ್ತಃ ಶರೀರಂ ಸನ್ನಿವೇಶ್ಯ ಚ ।
ಸಚೈಲೋ ಜಲಮಾಪ್ಲುತ್ಯ ಗಾಮಾಲಭ್ಯ ವಿಶುಧ್ಯತಿ　　॥ ೭೭ ॥

ಬುದ್ಧಿಪೂರ್ವಂ ತ್ವಭ್ಯುದಿತೇ ಜಪೇದಂತರ್ಜಲೇ ದ್ವಿಜಃ ।
ಗಾಯತ್ರ್ಯಷ್ಟಸಹಸ್ರಂ ತು ತ್ರ್ಯಹಂ ಚೋಪವಸೇದ್ದ್ವಿಜಃ　　॥ ೭೮ ॥

ಅನುಗಮ್ಯೇಚ್ಛಯಾ ಶೂದ್ರಂ ಪ್ರೇತೀಭೂತಂ ದ್ವಿಜೋತ್ತಮಃ ।
ಗಾಯತ್ರ್ಯಷ್ಟಸಹಸ್ರಂ ಚ ಜಪಂ ಕುರ್ಯಾನ್ನದೀಷು ಚ　　॥ ೭೯ ॥

---

೭೬. ಆಹಿತಾಗ್ನಿಯಾಗಿದ್ದ ಯಾವ ಗೃಹಸ್ಥನು ಪರ್ವಸಮಯದಲ್ಲಿ ಇಷ್ಟಿಯನ್ನು ಮಾಡಿ ಉಪಸ್ಥಾನ ಮಾಡುವುದಿಲ್ಲವೋ, ಮತ್ತು ಯಾವ ಗೃಹಸ್ಥನು ಋತುಸಮಯದಲ್ಲಿ ಭಾರ್ಯೆಯ ಸಂಗವನ್ನು ಮಾಡುವುದಿಲ್ಲವೋ ಅವನು ಕೃಚ್ಛ್ರ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.

೭೭. ಜಲವನ್ನು ಸ್ವೀಕರಿಸುವ ನಿಮಿತ್ತವಿಲ್ಲದವನೂ, ಪೀಡಾಗ್ರಸ್ತನಲ್ಲದವನೂ ಜಲದಲ್ಲಿ ಶರೀರವನ್ನು ನಿಷ್ಕಾರಣವಾಗಿ ಇರಿಸಿದವನೂ ವಸ್ತ್ರಸಹಿತನಾಗಿ ಜಲಾವಗಾಹನಸ್ನಾನಮಾಡಿ ಗೋಸ್ಪರ್ಶಪ್ರಾಯಶ್ಚಿತ್ತದಿಂದ ಪೂತನಾಗುತ್ತಾನೆ.

೭೮. ದ್ವಿಜನು ಪ್ರವಾಹರೂಪವಾಗಿ ಉದಯಿಸಿದ ಜಲರಾಶಿಯೊಳಗೆ ಬುದ್ಧಿಪೂರ್ವಕವಾಗಿ ಜಪಕರ್ಮವನ್ನು ಮಾಡಿದವನು ಎಂಟು ಸಹಸ್ರ ಸಂಖ್ಯೆಯಷ್ಟು ಗಾಯತ್ರೀ ಮಂತ್ರವನ್ನೂ ಮೂರು ದಿನಗಳವರೆಗೆ ಉಪವಾಸವನ್ನೂ ಆಚರಿಸಬೇಕು.

೭೯. ದ್ವಿಜಶ್ರೇಷ್ಠನು ಮರಣವನ್ನು ಹೊಂದಿರುವ ಶೂದ್ರನನ್ನು ತನ್ನ ಇಚ್ಛಾಪೂರ್ವಕವಾಗಿ ಹಿಂಬಾಲಿಸಿದರೆ ಆ ಪಾಪ ಕರ್ಮಕ್ಕೆ ಪ್ರಾಯಶ್ಚಿತ್ತವಾಗಿ ನದೀತೀರ ಭೂಮಿಗಳಲ್ಲಿ ಎಂಟು ಸಹಸ್ರ ಸಂಖ್ಯೆಯಷ್ಟು ಗಾಯತ್ರೀಮಂತ್ರ ಜಪವನ್ನು ಆಚರಿಸಬೇಕು.

ಕೃತ್ವಾ ತು ಶಪಥಂ ವಿಪ್ರೋ ವಿಪ್ರಸ್ಯಾವಧಿಸಂಯುತಮ್ ।
ಸ ಚೈವ ಯಾವಕಾನ್ನೇನ ಕುರ್ಯಾಚ್ಚಾಂದ್ರಾಯಣಂ ವ್ರತಮ್॥೮೦॥

ಪಂಕ್ತ್ಯಾಂ ವಿಷಮದಾನಂ ತು ಕೃತ್ವಾ ಕೃಚ್ಛ್ರೇಣ ಶುದ್ಧ್ಯತಿ ।
ಛಾಯಾಂ ಶ್ವಪಾಕಸ್ಯಾರುಹ್ಯ ಸ್ನಾತ್ವಾ ಸಂಪ್ರಾಶಯೇದ್ಘೃತಮ್॥ ೮೧ ॥

ಈಕ್ಷೇದಾದಿತ್ಯಮಶುಚಿರ್ದೃಷ್ಟ್ವಾಗ್ನಿಂ ಚಂದ್ರಮೇವ ವಾ ।
ಮಾನುಷಂ ಚಾಸ್ಥಿ ಸಂಸ್ಪೃಶ್ಯ ಸ್ನಾನಂ ಕೃತ್ವಾ ವಿಶುದ್ಧ್ಯತಿ ॥ ೮೨ ॥

ಕೃತ್ವಾ ತು ಮಿಥ್ಯಾಧ್ಯಯನಂ ಚರೇದ್ಭೈಕ್ಷಂ ತು ವತ್ಸರಮ್ ।
ಕೃತಘ್ನೋ ಬ್ರಾಹ್ಮಣಗೃಹೇ ಪಂಚಸಂವತ್ಸರವ್ರತೀ ೮೩॥

---

೮೦. ವಿಪ್ರನು ವಿಪ್ರನ ಸನ್ನಿಧಿಯಲ್ಲಿ ಒಂದು ಅವಧಿಯಿಂದ ಕೂಡಿದ ಶಪಥವನ್ನು ಮಾಡಿದರೆ ಯಾವಕ ಧಾನ್ಯದ ಅನ್ನವನ್ನು ಆಹಾರವನ್ನಾಗಿ ಭುಂಜಿಸುತ್ತ ಚಾಂದ್ರಾಯಣವ್ರತಪ್ರಾಯಶ್ಚಿತ್ತವನ್ನು ಮಾಡಬೇಕು.

೮೧. ಒಂದು ಪಂಕ್ತಿಯಲ್ಲಿ ಕುಳಿತಿರುವವರಲ್ಲಿ ನ್ಯೂನಾಧಿಕಭಾವವೈಷಮ್ಯದಿಂದ ಅನ್ನದಾನಮಾಡಿದವನು ಕೃಚ್ಛ್ರಾನುಷ್ಠಾನದಿಂದ ಪೂತನಾಗುತ್ತಾನೆ. ಚಂಡಾಲನ ಛಾಯೆಯನ್ನು ಲಂಘಿಸಿದರೆ ಸ್ನಾನ–ಘೃತಪ್ರಾಶನಗಳನ್ನು ಮಾಡಬೇಕು.

೮೨. ಅಶುಚಿಯಾಗಿದ್ದ ಸಮಯದಲ್ಲಿ ಸೂರ್ಯನನ್ನು ಸಂದರ್ಶಿಸಿದರೆ ಅಥವಾ ಚಂದ್ರ, ಅಗ್ನಿಗಳನ್ನು ಕಂಡರೆ ಮತ್ತು ಮನುಷ್ಯನ ಅಸ್ಥಿಯನ್ನು ಸ್ಪರ್ಶಮಾಡಿದರೆ ಸ್ನಾನಮಾಡುವುದರಿಂದ ಶುದ್ಧನಾಗುತ್ತಾನೆ.

೮೩. ಕಪಟದಿಂದ ಅಧ್ಯಯನಮಾಡಿದವನು ಒಂದು ಸಂವತ್ಸರ ಪೂರ್ತಿಯಾಗಿ ಭಿಕ್ಷಾಟನೆಯನ್ನು ಮಾಡಬೇಕು. ಹಾಗು ಕೃತಘ್ನನಾದವನು ಬ್ರಾಹ್ಮಣನ ಆಶ್ರಯದಲ್ಲಿ ಐದು ವರ್ಷಗಳವರೆಗೆ ಪ್ರಾಯಶ್ಚಿತ್ತವ್ರತವನ್ನು ಆಚರಿಸಬೇಕು.

ಹುಂಕಾರಂ ಬ್ರಾಹ್ಮಣಸ್ಯೋಕ್ತ್ವಾ ತ್ವಂಕಾರಂ ಚ ಗರೀಯಸಃ ।
ಸ್ನಾತ್ವಾ ನಾಶ್ನನ್ನಹಃಶೇಷಂ ಪ್ರಣಿಪತ್ಯ ಪ್ರಸಾದಯೇತ್ ॥ ೮೪ ॥

ತಾಡಯಿತ್ವಾ ತೃಣೇನಾಪಿ ಕಂಠಂ ಬದ್ಧ್ವಾಥ ವಾಸಸಾ ।
ವಿವಾದೇ ಚಾಪಿ ನಿರ್ಜಿತ್ಯ ಪ್ರಣಿಪತ್ಯ ಪ್ರಸಾದಯೇತ್ ॥ ೮೫ ॥

ಅವಗೂರ್ಯ ಚರೇತ್ ಕೃಚ್ಛ್ರಮತಿಕೃಚ್ಛ್ರಂ ನಿಪಾತನೇ ।
ಕೃಚ್ಛ್ರಾತಿ ಕೃಚ್ಛ್ರೌ ಕುರ್ವೀತ ವಿಪ್ರಸ್ಯೋತ್ಪಾದ್ಯ ಶೋಣಿತಮ್ ॥

ಗುರೋರಾಕ್ರೋಶಮನೃತಂ ಕುರ್ಯಾತ್ ಕೃತ್ವಾ ವಿಶೋಧನಮ್ ।
ಏಕರಾತ್ರಂ ನಿರಾಹಾರಸ್ತತ್ಪಾಪಸ್ಯಾಪನುತ್ತಯೇ ॥ ೮೭ ॥

---

೮೪. ಹಿರಿಯವನಾದ ಬ್ರಾಹ್ಮಣನಿಗೆ ಹುಂ, ತ್ವಂ ಮುಂತಾದ ಗದರಿಸುವ ದುರುಕ್ತಿಗಳನ್ನು ಹೇಳಿದರೆ ಸ್ನಾನಮಾಡಿ ದಿನಶೇಷದಲ್ಲಿ ಉಪವಾಸಮಾಡಿ ಆ ಬ್ರಾಹ್ಮಣನನ್ನು ನಮಸ್ಕಾರಾದಿಗಳಿಂದ ಸಂತೋಷಗೊಳಿಸಬೇಕು.

೮೫. ಹುಲ್ಲುಕಡ್ಡಿಯಿಂದ ಕೂಡ ಹೊಡೆದರಾಗಲಿ, ವಸ್ತ್ರದಿಂದ ಕಂಠವನ್ನು ಬಂಧಿಸಿದರಾಗಲಿ ; ವಾದದಲ್ಲಿ ಜಯಿಸಿದರಾಗಲಿ ಅಂತಹ ಬ್ರಾಹ್ಮಣನಿಗೆ ನಮಸ್ಕಾರಾದಿ ಸತ್ಕಾರಗಳಿಂದ ಪ್ರಸನ್ನತೆಯನ್ನು ಉಂಟುಮಾಡಬೇಕು.

೮೬. ಇಂತಹ ದುಷ್ಕೃತ್ಯಗಳನ್ನು ಸಂಕಲ್ಪಿಸಿದರೆ ಕೃಚ್ಛ್ರಪ್ರಾಯಶ್ಚಿತ್ತವನ್ನು, ಅದನ್ನು ಆಚರಿಸಿ ಬ್ರಾಹ್ಮಣನನ್ನು ವಧಿಸಿದರೆ ಅತಿ ಕೃಚ್ಛ್ರಪ್ರಾಯಶ್ಚಿತ್ತವನ್ನು ವಿಪ್ರನಿಗೆ ದೇಹದಲ್ಲಿ ರಕ್ತಸ್ರಾವವನ್ನು ಉಂಟುಮಾಡಿದರೆ ಕೃಚ್ಛ್ರ ಅತಿ ಕೃಚ್ಛ್ರ ಪ್ರಾಯಶ್ಚಿತ್ತಗಳೆನ್ನು ಆಚರಿಸಬೇಕು.

೮೭. ತಾನು ಅಜ್ಞಾನದಿಂದ ಮಾಡಿದ ಗುರುನಿಂದೆಯನ್ನು ಅದಕ್ಕೆ ವಿಹಿತವಾದ ಪ್ರಾಯಶ್ಚಿತ್ತದಿಂದ ಇಲ್ಲದಂತೆ ಮಾಡಬೇಕು. ಆ ಪಾಪದ ಪರಿಹಾರಕ್ಕೆ ಒಂದು ದಿನ ಉಪವಾಸವ್ರತವನ್ನು ಆಚರಿಸಬೇಕು.

ದೇವರ್ಷೀಣಾಮಭಿಮುಖಂ ಷ್ಠೀವನಾಕ್ರೋಶನೇ ಕೃತೇ ।
ಉಲ್ಮುಕೇನ ದಹೇಜ್ಜಿಹ್ವಾಂ ದಾತವ್ಯಂ ಚ ಹಿರಣ್ಯಕಮ್ ॥ ೮೮ ॥

ದೇವೋದ್ಯಾನೇಷು ಯಃ ಕುರ್ಯಾನ್ಮೂತ್ರೋಚ್ಚಾರಂ ಸಕೃದ್ದ್ವಿಜಃ ।
ಛಿಂದ್ಯಾಚ್ಛಿಶ್ನಂ ವಿಶುದ್ಧ್ಯರ್ಥಂ ಚರೇಚ್ಚಾಂದ್ರಾಯಣಂ ವ್ರತಮ್ ॥

ದೇವತಾಯತನೇ ಮೂತ್ರಂ ಕೃತ್ವಾ ಮೋಹಾದ್ದ್ವಿಜೋತ್ತಮಃ ।
ಶಿಶ್ನಸ್ಯೋತ್ಕರ್ತನಂ ಕೃತ್ವಾ ಚಾಂದ್ರಾಯಣಮಥಾಚರೇತ್ ॥ ೯೦ ॥

ದೇವತಾನಾಮೃಷೀಣಾಂ ಚ ದೇವಾನಾಂ ಚೈವ ಕುತ್ಸನಮ್ ।
ಕೃತ್ವಾ ಸಮ್ಯಕ್ ಪ್ರಕುರ್ವೀತ ಪ್ರಾಜಾಪತ್ಯಂ ದ್ವಿಜೋತ್ತಮಃ ॥ ೯೧ ॥

---

೮೮. ದೇವತೆಗಳಿಗೂ ಋಷಿಗಳಿಗೂ ಅಭಿಮುಖವಾಗಿ ಎಂಜಲನ್ನು ಉಗಿಯುವುದು ಮತ್ತು ನಿಂದಿಸುವುದು ಮುಂತಾದ ನಿಷಿದ್ಧ ಕರ್ಮಗಳನ್ನು ಮಾಡಿದರೆ ಬೆಂಕಿಯ ಕೊಳ್ಳಿಯಿಂದ ನಾಲಿಗೆಯನ್ನು ಸುಟ್ಟು ಸ್ವಲ್ಪ ಹಿರಣ್ಯವನ್ನು ದಾನಮಾಡಬೇಕು.

೮೯. ದೇವತೆಗಳ ಉದ್ಯಾನವನಗಳಲ್ಲಿ ಯಾವ ದ್ವಿಜನು ಒಂದಾವರ್ತಿಯಾದರೂ ಮೂತ್ರ ವಿಸರ್ಜನೆಯನ್ನು ಮಾಡುವನೊ; ಅವನು ಆ ಪಾಪಶುದ್ಧಿಗೋಸ್ಕರ ಶಿಶ್ನವನ್ನು ಛೇದಿಸಿ ಚಾಂದ್ರಾಯಣವ್ರತವನ್ನು ಆಚರಿಸಬೇಕು.

೯೦. ದ್ವಿಜಶ್ರೇಷ್ಠನು ಮೋಹಪರತಂತ್ರನಾಗಿ ದೇವಾಲಯದಲ್ಲಿ ಮೂತ್ರೋತ್ಸರ್ಗವನ್ನು ಮಾಡಿದರೆ ಅವನು ಶಿಶ್ನವನ್ನು ಛೇದಿಸಿ ಚಾಂದ್ರಾಯಣವ್ರತ ಪ್ರಾಯಶ್ಚಿತ್ತವನ್ನು ಮಾಡಿ ಶುದ್ಧನಾಗುವನು.

೯೧. ದ್ವಿಜೋತ್ತಮನು ದೇವತೆ, ಋಷಿ, ಬ್ರಾಹ್ಮಣರ ನಿಂದೆಯನ್ನು ಮಾಡಿದರೆ ಆ ಪ್ರತ್ಯವಾಯ ಪರಿಹಾರಾರ್ಥವಾಗಿ ಚನ್ನಾಗಿ ಪ್ರಾಜಾಪತ್ಯವ್ರತರೂಪವಾದ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

ತೈಸ್ತು ಸಂಭಾಷಣಂ ಕೃತ್ವಾ ಸ್ನಾತ್ವಾ ದೇವಂ ಸಮರ್ಚಯೇತ್ ।
ದೃಷ್ಟ್ವಾ ವೀಕ್ಷೇತ ಭಾಸ್ವಂತಂ ಸ್ಮೃತ್ವಾ ವಿಶ್ವೇಶ್ವರಂ ಸ್ಮರೇತ್ ॥ ೯೨ ॥

ಯಃ ಸರ್ವಭೂತಾಧಿಪತಿಂ ವಿಶ್ವೇಶಾನಂ ವಿನಿಂದತಿ ।
ನ ತಸ್ಯ ನಿಷ್ಕೃತಿಃ ಶಕ್ಯಾ ಕರ್ತುಂ ವರ್ಷಶತೈರಪಿ ॥ ೯೩ ॥

ಚಾಂದ್ರಾಯಣಂ ಚರೇತ್ ಪೂರ್ವಂ ಕೃಚ್ಛ್ರಂ ಚೈವಾತಿಕೃಚ್ಛ್ರಕಮ್ ।
ಪ್ರಸನ್ನಃ ಶರಣಂ ದೇವಂ ತಸ್ಮಾತ್ ಪಾಪಾತ್ ಪ್ರಮುಚ್ಯತೇ ॥ ೯೪ ॥

ಸರ್ವಸ್ವದಾನಂ ವಿಧಿವತ್ ಸರ್ವಪಾಪವಿಶೋಧನಮ್ ॥ ೯೫ ॥

---

೯೨. ದೇವತಾನಿಂದಕರಾದ ಜನರೊಡನೆ ಸಂಭಾಷಣೆಯನ್ನು ಮಾಡಿದರೆ ಸ್ನಾನಮಾಡಿ ದೇವತಾರ್ಚನೆಯನ್ನು ಮಾಡಬೇಕು. ಅಂತಹವರನ್ನು ನೋಡಿದರೆ ಸೂರ್ಯದೇವನನ್ನು ಸಂದರ್ಶಿಸಬೇಕು. ಹಾಗು ಅಂತಹವರ ಸ್ಮರಣೆ ಮಾಡಿದರೆ ವಿಶ್ವೇಶ್ವರಸ್ವಾಮಿಯನ್ನು ಸ್ಮರಿಸಬೇಕು.

೯೩. ಯಾವ ಮಾನವನು ಸಮಸ್ತ ಭೂತಗಳಿಗೆ ಅಧಿಪತಿಯಾದ ವಿಶ್ವೇಶ್ವರ ಸ್ವಾಮಿಯನ್ನು ನಿಂದಿಸುವನೊ; ಅವನಿಂದ ಆ ಪಾಪಕರ್ಮಕ್ಕೆ ನೂರಾರು ಸಂವತ್ಸರ ಗಳು ಕಳೆದರೂ ಪ್ರಾಯಶ್ಚಿತ್ತವನ್ನು ಮಾಡಲು ಶಕ್ಯವಾಗುವುದಿಲ್ಲ.

೯೪. ಮೊದಲು ಚಾಂದ್ರಾಯಣವ್ರತವನ್ನೂ ತರುವಾಯ ಕೃಚ್ಛ್ರಪ್ರಾಯಶ್ಚಿತ್ತ ವನ್ನೂ, ಅನಂತರ ಅತಿಕೃಚ್ಛ್ರಪ್ರಾಯಶ್ಚಿತ್ತವನ್ನೂ ಮಾಡಿ ವಿಶ್ವೇಶ್ವರಸ್ವಾಮಿಯನ್ನು ಶರಣುಹೊಂದಿದರೆ ಆ ಪಾಪದಿಂದ ಬಿಡುಗಡೆಹೊಂದುತ್ತಾನೆ.

೯೫. ಹಾಗು ನ್ಯಾಯಾರ್ಜಿತವಾದ ತನ್ನ ಸರ್ವಸ್ವವನ್ನು ದಾನಮಾಡುವುದು ಸಮಸ್ತ ಪಾಪಗಳನ್ನು ಧ್ವಂಸಮಾಡುವ ಪ್ರಾಯಶ್ಚಿತ್ತವಾಗಿರುವುದು.

ಚಾಂದ್ರಾಯಣಂ ಚ ವಿಧಿನಾ ಕೃಚ್ಛ್ರಂ ಚೈವಾತಿಕೃಚ್ಛ್ರಕಮ್ ।
ಪುಣ್ಯಕ್ಷೇತ್ರಾಭಿಗಮನಂ ಸರ್ವಪಾಪವಿಶೋಧನಮ್ ॥ ೯೬ ॥

ಅಮಾವಾಸ್ಯಾಂ ತಿಥಿಂ ಪ್ರಾಪ್ಯ ಯಃ ಸಮಾರಾಧಯೇದ್ಭವಮ್ ।
ಬ್ರಾಹ್ಮಣಾನ್ ಪೂಜಯಿತ್ವಾ ತು ಸರ್ವಪಾಪೈಃ ಪ್ರಮುಚ್ಯತೇ ॥ ೯೭ ॥

ಕೃಷ್ಣಾಷ್ಟಮ್ಯಾಂ ಮಹಾದೇವಂ ತಥಾ ಕೃಷ್ಣಚತುರ್ದಶೀಮ್ ।
ಸಂಪೂಜ್ಯ ಬ್ರಾಹ್ಮಣಮುಖೇ ಸರ್ವಪಾಪೈಃ ಪ್ರಮುಚ್ಯತೇ ॥ ೯೮ ॥

ತ್ರಯೋದಶ್ಯಾಂ ತಥಾ ರಾತ್ರೌ ಸೋಪಹಾರಂ ತ್ರಿಲೋಚನಮ್ ।
ದೃಷ್ಟ್ವೇಶಂ ಪ್ರಥಮೇ ಯಾಮೇ ಮುಚ್ಯತೇ ಸರ್ವಪಾತಕೈಃ ॥ ೯೯ ॥

---

೯೬. ವಿಧಿವತ್ತಾಗಿ ಚಾಂದ್ರಾಯಣವ್ರತ, ಕೃಚ್ಛ್ರ, ಅತಿಕೃಚ್ಛ್ರ ಮತ್ತು ಪುಣ್ಯಕ್ಷೇತ್ರಗಳಲ್ಲಿ ತೀರ್ಥಾಟನ, ಇವುಗಳೆಲ್ಲವೂ ಸಮಸ್ತ ಪಾಪಗಳನ್ನು ಧ್ವಂಸ ಮಾಡುವ ಪ್ರಾಯಶ್ಚಿತ್ತಗಳಾಗಿರುವುವು.

೯೭. ಯಾವ ಮಾನವನು ಅಮಾವಾಸ್ಯಾತಿಥಿಯನ್ನು ಹೊಂದಿ ಬ್ರಾಹ್ಮಣರ ಸತ್ಕಾರಪೂರ್ವಕವಾಗಿ ಈಶ್ವರನನ್ನು ಆರಾಧಿಸುವನೋ, ಅವನು ಈ ಪ್ರಾಯಶ್ಚಿತ್ತದಿಂದ ಸಕಲ ಪಾಪಗಳಿಂದ ಮುಕ್ತನಾಗುತ್ತಾನೆ.

೯೮. ಕೃಷ್ಣಪಕ್ಷದ ಅಷ್ಟಮಿಯಲ್ಲಿಯೂ ಚತುರ್ದಶಿಯಲ್ಲಿಯೂ ಬ್ರಾಹ್ಮಣರನ್ನು ಪೂಜಿಸಿ, ಬ್ರಾಹ್ಮಣದ್ವಾರಾ ಮಹಾದೇವನನ್ನು ಪೂಜಿಸಿದರೆ ಸಮಸ್ತ ಪಾಪಗಳಿಂದ ಮುಕ್ತನಾಗುವನು.

೯೯. ತ್ರಯೋದಶೀ ತಿಥಿಯಲ್ಲಿ ರಾತ್ರಿಯ ಪ್ರಾರಂಭದ ಮೊದಲನೆಯ ಯಾಮದಲ್ಲಿ ಮೂರು ಲೋಚನಗಳಿಂದ ಕೂಡಿದ ವಿಶ್ವೇಶ್ವರಸ್ವಾಮಿಯನ್ನು ದರ್ಶನ ಮಾಡಿದರೆ ಸರ್ವಪಾತಕಗಳಿಂದ ನಿರ್ಮುಕ್ತನಾಗುತ್ತಾನೆ.

ಉಪೋಷಿತಶ್ಚತುರ್ದಶ್ಯಾಂ ಕೃಷ್ಣಪಕ್ಷೇ ಸಮಾಹಿತಃ ।
ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ ॥ ೧೦೦ ॥

ವೈವಸ್ವತಾಯ ಕಾಲಾಯ ಸರ್ವಪ್ರಾಣಹರಾಯ ಚ ।
ಪ್ರತ್ಯೇಕಂ ತಿಲಸಂಯುಕ್ತಾನ್ ದದ್ಯಾತ್ ಸಪ್ತೋದಕಾಂಜಲೀನ್ ॥

ಸ್ನಾತ್ವಾ ದದ್ಯಾಚ್ಚ ಪೂರ್ವಾಹ್ಣೇ ಮುಚ್ಯತೇ ಸರ್ವಪಾತಕೈಃ ॥೧೦೨॥

ಬ್ರಹ್ಮಚರ್ಯಮಧಃ ಶಯ್ಯಾ ಉಪವಾಸೋ ದ್ವಿಜಾರ್ಚನಮ್ ।
ವ್ರತೇಷ್ವೇತೇಷು ಕುರ್ವೀತ ಶಾಂತಃ ಸಂಯತಮಾನಸಃ ॥ ೧೦೩ ॥

---

೧೦೦. ಕೃಷ್ಣಪಕ್ಷದಲ್ಲಿ ಬರುವ ಚತುರ್ದಶೀ ತಿಥಿಯಲ್ಲಿ, ಉಪವಾಸವನ್ನು ಮಾಡಿ ಶಾಂತಚಿತ್ತನಾಗಿ ಮುಂದೆ ಹೇಳುವ ಯಮಧರ್ಮರಾಜನ ಚತುರ್ಥೀ, ವಿಭಕ್ತ್ಯಂತ ಮಂತ್ರಗಳನ್ನು ಉಚ್ಚರಿಸಿ ತಿಲಾಂಜಲಿಯನ್ನು ಬಿಡಬೇಕು. ಯಮಾಯ ಧರ್ಮರಾಜಾಯ, ಮೃತ್ಯವೇ, ಮತ್ತು ಅಂತಕಾಯ " ಎಂಬುವು ಯಮನನ್ನು ಬೋಧಿಸುವ ಮೊದಲಿನ ನಾಲ್ಕು ಮಂತ್ರಗಳಾಗಿವೆ.

೧೦೧. ಹಾಗು " ವೈವಸ್ವತಾಯ ಕಾಲಾಯ, ಸರ್ವಪ್ರಾಣಹರಾಯ " ಎಂಬ ಮೂರು ಮಂತ್ರಗಳನ್ನು ಸೇರಿಸಿ ಒಟ್ಟು ಏಳುಮಂತ್ರಗಳಿಂದ ಪ್ರತ್ಯೇಕವಾಗಿ ತಿಲದಿಂದ ಕೂಡಿದ ಏಳು ಜಲಾಂಜಲಿಗಳನ್ನು ಯಮದೇವತೆಗೆ ಅರ್ಪಿಸಬೇಕು.

೧೦೨. ಸ್ನಾನಮಾಡಿ ಪವಿತ್ರನಾಗಿ ಪೂರ್ವಾಹ್ಣದ ಸಮಯದಲ್ಲಿ ಹಿಂದೆ ಹೇಳಿದ ತರ್ಪಣಾಂಜಲಿಗಳನ್ನು ಕೊಡುವುದರಿಂದ ಸರ್ವಪಾತಕಗಳಿಂದಲೂ ಮುಕ್ತನಾಗುತ್ತಾನೆ.

೧೦೩. ಹೀಗೆ ಹೇಳಿದ ಪ್ರತಿಯೊಂದು ಪ್ರಾಯಶ್ಚಿತ್ತವ್ರತಗಳಲ್ಲಿ ಶಾಂತನೂ, ಜಿತವಾದ ಮಾನಸವುಳ್ಳವನೂ ಆಗಿ ಬ್ರಹ್ಮಚರ್ಯವನ್ನು, ಭೂಮಿಶಯನ, ಉಪವಾಸ, ಮತ್ತು ದ್ವಿಜರ ಸತ್ಕಾರ ಇವುಗಳನ್ನು ಅವಶ್ಯಕವಾಗಿ ಮಾಡಬೇಕು.

ಅಮಾವಾಸ್ಯಾಯಾಂ ಬ್ರಹ್ಮಾಣಂ ಸಮುದ್ದಿಶ್ಯ ಪಿತಾಮಹಮ್ ।
ಬ್ರಾಹ್ಮಣಾಂಸ್ತ್ರೀನ್ ಸಮಭ್ಯರ್ಚ್ಯ ಮುಚ್ಯತೇ ಸರ್ವಪಾತಕೈಃ ॥ ೧೦೪॥

ಷಷ್ಠ್ಯಾಮುಪೋಷಿತೋ ದೇವಂ ಶುಕ್ಲಪಕ್ಷೇ ಸಮಾಹಿತಃ ।
ಸಪ್ತಮ್ಯಾಮರ್ಚಯೇದ್ಭಾನುಂ ಮುಚ್ಯತೇ ಸರ್ವಪಾತಕೈಃ ॥ ೧೦೫ ॥

ಭರಣ್ಯಾಂ ಚ ಚತುರ್ಥ್ಯಾಂ ಚ ಶನೈಶ್ಚರದಿನೇ ಯಮಮ್ ।
ಪೂಜಯೇತ್ ಸಪ್ತಜನ್ಮೋತ್ಥೈರ್ಮುಚ್ಯತೇ ಪಾತಕೈರ್ನರಃ ॥ ೧೦೬ ॥

ಏಕಾದಶ್ಯಾಂ ನಿರಾಹಾರಃ ಸಮಭ್ಯರ್ಚ್ಯ ಜನಾರ್ದನಮ್ ।
ದ್ವಾದಶ್ಯಾಂ ಶುಕ್ಲಪಕ್ಷಸ್ಯ ಮಹಾಪಾಪೈಃ ಪ್ರಮುಚ್ಯತೇ ॥ ೧೦೭ ॥

---

೧೦೪. ಅಮಾವಾಸ್ಯಾ ತಿಥಿಯಲ್ಲಿ ಲೋಕಕ್ಕೆ ಪಿತಾಮಹನಾದ ಬ್ರಹ್ಮದೇವನ ಪ್ರೀತಿಯನ್ನು ಉದ್ದೇಶಿಸಿ ಮೂರುಮಂದಿ ಬ್ರಾಹ್ಮಣರನ್ನು ಉಪಚಾರಾದಿಗಳಿಂದ ಸತ್ಕರಿಸಿದರೆ ಸಮಸ್ತ ಪಾತಕಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ.

೧೦೫. ಶುಕ್ಲಪಕ್ಷದ ಷಷ್ಠೀತಿಥಿಯಲ್ಲಿ ಉಪವಾಸಮಾಡಿ ಶಾಂತಚಿತ್ತನಾಗಿದ್ದು ಸಪ್ತಮೀ ತಿಥಿಯ ಪ್ರಾತಃಕಾಲದಲ್ಲಿ ಸೂರ್ಯದೇವನನ್ನು ಅರ್ಚಿಸಿದರೆ ಸಮಸ್ತ ಪಾತಕಸಂಸರ್ಗದಿಂದ ಮುಕ್ತಿಹೊಂದುತ್ತಾನೆ.

೧೦೬. ಭರಣೀನಕ್ಷತ್ರ, ಚತುರ್ಥೀತಿಥಿ, ಮತ್ತು ಶನೈಶ್ಚರನ ವಾರದಲ್ಲಿ ಯಮ, ಧರ್ಮರಾಜನನ್ನು ಪೂಜಿಸಿದರೆ ಮಾನವನು ಹಿಂದೆ ಏಳುಜನ್ಮಗಳಲ್ಲಿ ಮಾಡಿದ್ದ ಪಾಪಕರ್ಮಬಂಧನದಿಂದ ಮುಕ್ತಿಹೊಂದುತ್ತಾನೆ.

೧೦೭. ಶುಕ್ಲಪಕ್ಷದ ಏಕಾದಶೀ ತಿಥಿಯಲ್ಲಿ ನಿರಾಹಾರನಾಗಿ ದುಷ್ಟನಿಗ್ರಹಿಯಾದ ವಿಷ್ಣುವನ್ನು ಪೂಜೆಮಾಡಿ ದ್ವಾದಶಿಯಲ್ಲಿ ಪಾರಣವ್ರತವನ್ನು ಮಾಡಿದರೆ ಮಹಾಪಾತಕಗಳಿಂದ ನಿರ್ಮುಕ್ತನಾಗುತ್ತಾನೆ.

ತಪೋ ಜಪಸ್ತೀರ್ಥಸೇವಾ ದೇವಬ್ರಾಹ್ಮಣಪೂಜನಮ್ ।
ಗ್ರಹಣಾದಿಷು ಕಾಲೇಷು ಮಹಾಪಾತಕಶೋಧನಮ್ ॥ ೧೦೮ ॥

ಯಃ ಸರ್ವಪಾಪಯುಕ್ತೋಽಪಿ ಪುಣ್ಯತೀರ್ಥೇಷು ಮಾನವಃ ।
ನಿಯಮೇನ ತ್ಯಜೇತ್ ಪ್ರಾಣಾನ್ ಮುಚ್ಯತೇ ಸರ್ವಪಾತಕೈಃ ॥೧೦೯॥

ಬ್ರಹ್ಮಘ್ನಂ ವಾ ಕೃತಘ್ನಂ ವಾ ಮಹಾಪಾತಕದೂಷಿತಮ್ ।
ಭರ್ತಾರಮುದ್ಧರೇನ್ನಾರೀ ಪ್ರವಿಷ್ಟಾ ಸಹ ಪಾವಕಮ್ ॥ ೧೧೦ ॥

ಏತದೇವ ಪರಂ ಸ್ತ್ರೀಣಾಂ ಪ್ರಾಯಶ್ಚಿತ್ತಂ ವಿದುರ್ಬುಧಾಃ ॥ ೧೧೧ ॥

---

೧೦೮. ಗ್ರಹಣ ಮುಂತಾದ ದುರ್ಲಭವಾದ ಪುಣ್ಯಕಾಲಗಳಲ್ಲಿ ತಪಸ್ಸು, ಜಪ, ಪುಣ್ಯತೀರ್ಥಗಳ ಸೇವನೆ, ದೇವತಾರ್ಚನೆ, ಮತ್ತು ಬ್ರಾಹ್ಮಣ ಸತ್ಕಾರಗಳು ಮಹಾಪಾತಕಗಳಿಂದ ಶುದ್ಧಿಮಾಡುವ ಪ್ರಾಯಶ್ಚಿತ್ತಗಳಾಗಿರುವುವು.

೧೦೯. ಯಾವ ಮಾನವನು ಎಲ್ಲ ಮಹಾಪಾತಕಗಳನ್ನು ಮಾಡಿ ದುಷ್ಟನಾಗಿದ್ದರೂ ಕೂಡ ನಿಯಮಪೂರ್ವಕವಾಗಿ ಪುಣ್ಯತೀರ್ಥಕ್ಷೇತ್ರಗಳಲ್ಲಿ ವಾಸಮಾಡಿ ಅಲ್ಲಿ ಪ್ರಾಣಗಳನ್ನು ತ್ಯಜಿಸುವನೋ, ಅವನು ಸರ್ವಪಾಪಗಳಿಂದ ಬಿಡಲ್ಪಡುವನು.

೧೧೦. ಪತಿವ್ರತೆಯಾದ ನಾರಿಯು ಪತಿಯೊಡನೆ ಸಹಗಮನಮಾಡಿ ಅಗ್ನಿ ಪ್ರವೇಶಮಾಡಿದರೆ ಬ್ರಹ್ಮಹತ್ಯಾಕಾರಿಯಾಗಲಿ, ಕೃತಘ್ನನಾಗಲಿ, ಅಥವಾ ಮಹಾ ಪಾತಕಗಳಿಂದ ದುಷ್ಟನಾಗಲಿ ತನ್ನ ಪತಿಯನ್ನು ಉದ್ಧರಿಸುತ್ತಾಳೆ.

೧೧೧. ನಾರಿಯರು ಮಾಡುವ ಪಾಪಕರ್ಮಗಳನ್ನು ದೂರಮಾಡಲು ಪತಿಯನ್ನು ಸೇವಿಸಿ ಅವನೊಡನೆ ಸಹಗಮನ ಮಾಡುವುದೇ ಉತ್ತಮ ಪ್ರಾಯಶ್ಚಿತ್ತವೆಂದು ಪ್ರಾಜ್ಞರು ತಿಳಿದಿರುವರು.

ಪತಿವ್ರತಾ ತು ಯಾ ನಾರೀ ಭರ್ತೃಶುಶ್ರೂಷಣೇ ರತಾ ।
ನ ತಸ್ಯಾ ವಿದ್ಯತೇ ಪಾಪಮಿಹಲೋಕೇ ಪರತ್ರ ಚ ॥ ೧೧೨ ॥

ಸರ್ವಪಾಪವಿನಿರ್ಮುಕ್ತಾ ನಾಸ್ತಿ ಕಾರ್ಯಾ ವಿಚಾರಣಾ ॥ ೧೧೩ ॥

ಪಾತಿವ್ರತ್ಯಸಮಾಯುಕ್ತಾ ಭರ್ತೃಶುಶ್ರೂಷಣೋತ್ಸುಕಾ ।
ನ ಯಾಸ್ತು ಪಾತಕಂ ತಸ್ಯಾಮಿಹ ಲೋಕೇ ಪರತ್ರ ಚ ॥ ೧೧೪ ॥

ಪತಿವ್ರತಾ ಧರ್ಮರತಾ ಭದ್ರಾಣ್ಯೇವ ಲಭೇತ್ ಸದಾ ।
ನಾಸ್ಯಾಃ ಪರಾಭವಂ ಕರ್ತುಂ ಶಕ್ನೋತೀಹ ಜನಃ ಕ್ವಚಿತ್ ॥ ೧೧೫ ॥

---

೧೧೨. ಯಾವ ನಾರಿಯು ಪತಿವ್ರತೆಯೂ ಪತಿಶುಶ್ರೂಷಾ ನಿರತಳೂ ಆಗಿರುವಳೊ, ಅವಳಿಗೆ ಇಹಲೋಕಸುಖಕ್ಕೂ ಪರಲೋಕಸುಖಕ್ಕೂ ಪ್ರತಿಬಂಧಮಾಡುವ ಯಾವ ಪಾಪಕರ್ಮವೂ ಉಳಿಯುವುದಿಲ್ಲ.

೧೧೩. ಅವಳು ಯಾವ ಪಾಪಕರ್ಮಗಳನ್ನು ಆಚರಿಸಿದ್ದರೂ ಅವುಗಳೆಲ್ಲವೂ ಪಾತಿವ್ರತ್ಯವೆಂಬ ಪ್ರಾಯಶ್ಚಿತ್ತದಿಂದ ದೂರವಾಗಿ ಸಕಲ ಪಾಪಗಳಿಂದಲೂ ಮುಕ್ತಳಾಗುವಳು. ಈ ವಿಷಯದಲ್ಲಿ ಸಂದೇಹ-ವಿಚಾರಗಳನ್ನು ಮಾಡಬೇಕಾಗಿಲ್ಲ.

೧೧೪. ಪಾತಿವ್ರತ್ಯವ್ರತದಿಂದ ಕೂಡಿದವಳೂ ಭರ್ತೃವಿನ ಶುಶ್ರೂಷೆಯಲ್ಲಿ ಅತ್ಯಂತ ಉತ್ಸಾಹವುಳ್ಳವಳೂ ಆದ ಸ್ತ್ರೀಯಲ್ಲಿ ಐಹಿಕ ಅಥವಾ ಪಾರತ್ರಿಕವಾದ ಯಾವ ಪಾತಕವೂ ಇರುವುದಿಲ್ಲ.

೧೧೫. ಧರ್ಮಾನುಷ್ಠಾನಪರಳಾದ ಪತಿವ್ರತೆಯು ಸರ್ವ ಕಾಲಗಳಲ್ಲಿಯೂ ಕಲ್ಯಾಣಗಳನ್ನು ಹೊಂದುವಳು. ಈ ಲೋಕದಲ್ಲಿ ಪತಿವ್ರತಾಸ್ತ್ರೀಯರಿಗೆ ಅವಮಾನ ಮಾಡಲು ಯಾವ ವ್ಯಕ್ತಿಯೂ ಎಲ್ಲಿಯೂ ಶಕ್ತನಾಗುವುದಿಲ್ಲ.

ಯಥಾ ರಾಮಸ್ಯ ಸುಭಗಾ ಸೀತಾ ತ್ರೈಲೋಕ್ಯವಿಶ್ರುತಾ ।
ಪತ್ನೀ ದಾಶರಥೇರ್ದೇವೀ ವಿಜಿಗ್ಯೇ ರಾಕ್ಷಸೇಶ್ವರಮ್ ॥ ೧೧೬ ॥

ರಾಮಸ್ಯ ಭಾರ್ಯಾಂ ಸುಭಗಾಂ ರಾವಣೋ ರಾಕ್ಷಸೇಶ್ವರಃ ।
ಸೀತಾಂ ವಿಶಾಲನಯನಾಂ ಚಕಮೇ ಕಾಲನೋದಿತಃ ॥ ೧೧೭ ॥

ಗೃಹೀತ್ವಾ ಮಾಯಯಾ ವೇಷಂ ಚರಂತೀಂ ವಿಜನೇ ವನೇ ।
ಸಮಾಹರ್ತುಂ ಮತಿಂ ಚಕ್ರೇ ತಾಪಸಃ ಕಿಲ ಮಾನಿನೀಮ್ ॥ ೧೧೮ ॥

ವಿಜ್ಞಾಯ ಸಾ ಚ ತದ್ಭಾವಂ ಸ್ಮೃತ್ವಾ ದಾಶರಥಿಂ ಪತಿಮ್ ।
ಜಗಾಮ ಶರಣಂ ವಹ್ನಿಮಾವಸಥ್ಯಂ ಶುಚಿಸ್ಮಿತಾ ॥ ೧೧೯ ॥

---

೧೧೬. ಸುಂದರಿಯೂ ತ್ರಿಲೋಕಗಳಲ್ಲಿ ಪ್ರಸಿದ್ಧಳೂ ಮತ್ತು ದಶರಥಪುತ್ರನಾದ ರಾಮನ ಪತ್ನಿಯೂ ಆದ ಸೀತಾದೇವಿಯು ತನ್ನ ಪಾತಿವ್ರತ್ಯ ಮಹಿಮೆಯಿಂದ ರಾಕ್ಷಸೇಶ್ವರನನ್ನು ಜಯಿಸಿದುದು ಪತಿವ್ರತಾಸ್ತ್ರೀಯರ ವಿಜಯಕ್ಕೆ ಒಂದು ದೃಷ್ಟಾಂತವಾಗಿದೆ.

೧೧೭. ರಾಕ್ಷಸರಿಗೆ ಈಶ್ವರನಾದ ರಾವಣನು ಕಾಲಾಧೀನವಾದ ಬುದ್ಧಿ ವಿಪರ್ಯಯದಿಂದ ಪ್ರೇರೇಪಿಸಲ್ಪಟ್ಟವನಾಗಿ ಸೌಭಾಗ್ಯದಿಂದ ಕೂಡಿದವಳೂ, ವಿಶಾಲವಾದ ನಯನವುಳ್ಳವಳೂ ಮತ್ತು ರಾಮಪತ್ನಿಯೂ ಆದ ಸೀತೆಯನ್ನು ಕಾಮಿಸಿದನು

೧೧೮. ಆ ರಾಕ್ಷಸೇಶ್ವರನು ಮಾಯೆಯಿಂದ ಬೇರೆ ವೇಷವನ್ನು ಧರಿಸಿ ತಪಸ್ವಿಯಂತೆ ಕಾಣಿಸುತ್ತ ನಿರ್ಜನವಾದ ಅರಣ್ಯದಲ್ಲಿ ಸಂಚರಿಸುತ್ತಿದ್ದ ಮಾನಿನಿಯಾದ ಸೀತೆಯನ್ನು ಅಪಹರಿಸಬೇಕೆಂದು ಸಂಕಲ್ಪಮಾಡಿದನು.

೧೧೯. ಪರಿಶುದ್ಧವಾದ ಮಂದಹಾಸವುಳ್ಳ ಆ ಸೀತಾದೇವಿಯು ಆ ತಾಪಸನ ಭಾವವನ್ನು ತಿಳಿದು ತನ್ನ ಪತಿಯಾದ ರಾಮನನ್ನು ಧ್ಯಾನಿಸಿ ಆವಸಥ್ಯ ಎಂಬ ಅಗ್ನಿಯನ್ನು ಶರಣುಹೊಂದಿದಳು.

ಉಪತಸ್ಥೇ ಮಹಾಯೋಗಂ ಸರ್ವಲೋಕವಿದಾಹಕಮ್ ।
ಕೃತಾಂಜಲೀ ರಾಮಪತ್ನೀ ಸಾಕ್ಷಾತ್ಪತಿಮಿವಾಚ್ಯುತಮ್ ॥ ೧೨೦ ॥

ನಮಸ್ಯಾಮಿ ಮಹಾಯೋಗಂ ಕೃಶಾನುಂ ಗಹ್ವರಂ ಪರಮ್ ।
ದಾಹಕಂ ಸರ್ವಭೂತಾನಾಮೀಶಾನಂ ಕಾಲರೂಪಿಣಮ್ ॥ ೧೨೧ ॥

ಪ್ರಪದ್ಯೇ ಪಾವಕಂ ದೇವಂ ಶಾಶ್ವತಂ ವಿಶ್ವರೂಪಿಣಮ್ ।
ಯೋಗಿನಂ ಕೃತ್ತಿವಸನಂ ಭೂತೇಶಂ ಪರಮಂ ಪದಮ್ ॥ ೧೨೨ ॥

ಆತ್ಮಾನಂ ದೀಪ್ತವಪುಷಂ ಸರ್ವಭೂತಹೃದಿಸ್ಥಿತಮ್ ।
ತಂ ಪ್ರಪದ್ಯೇ ಜಗನ್ಮೂರ್ತಿಂ ಪ್ರಭವಂ ಸರ್ವತೇಜಸಾಮ್ ॥ ೧೨೩ ॥

---

೧೨೦. ಮಹಾಯೋಗೀಶ್ವರನೂ, ಸಮಸ್ತ ಲೋಕಗಳನ್ನು ದಹಿಸುವ ಶಕ್ತಿ-ಸಾಮರ್ಥ್ಯವುಳ್ಳವನೂ ಆದ ಅಗ್ನಿದೇವನನ್ನು ಅಂಜಲಿಕಟ್ಟಿ ನಿಂತಿರುವ ರಾಮಪತ್ನಿಯು ಸಾಕ್ಷಾತ್ತಾಗಿ ತನ್ನ ಪತಿದೇವನಂತೆ ಧ್ಯಾನಿಸಿ ಶರಣುಹೊಂದಿದಳು.

೧೨೧. ಮುಂದುವರಿಸಿ ಈ ರೀತಿಯಾಗಿ ಸ್ತುತಿಸಿದಳು :–ಮಹಾಯೋಗೀಶ್ವರನೂ, ಸರ್ವಭೂತಗಳನ್ನು ದಹಿಸುವವನೂ, ಈಶ್ವರಸ್ವರೂಪನೂ, ಕಾಲರೂಪಿಯೂ ಮತ್ತು ಪರಮದುರ್ಲಭನೂ ಆದ ಅಗ್ನಿದೇವನನ್ನು ವಂದಿಸುತ್ತೇನೆ.

೧೨೨. ಶಾಶ್ವತನೂ, ವಿಶ್ವರೂಪಿಯೂ, ಚರ್ಮಾಂಬರಧಾರಿಯೂ, ಭೂತಾಧಿಪತಿಯೂ ಮತ್ತು ಪರಮಪದಸ್ವರೂಪನೂ ಆದ ಅಗ್ನಿದೇವನನ್ನು ಶರಣುಹೊಂದುತ್ತೇನೆ

೧೨೩. ಸರ್ವಜೀವಗಳ ಆತ್ಮರೂಪಿಯೂ, ದೀಪ್ತವಾದ ವಿಗ್ರಹವುಳ್ಳವನೂ, ಸರ್ವಭೂತಗಳ ಹೃದಯದಲ್ಲಿ ವಾಸಿಸುವವನೂ, ಜಗದಾಕಾರನೂ ಮತ್ತು ಸಮಸ್ತ ತೇಜಸ್ಸುಗಳ ಉತ್ಪತ್ತಿಗೆ ಕಾರಣನೂ ಆದ ಅಗ್ನಿಯನ್ನು ಶರಣುಹೊಂದುತ್ತೇನೆ.

ಮಹಾಯೋಗೀಶ್ವರಂ ವಹ್ನಿಮಾದಿತ್ಯಂ ಪರಮೇಷ್ಠಿನಮ್ ।
ಪ್ರಪದ್ಯೇ ಶರಣಂ ರುದ್ರಂ ಮಹಾಗ್ರಾಸಂ ತ್ರಿಶೂಲಿನಮ್ ॥ ೧೨೪ ॥

ಕಾಲಾಗ್ನಿಂ ಯೋಗಿನಾಮೀಶಂ ಭೋಗಮೋಕ್ಷಫಲಪ್ರದಮ್ ।
ಪ್ರಪದ್ಯೇ ತ್ವಾಂ ವಿರೂಪಾಕ್ಷಂ ಭೂರ್ಭುವಃಸ್ವಃಸ್ವರೂಪಿಣಮ್॥ ೧೨೫ ॥

ಹಿರಣ್ಮಯೇ ಗೃಹೇ ಗುಪ್ತಂ ಮಹಾಂತಮಮಿತೌಜಸಮ್ ।
ವೈಶ್ವಾನರಂ ಪ್ರಪದ್ಯೇಽಹಂ ಸರ್ವಭೂತೇಷ್ವವಸ್ಥಿತಮ್ ॥ ೧೨೬ ॥

ಹವ್ಯಕವ್ಯವಹಂ ದೇವಂ ಪ್ರಪದ್ಯೇ ವಹ್ನಿಮೀಶ್ವರಮ್ ।
ಪ್ರಪದ್ಯೇ ತತ್ಪರಂ ತತ್ತ್ವಂ ವರೇಣ್ಯಂ ಸವಿತುಃ ಶಿವಮ್ ॥ ೧೨೭ ॥

---

೧೨೪. ಮಹಾಯೋಗೀಶ್ವರನೂ, ಆದಿತ್ಯರೂಪಿಯೂ, ಪರಮಸ್ಥಾನದಲ್ಲಿರುವವನೂ, ರುದ್ರಮೂರ್ತಿಯೂ, ಪ್ರಪಂಚವನ್ನೇ ಗ್ರಾಸವಾಗಿ ಸ್ವೀಕರಿಸುವವನೂ, ಮತ್ತು ತ್ರಿಶೂಲಧರನೂ ಆದ ಅಗ್ನಿಯನ್ನು ಶರಣುಹೊಂದುವೆನು.

೧೨೫. ಪ್ರಲಯಾಗ್ನಿರೂಪಿಯೂ, ಯೋಗಿಗಳಿಗೆ ಅಧಿಪತಿಯೂ, ಭೋಗ-ಮೋಕ್ಷಗಳೆಂಬ ಫಲಗಳನ್ನು ಕೊಡುವವನೂ, ವಿರೂಪವಾದ ನೇತ್ರವುಳ್ಳ ಈಶ್ವರರೂಪನೂ, ಮತ್ತು ಭೂಃ, ಭುವಃ, ಸ್ವಃ ಎಂಬ ಮಹಾವ್ಯಾಹೃತಿಸ್ವರೂಪನೂ ಆದ ಅಗ್ನಿದೇವನಿಗೆ ಶರಣಾಗತಳಾಗಿದ್ದೇನೆ.

೧೨೬. ತೇಜೋಮಯವಾದ ಗೃಹದಲ್ಲಿ ಗೂಢರೂಪದಿಂದ ಇರುವವನೂ, ಮಹಾತ್ಮನೂ, ಅಪಾರವಾದ ತೇಜಸ್ಸುಳ್ಳವನೂ, ಮತ್ತು ಸಮಸ್ತ ಪ್ರಾಣಿಗಳಲ್ಲಿ ಅಂತರ್ಯಾಮಿಯೂ ಆದ ವೈಶ್ವಾನರಸ್ವಾಮಿಯನ್ನು ಶರಣುಹೊಂದುವೆನು.

೧೨೭. ದೇವತೆಗಳಿಗೆ ಹವ್ಯವನ್ನೂ ಪಿತೃಗಳಿಗೆ ಕವ್ಯವನ್ನೂ ವಹಿಸುವುದರಿಂದ ವಹ್ನಿ ಎಂದು ಕರೆಯಲ್ಪಡುವ ಯಜ್ಞೇಶ್ವರನನ್ನು ಭಜಿಸುತ್ತೇನೆ. ಮಂಗಳಕರವೂ ಭಜಿಸಲು ಅರ್ಹವೂ ಮತ್ತು ಸೂರ್ಯದೇವನ ಪರತತ್ತ್ವರೂಪವೂ ಆದ ಅಗ್ನಿಯನ್ನು ಶರಣುಹೊಂದುತ್ತೇನೆ.

ಸ್ವರ್ಗ್ಯಮಗ್ನಿಂ ಪರಂ ಜ್ಯೋತಿಃ ಸ್ವಾಕ್ಷಯಂ ಹವ್ಯವಾಹನಮ್ ॥೧೨೮॥

ಇತಿ ವಹ್ನ್ಯಷ್ಟಕಂ ಜಪ್ತ್ವಾ ರಾಮಪತ್ನೀ ಯಶಸ್ವಿನೀ ।
ಧ್ಯಾಯಂತೀ ಮನಸಾ ತಸ್ಥೌ ರಾಮಮುನ್ಮೀಲಿತೇಕ್ಷಣಾ ॥ ೧೨೯ ॥

ಅಥಾವಸಥ್ಯಾದ್ಭಗವಾನ್ ಹವ್ಯವಾಹೋ ಮಹೇಶ್ವರಃ ।
ಆವಿರಾಸೀತ್ ಸುದೀಪ್ತಾತ್ಮಾ ತೇಜಸಾ ನಿರ್ದಹನ್ನಿವ ॥ ೧೩೦ ॥

ಸೃಷ್ಟ್ವಾ ಮಾಯಾಮಯೀಂ ಸೀತಾಂ ಸ ರಾವಣವಧೇಚ್ಛಯಾ ।
ಸೀತಾಮಾದಾಯ ರಾಮೇಷ್ಟಾಂ ಪಾವಕೋಽಂತರಧೀಯತ ॥ ೧೩೧ ॥

---

೧೨೮. ಸ್ವರ್ಗಪ್ರಾಪ್ತಿಗೆ ಸಾಧನವೂ, ಪರಂಜ್ಯೋತಿರೂಪವೂ, ಸ್ವಸ್ವರೂಪದಿಂದ ಕ್ಷಯರಹಿತವೂ, ಮತ್ತು ಹವ್ಯವನ್ನು ವಹಿಸುವುದೂ ಆದ ಯಜ್ಞೇಶ್ವರಮೂರ್ತಿಯನ್ನು ಶರಣುಹೊಂದುತ್ತೇನೆ.

೧೨೯. ಕೀರ್ತಿಯಿಂದ ಕೂಡಿದ ರಾಮಪತ್ನಿಯಾದ ಸೀತಾದೇವಿಯು ಈ ರೀತಿಯಾಗಿ ಅಗ್ನಿದೇವನ ಅಷ್ಟಕಸ್ತೋತ್ರವನ್ನು ಜಪಿಸಿ ತೆರೆದ ಕಣ್ಣುಗಳುಳ್ಳವಳಾಗಿ ಮಾನಸದಲ್ಲಿ ರಾಮನನ್ನು ಧ್ಯಾನಿಸುತ್ತ ನಿಂತುಕೊಂಡಳು.

೧೩೦. ತರುವಾಯ ಜ್ವಲಿಸುವ ರೂಪವುಳ್ಳವನೂ, ಮಹೇಶ್ವರನೂ, ಹವ್ಯವನ್ನು ವಹಿಸುವವನೂ, ಭಗವಂತನೂ ಆದ ಅಗ್ನಿದೇವನು ತೇಜೋಮಂಡಲದಿಂದ ಸುಡುವವನಂತೆ ಆವಸಥ್ಯ ಅಗ್ನಿಕುಂಡದಿಂದ ಪ್ರತ್ಯಕ್ಷನಾದನು.

೧೩೧. ಆಗ ಅಗ್ನಿದೇವನು ರಾವಣಾಸುರನ ಸಂಹಾರವಾಗಬೇಕೆಂಬ ಸಂಕಲ್ಪದಿಂದ ಮಾಯಾಮಯಳಾದ ಒಂದು ಸೀತಾವ್ಯಕ್ತಿಯನ್ನು ಸೃಷ್ಟಿಮಾಡಿಟ್ಟು ರಾಮಪ್ರಿಯೆಯಾದ ವಾಸ್ತವಸೀತೆಯನ್ನು ಎತ್ತಿಕೊಂಡು ಅಂತರ್ಧಾನಹೊಂದಿದನು.

ತಾಂ ದೃಷ್ಟ್ವಾ ತಾದೃಶೀಂ ಸೀತಾಂ ರಾವಣೋ ರಾಕ್ಷಸೇಶ್ವರಃ ।
ಸಮಾದಾಯ ಯಯೌ ಲಂಕಾಂ ಸಾಗರಾಂತರಸಂಸ್ಥಿತಾಮ್ ॥ ೧೩೨ ॥

ಕೃತ್ವಾ ತು ರಾವಣವಧಂ ರಾಮೋ ಲಕ್ಷ್ಮಣಸಂಯುತಃ ।
ಸಮಾದಾಯಾಭವತ್ ಸೀತಾಂ ಶಂಕಾಕುಲಿತಮಾನಸಃ ॥ ೧೩೩ ॥

ಸಾ ಪ್ರತ್ಯಯಾಯ ಭೂತಾನಾಂ ಸೀತಾ ಮಾಯಾಮಯೀ ಪುನಃ ।
ವಿವೇಶ ಪಾವಕಂ ಕ್ಷಿಪ್ರಂ ದದಾಹ ಜ್ವಲನೋಽಪಿ ತಾಮ್ ॥ ೧೩೪ ॥

ದಗ್ಧ್ವಾ ಮಾಯಾಮಯೀಂ ಸೀತಾಂ ಭಗವಾನುಷ್ಣದೀಧಿತಿಃ ।
ರಾಮಾಯಾದರ್ಶಯತ್ ಸೀತಾಂ ಪಾವಕೋಽಭೂತ್ ಸುರಪ್ರಿಯಃ ॥

---

೧೩೨. ರಾಕ್ಷಸೇಶ್ವರನಾದ ರಾವಣಾಸುರನು ಸುಂದರಿಯಾದ ಆ ಸೀತೆಯನ್ನು ನೋಡಿ ಅವಳನ್ನು ಅಪಹರಿಸಿಕೊಂಡು ಸಮುದ್ರಮಧ್ಯದಲ್ಲಿರುವ ತನ್ನ ಲಂಕೆಯೆಂಬ ರಾಜಧಾನಿಗೆ ಹೋದನು.

೧೩೩. ಶ್ರೀರಾಮನು ಅನಂತರದಲ್ಲಿ ಲಕ್ಷ್ಮಣನೆಂಬ ಅನುಜನಿಂದ ಕೂಡಿ ರಾವಣನ ವಧವನ್ನು ಮಾಡಿ ಸೀತೆಯನ್ನು ಕರೆದುಕೊಂಡುಬಂದು ಅವಳ ವಿಷಯದಲ್ಲಿ ಮಾನಸದಲ್ಲಿ ಶಂಕೆಯುಳ್ಳವನಾದನು.

೧೩೪. ಮಾಯಾನಿರ್ಮಿತಳಾದ ಆ ಸೀತಾದೇವಿಯು ಮತ್ತೆ ಸರ್ವಪ್ರಾಣಿಗಳ ನಂಬಿಕೆಗೋಸ್ಕರ ಎಲ್ಲರೆದುರಿಗೆ ಕ್ಷಿಪ್ರದಲ್ಲಿ ಅಗ್ನಿಯಲ್ಲಿ ಪ್ರವೇಶಿಸಿದಳು. ಆಗ ಅಗ್ನಿಯು ಆ ಮಾಯಾಸೀತೆಯನ್ನು ದಹಿಸಿದನು.

೧೩೫. ಷಡ್ಗುಣೈಶ್ವರ್ಯ ಸಂಪನ್ನನೂ ಉಷ್ಣತೇಜಸ್ಸುಗಳಿಂದ ಕೂಡಿದವನೂ, ಆದ ಯಜ್ಞೇಶ್ವರನು ಮಾಯಾಮಯಳಾದ ಸೀತೆಯನ್ನು ದಹಿಸಿ ವಾಸ್ತವ ಸೀತೆಯನ್ನು ತಂದು ರಾಮನಿಗೆ ತೋರಿಸಿದನು. ಇದರಿಂದ ಅಗ್ನಿದೇವನು ಸರ್ವದೇವತೆಗಳಿಗೆ ಪ್ರಿಯನಾದನು.

ಪ್ರಗೃಹ್ಯ ಭರ್ತುಶ್ಚರಣೌ ಕರಾಭ್ಯಾಂ ಸಾ ಸುಮಧ್ಯಮಾ ।
ಚಕಾರ ಪ್ರಣತಿಂ ಭೂಮೌ ರಾಮಾಯ ಜನಕಾತ್ಮಜಾ ॥ ೧೩೬ ॥

ದೃಷ್ಟ್ವಾ ಹೃಷ್ಟಮನಾ ರಾಮೋ ವಿಸ್ಮಯಾಕುಲಲೋಚನಃ ।
ಪ್ರಣಮ್ಯ ವಹ್ನಿಂ ಶಿರಸಾ ತೋಷಯಾಮಾಸ ರಾಘವಃ ॥ ೧೩೭ ॥

ಉವಾಚ ವಹ್ನಿಂ ಭಗವಾನ್ ಕಿಮೇಷಾ ವರವರ್ಣಿನೀ ।
ದಗ್ಧಾ ಭಗವತಾ ಪೂರ್ವಂ ದೃಷ್ಟಾ ಮತ್ಪಾರ್ಶ್ವಮಾಗತಾ ॥ ೧೩೮ ॥

ತಮಾಹ ದೇವೋ ಲೋಕಾನಾಂ ದಾಹಕೋ ಹವ್ಯವಾಹನಃ ।
ಯಥಾವೃತ್ತಂ ದಾಶರಥಿಂ ಭೂತಾನಾಮೇವ ಸನ್ನಿಧೌ ॥ ೧೩೯ ॥

---

೧೩೬. ಜನಕನ ಪುತ್ರಿಯೂ ಸುಂದರವಾದ ಮಧ್ಯಭಾಗವುಳ್ಳವಳೂ ಆದ ಆ ಸೀತೆಯು ಪತಿಯ ಚರಣಗಳನ್ನು ಕೈಯಲ್ಲಿ ಹಿಡಿದು ನೆಲದಲ್ಲಿ ಬಿದ್ದು ರಾಮನಿಗೆ ನಮಸ್ಕಾರವನ್ನು ಮಾಡಿದಳು.

೧೩೭. ರಘುರಾಜನ ವಂಶದಲ್ಲಿ ಹುಟ್ಟಿದ ಶ್ರೀರಾಮನು ಸಂತೋಷಪಟ್ಟ ಮಾನಸವುಳ್ಳವನೂ ಮತ್ತು ಆಶ್ಚರ್ಯದಿಂದ ಕೂಡಿದ ನೇತ್ರವುಳ್ಳವನೂ ಆಗಿ ಅಗ್ನಿ ದೇವನಿಗೆ ತಲೆಬಾಗಿ ನಮಸ್ಕರಿಸಿ ಸಂತೋಷವನ್ನು ಉಂಟುಮಾಡಿದನು.

೧೩೮. ಮತ್ತು ಪೂಜ್ಯನಾದ ಶ್ರೀರಾಮನು ಅಗ್ನಿಯನ್ನು ಕುರಿತು ಇಂತೆಂದನು :- ಉತ್ತಮಾಂಗನೆಯಾದ ಈ ಸೀತೆಯು ಭಗವಂತನಾದ ನಿನ್ನಿಂದ ಮೊದಲು ದಹಿಸಲ್ಪಟ್ಟಳು. ಮತ್ತೆ ಈಗ ನನ್ನ ಪಾರ್ಶ್ವಕ್ಕೆ ಬಂದಿರುವಳಲ್ಲ !

೧೩೯. ಆಗ ಲೋಕಗಳಿಗೆ ದಾಹಕನೂ, ಹವ್ಯವನ್ನು ವಹಿಸುವವನೂ ಆದ ಅಗ್ನಿದೇವನು ಸರ್ವಭೂತಗಳ ಸನ್ನಿಧಿಯಲ್ಲಿ ದಶರಥಪುತ್ರನಾದ ರಾಮನನ್ನು ಕುರಿತು ನಡೆದ ಸಂಪೂರ್ಣ ವೃತ್ತವನ್ನು ಹೇಳಿದನು.

ಇಯಂ ಸಾ ಪರಮಾ ಸಾಧ್ವೀ ಪಾರ್ವತೀವ ಪ್ರಿಯಾ ತವ ।
ಆರಾಧ್ಯ ಲಬ್ಧಾ ತಪಸಾ ದೇವ್ಯಾಶ್ಚಾತ್ಯಂತವಲ್ಲಭಾ　　॥ ೪೦ ॥

ಭರ್ತುಃ ಶುಶ್ರೂಷಣೋಪೇತಾ ಸುಶೀಲೇಯಂ ಪತಿವ್ರತಾ ।
ಭವಾನೀವೇಶ್ವರೇ ಗುಪ್ತಾ ಮಾಯಾ ರಾವಣಕಾಮಿತಾ　　॥ ೧೪೧ ॥

ಯಾ ಸೀತಾ ರಾಕ್ಷಸೇಶೇನ ಸೀತಾ ಭಗವತೀ ಹೃತಾ ।
ಮಯಾ ಮಾಯಾಮಯೀ ಸೃಷ್ಟಾ ರಾವಣಸ್ಯ ವಧೇಚ್ಛಯಾ ॥ ೧೪೨ ॥

ತದರ್ಥಂ ಭವತಾ ದೃಷ್ಟೋ ರಾವಣೋ ರಾಕ್ಷಸೇಶ್ವರಃ ।
ಮಾಯೋಪಸಂಹೃತಾ ಚೈವ ಹತೋ ಲೋಕವಿನಾಶನಃ　　॥ ೧೪೩ ॥

---

೧೪೦. ತಪಶ್ಚರ್ಯೆಯಿಂದ ದೇವನನ್ನು ಆರಾಧಿಸಿ ಹೊಂದಿರುವವಳೂ, ದೇವಿಗೆ ಅತ್ಯಂತ ಪ್ರಿಯಳೂ ಮತ್ತು ಪರಮಪತಿವ್ರತೆಯೂ ಆಗಿರುವ ಇವಳು ಈಶ್ವರನಿಗೆ ಪಾರ್ವತೀದೇವಿಯು ಹೇಗೋ ಹಾಗೆ ನಿನಗೆ ಪ್ರೇಮಾಸ್ಪದಳಾದ ಭಾರ್ಯೆಯಾಗಿರ ವಳು.

೧೪೧. ಪತಿಶುಶ್ರೂಷಾವ್ರತದಿಂದ ಕೂಡಿರುವವಳೂ, ಉತ್ತಮವಾದ ಶೀಲ ವುಳ್ಳವಳೂ ಮತ್ತು ಪತಿವ್ರತೆಯೂ ಆದ ಈಕೆಯು ಈಶ್ವರನಲ್ಲಿ ಪಾರ್ವತಿಯು ಇದ್ದಂತೆ ರಕ್ಷಿಸಲ್ಪಟ್ಟಿರುವಳು. ಮಾಯಾ ಸೀತೆಯು ರಾವಣಾಸುರನಿಂದ ಕಾಮಿಸ ಲ್ಪಟ್ಟಳು.

೧೪೨. ರಾಕ್ಷಸೇಶ್ವರನಾದ ರಾವಣನಿಂದ ಪೂಜ್ಯಳಾದ ಯಾವ ಸೀತೆಯು ಕದ್ದು ಒಯ್ಯಲ್ಪಟ್ಟಳೊ; ಅವಳು ರಾವಣನ ವಧವಾಗಬೇಕೆಂಬ ಇಷ್ಟವುಳ್ಳ ನನ್ನಿಂದ ನಿರ್ಮಿಸಲ್ಪಟ್ಟ ಮಾಯಾ ಸೀತೆಯಾಗಿರುವಳು.

೧೪೩. ಆ ಸೀತಾದೇವಿಯ ಪ್ರಾಪ್ತಿಗೋಸ್ಕರ ನಿನ್ನಿಂದ ರಾಕ್ಷಸೇಶ್ವರನಾದ ರಾವಣನು ನೋಡಲ್ಪಟ್ಟನು. ಈಗ ಲೋಕಕಂಟಕಿಯಾದ ರಾವಣನು ಕೊಲ್ಲಲ್ಪ ಟ್ಟಿದ್ದರಿಂದ ಮಾಯೆಯು ವಿಸರ್ಜಿಸಲ್ಪಟ್ಟಿತು.

ಗೃಹಾಣ ಜೈತಾಂ ವಿಮಲಾಂ ಜಾನಕೀಂ ವಚನಾನ್ಮಮ ।
ಪಶ್ಯ ನಾರಾಯಣಂ ದೇವಂ ಸ್ವಾತ್ಮಾನಂ ಪ್ರಭವಾವ್ಯಯಮ್ ॥ ೧೪೪ ॥

ಇತ್ಯುಕ್ತ್ವಾ ಭಗವಾಂಶ್ಚಂಡೋ ವಿಶ್ವಾರ್ಚಿರ್ವಿಶ್ವತೋಮುಖಃ ।
ಮಾನಿತೋ ರಾಘವೇಣಾಗ್ನಿರ್ಭೂತೈಶ್ಚಾಂತರಧೀಯತ ॥ ೧೪೫ ॥

ಏತತ್ಪತಿವ್ರತಾನಾಂ ವೈ ಮಾಹಾತ್ಮ್ಯಂ ಕಥಿತಂ ಮಯಾ ।
ಸ್ತ್ರೀಣಾಂ ಸರ್ವಾಘಶಮನಂ ಪ್ರಾಯಶ್ಚಿತ್ತಮಿದಂ ಸ್ಮೃತಮ್ ॥೧೪೬॥

ಅಶೇಷಪಾಪಸಂಯುಕ್ತಃ ಪುರುಷೋಽಪಿ ಸುಸಂಯುತಃ ।
ಸ್ವದೇಹಂ ಪುಣ್ಯತೀರ್ಥೇಷು ತ್ಯಕ್ತ್ವಾ ಮುಚ್ಯೇತ ಕಿಲ್ಬಿಷಾತ್ ॥೧೪೭॥

---

೧೪೪. ಆದ್ದರಿಂದ ನಿಷ್ಕಳಂಕಳಾದ ಈ ಸೀತೆಯನ್ನು ನನ್ನ ವಚನಾನುಸಾರವಾಗಿ ನೀನು ಸ್ವೀಕರಿಸು. ಮತ್ತು ನೀನು ನಿನ್ನ ಸ್ವಾತ್ಮವನ್ನು ಸರ್ವಲೋಕಗಳ ಉತ್ಪತ್ತಿ-ನಾಶಗಳಿಗೆ ಕಾರಣನಾದ ನಾರಾಯಣಸ್ವಾಮಿಯೆಂದು ತಿಳಿದುಕೊ.

೧೪೫. ವಿಶ್ವಾಕಾರವಾದ ಮುಖ ಮತ್ತು ಜ್ವಾಲೆಗಳಿಂದ ಕೂಡಿರುವವನೂ, ಷಡ್ಗುಣೈಶ್ವರ್ಯಸಂಪನ್ನನೂ, ಮತ್ತು ಉಗ್ರರೂಪಿಯೂ ಆದ ಯಜ್ಞೇಶ್ವರನು ಈ ರೀತಿಯಾಗಿ ಹೇಳಿ ಶ್ರೀರಾಮನಿಂದಲೂ ಸರ್ವಭೂತಗಳಿಂದಲೂ ಮಾನಿಸಲ್ಪಟ್ಟವನಾಗಿ ಅಲ್ಲಿಯೆ ಅಂತರ್ಧಾನ ಹೊಂದಿದನು.

೧೪೬. ಈ ರೀತಿಯಾಗಿ ನನ್ನಿಂದ ಪತಿವ್ರತಾಸ್ತ್ರೀಯರ ಮಾಹಾತ್ಮ್ಯವು ಕೀರ್ತಿಸಲ್ಪಟ್ಟಿದೆ. ಪಾತಿವ್ರತ್ಯವ್ರತವು ಸ್ತ್ರೀಯರಿಗೆ ಸರ್ವಪಾಪಗಳನ್ನು ಶಮನಮಾಡುವ ಉತ್ತಮಪ್ರಾಯಶ್ಚಿತ್ತವೆಂದು ಸ್ಮರಿಸಲ್ಪಟ್ಟಿದೆ.

೧೪೭. ಸಮಸ್ತ ಪಾಪಗಳನ್ನು ಹೊಂದಿರುವ ಪುರುಷನು ಕೂಡ ಜಿತೇಂದ್ರಿಯನಾಗಿ ಪುಣ್ಯತೀರ್ಥಗಳಲ್ಲಿ ತನ್ನ ದೇಹತ್ಯಾಗವನ್ನು ಮಾಡಿದರೆ ಆ ಪಾಪ ಬಂಧದಿಂದ ಮುಕ್ತನಾಗುತ್ತಾನೆ.

ಪೃಥಿವ್ಯಾಂ ಸರ್ವತೀರ್ಥೇಷು ಸ್ನಾತ್ವಾ ಪುಣ್ಯೇಷು ವಾ ದ್ವಿಜಃ ।
ಮುಚ್ಯತೇ ಪಾತಕೈಃ ಸರ್ವೈಃ ಸಂಚಿತೈರಪಿ ಪೂರುಷಃ ॥ ೧೪೮ ॥

ವ್ಯಾಸ ಉವಾಚ :—

ಇತ್ಯೇಷ ಮಾನವೋ ಧರ್ಮೋ ಯುಷ್ಮಾಕಂ ಕಥಿತೋ ಮಯಾ ।
ಮಹೇಶಾರಾಧನಾರ್ಥಾಯ ಜ್ಞಾನಯೋಗಶ್ಚ ಶಾಶ್ವತಃ ॥ ೧೪೯ ॥

ಯೋಗೇನ ವಿಧಿನಾ ಯುಕ್ತೋ ಜ್ಞಾನಯೋಗಂ ಸಮಾಚರೇತ್ ।
ಸ ಪಶ್ಯತಿ ಮಹಾದೇವಂ ನಾ ನ್ಯಃ ಕಲ್ಪಶತೈರಪಿ ॥ ೧೫೦ ॥

ಸ್ಥಾಪಯೇದ್ಯಃ ಪರಂ ಧರ್ಮಂ ಜ್ಞಾನಂ ತತ್ಪಾರಮೇಶ್ವರಮ್ ।
ನ ತಸ್ಮಾದಧಿಕೋ ಲೋಕೇ ಸ ಯೋಗೀ ಪರಮೋ ಮತಃ ॥ ೧೫೧ ॥

---

೧೪೮. ದ್ವಿಜನು ಪೃಥಿವಿಯಲ್ಲಿರುವ ಸಮಸ್ತ ಪುಣ್ಯತೀರ್ಥಗಳಲ್ಲಿ ಸ್ನಾನ ಮಾಡುವುದರಿಂದ ಆಗಾಮಿ ಮತ್ತು ಸಂಚಿತಪಾಪಕರ್ಮಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ.

೧೪೯. ವ್ಯಾಸಮುನಿಯು ಇಂತೆಂದನು :—ಮುನಿಗಳೇ ! ಈ ರೀತಿಯಾಗಿ ನನ್ನಿಂದ ಮಾನವ ಧರ್ಮವಿಧಾನವು ವಿಸ್ತಾರವಾಗಿ ಹೇಳಲ್ಪಟ್ಟಿತು. ಮತ್ತು ಮಹೇಶ್ವರನನ್ನು ಆರಾಧಿಸಲು ಸಾಧನವಾದ ಶಾಶ್ವತ ಜ್ಞಾನಯೋಗವು ಉಪದೇಶಿಸಲ್ಪಟ್ಟಿದೆ.

೧೫೦. ಯೋಗಶಾಸ್ತ್ರದಲ್ಲಿ ಹೇಳಿರುವ ಯೋಗಾಭ್ಯಾಸದ ವಿಧಿಯಿಂದ ಕೂಡಿದವನಾಗಿ ಜ್ಞಾನ ಯೋಗವನ್ನು ಆಚರಿಸಬೇಕು. ಅಂತಹ ಜ್ಞಾನಿಯು ಮಹಾದೇವನಾದ ಪರಮಾತ್ಮನನ್ನು ಸಾಕ್ಷಾತ್ಕರಿಸುವನು. ಹಾಗಲ್ಲದೆ ಬೇರೊಬ್ಬನು ನೂರಾರು ಕಲ್ಪಕಾಲವನ್ನು ಕಳೆದರೂ ಪರಮಾತ್ಮದರ್ಶನವನ್ನು ಹೊಂದಲಾರನು.

೧೫೧. ಯಾವ ಮಾನವನು ಹಿಂದೆ ಹೇಳಿದ ಸರ್ವೋತ್ತಮವಾದ ಧರ್ಮವನ್ನೂ, ಪರಮೇಶ್ವರ ಜ್ಞಾನನಿಷ್ಠಾಯೋಗವನ್ನೂ ಪ್ರತಿಷ್ಠೆಗೊಳಿಸುವನೊ ; ಲೋಕದಲ್ಲಿ ಅವನಿಗಿಂತ ಉತ್ತಮನಾದವನು ಬೇರೊಬ್ಬನಿಲ್ಲ. ಅವನು ಪರಮಯೋಗಿಯೆಂದು ಶಾಸ್ತ್ರಸಮ್ಮತವು.

ಯಃ ಸಂಸ್ಥಾಪಯಿತುಂ ಶಕ್ತೋ ನ ಕುರ್ಯಾನ್ಮೋಹಿತೋ ಜನಃ ।
ಸ ಯೋಗಯುಕ್ತೋಽಪಿ ಮುನಿರ್ನಾತ್ಯರ್ಥಂ ಭಗವತ್ಪ್ರಿಯಃ॥ ೧೫೨ ॥

ತಸ್ಮಾತ್ ಸದೈವ ದಾತವ್ಯಂ ಬ್ರಾಹ್ಮಣೇಷು ವಿಶೇಷತಃ ।
ಧರ್ಮಯುಕ್ತೇಷು ಶಾಂತೇಷು ಶ್ರದ್ಧಯಾ ಚಾನ್ವಿತೇಷು ವೈ ॥ ೧೫೩ ॥

ಯಃ ಪಠೇದ್ಭವತಾಂ ನಿತ್ಯಂ ಸಂವಾದಂ ಮಮ ಚೈವ ಹಿ ।
ಸರ್ವಪಾಪವಿನಿರ್ಮುಕ್ತೋ ಗಚ್ಛೇತ ಪರಮಾಂ ಗತಿಮ್ ॥ ೧೫೪ ॥

ಶ್ರಾದ್ಧೇ ವಾ ದೈವಿಕೇ ಕಾರ್ಯೇ ಬ್ರಾಹ್ಮಣಾನಾಂ ಚ ಸನ್ನಿಧೌ ।
ಪಠೇತ ನಿತ್ಯಂ ಸುಮನಾಃ ಶ್ರೋತವ್ಯಂ ಚ ದ್ವಿಜಾತಿಭಿಃ ॥ ೧೫೫ ॥

---

೧೫೨. ಯಾವ ಮಾನವನು ಧರ್ಮಮಹೇಶ್ವರಯೋಗಗಳನ್ನು ಸ್ಥಾಪಿಸಲು ಶಕ್ತನಾಗಿದ್ದರೂ ಮೋಹಾಧೀನನಾಗಿ ಸ್ಥಾಪಿಸುವುದಿಲ್ಲವೊ ; ಅಂತಹವನು ಯೋಗಾಭ್ಯಾಸನಿಷ್ಠನಾದ ಮುನಿಯಾಗಿದ್ದರೂ ಭಗವಂತನಿಗೆ ಹೆಚ್ಚಾಗಿ ಪ್ರಿಯನಾಗುವುದಿಲ್ಲ.

೧೫೩. ಆದುದರಿಂದ ಧರ್ಮಾನುಷ್ಠಾನದಿಂದ ಕೂಡಿದವರೂ, ಶಾಂತರೂ, ಮತ್ತು ಶ್ರದ್ಧಾವಂತರೂ ಆದ ಬ್ರಾಹ್ಮಣರಲ್ಲಿ ಯಾವಾಗಲೂ ವಿಶೇಷವಾಗಿ ದಾನವನ್ನು ಆಚರಿಸಬೇಕು.

೧೫೪. ಯಾವ ಮಾನವನು ಈ ರೀತಿಯಾಗಿ ನನಗೂ, ನಿಮಗೂ ನಡೆದಿರುವ ಪುಣ್ಯಸಂವಾದವನ್ನು ನಿತ್ಯದಲ್ಲಿ ಪಠಿಸುವನೋ, ಅವನು ಸಮಸ್ತ ಪಾತಕಗಳಿಂದ ವಿಮುಕ್ತನಾಗಿ ಸರ್ವೋತ್ತಮವಾದ ಸದ್ಗತಿಯನ್ನು ಹೊಂದುತ್ತಾನೆ.

೧೫೫. ಶಾಂತಮನಸ್ಸಿನಿಂದ ಕೂಡಿದವನಾಗಿ ಶ್ರಾದ್ಧ, ದೈವಕರ್ಮ ಅಥವಾ ಬ್ರಾಹ್ಮಣರ ಸ್ಥಿಧಿಯಲ್ಲಿ ನಿತ್ಯದಲ್ಲಿಯೂ ಈ ಸಂವಾದವನ್ನು ಪಠಿಸಬೇಕು ದ್ವಿಜರಿಂದ ಇದು ತಪ್ಪದೆ ಶ್ರವಣಮಾಡಿಸಬೇಕು.

ಯೋಽರ್ಥಂ ವಿಚಾರ್ಯ ಯುಕ್ತಾತ್ಮಾ ಶ್ರಾವಯೇದ್ವಾ ದ್ವಿಜಾನ್ ಶುಚೀನ್
ಸ ದೋಷಕಂಚುಕಂ ತ್ಯಕ್ತ್ವಾ ಯಾತಿ ದೇವಂ ಮಹೇಶ್ವರಮ್ ॥೧೫೬॥

ಏತಾವದುಕ್ತ್ವಾ ಭಗವಾನ್ ವ್ಯಾಸಃ ಸತ್ಯವತೀಸುತಃ ।
ಸಮಾಶ್ವಾಸ್ಯ ಮುನೀನ್ ಸೂತಂ ಜಗಾಮ ಚ ಯಥಾಗತಮ್ ॥೧೫೭॥

ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇ
ಸಪ್ತಾಶೀತಿತಮೋಽಧ್ಯಾಯಃ.

---

೧೫೬. ಯಾವ ಮಾನವನು ಜಿತಮಾನಸನಾಗಿ ಅರ್ಥಜ್ಞಾನಪೂರ್ವಕವಾಗಿ ಪವಿತ್ರರಾದ ದ್ವಿಜರಿಗೆ ಶ್ರವಣಮಾಡಿಸುವನೊ, ಅವನು ತನಗೆ ಮರೆಯಾದ ದೋಷವೆಂಬ ಕಂಚುಕವನ್ನು ಬಿಟ್ಟು ಮಹೇಶ್ವರಸ್ವಾಮಿಯನ್ನು ಹೊಂದುತ್ತಾನೆ.

೧೫೭. ಷಡ್ಗುಣೈಶ್ವರ್ಯ ಸಂಪತ್ತಿಯುಳ್ಳವನೂ, ಸತ್ಯವತೀ ಪುತ್ರನೂ ಆದ ವ್ಯಾಸಮುನಿಯು ಇಷ್ಟೊಂದು ವೃತ್ತವನ್ನು ಹೇಳಿ ಸೂತಮುನಿಯನ್ನೂ ಮತ್ತು ಇತರ ಮುನಿಜನರನ್ನೂ ಸಮಾಧಾನಗೊಳಿಸಿ ಬಂದಿದ್ದ ಮಾರ್ಗದಿಂದ ಪ್ರಯಾಣ ಮಾಡಿದನು.

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ಎಂಭತ್ತೇಳನೆಯ
ಅಧ್ಯಾಯವು ಮುಗಿದುದು.

---

ಶ್ರೀಃ

# ಕೂರ್ಮಪುರಾಣಂ

---

## ಅಷ್ಟಾಶೀತಿತಮೋಽಧ್ಯಾಯಃ.

ಋಷಯ ಊಚುಃ :—

ತೀರ್ಥಾನಿ ಯಾನಿ ಲೋಕೇಽಸ್ಮಿನ್ ವಿಶ್ರುತಾನಿ ಮಹಾಂತ್ಯಪಿ ।
ತಾನಿ ತ್ವಂ ಕಥಯಾಸ್ಮಾಕಂ ರೋಮಹರ್ಷಣ ಸಾಂಪ್ರತಮ್ ॥ ೧ ॥

ರೋಮಹರ್ಷಣ ಉವಾಚ :—

ಶೃಣುಧ್ವಂ ಕಥಯಿಷ್ಯೇಽಹಂ ತೀರ್ಥಾನಿ ವಿವಿಧಾನಿ ಚ ।
ಕಥಿತಾನಿ ಪುರಾಣೇಷು ಮುನಿಭಿರ್ಬ್ರಹ್ಮವಾದಿಭಿಃ ॥ ೨ ॥

---

## ಎಂಭತ್ತೆಂಟನೆಯ ಅಧ್ಯಾಯವು

೧. ಮುನಿಗಳು ಹೀಗೆಂದು ಹೇಳಿದರು:— ರೋಮಹರ್ಷಣ ಮುನಿಯೆ ! ಈ ಲೋಕದಲ್ಲಿ ಯಾವಯಾವ ತೀರ್ಥಗಳು ಪ್ರಸಿದ್ಧವೂ, ಮಹತ್ತರವೂ ಆಗಿವೆಯೊ ಅವುಗಳನ್ನು ನೀನು ಈಗ ನಮಗೆ ಹೇಳುವವನಾಗು.

೨. ರೋಮಹರ್ಷಣ ಮುನಿಯು ಹೀಗೆ ಉತ್ತರವಿತ್ತನು:— ಬ್ರಹ್ಮವಾದಿಗಳೆನಿಸಿರುವ ಮಹರ್ಷಿಗಳಿಂದ ಪುರಾಣ ವಾಙ್ಮಯಗಳಲ್ಲಿ ವರ್ಣಿಸಲ್ಪಟ್ಟಿರುವ ವಿವಿಧವಾದ ಪುಣ್ಯತೀರ್ಥಗಳನ್ನು ನಾನು ಈಗ ಹೇಳುವೆನು. ನೀವು ಕೇಳಿರಿ.

ಯತ್ರ ಸ್ನಾನಂ ಜಪೋ ಹೋಮಃ ಶ್ರಾದ್ಧದಾನಾದಿಕಂ ಕೃತಮ್ ।
ಏಕೈಕಶೋ ಮುನಿಶ್ರೇಷ್ಠಾಃ ಪುನಾತ್ಯಾಸಪ್ತಮಂ ಕುಲಮ್ ॥ ೩ ॥

ಪಂಚಯೋಜನವಿಸ್ತೀರ್ಣಂ ಬ್ರಹ್ಮಣಃ ಪರಮೇಷ್ಠಿನಃ ।
ಪ್ರಯಾಗಂ ಪ್ರಥಿತಂ ಪೂರ್ವಂ ಯಸ್ಯ ಮಾಹಾತ್ಮ್ಯಮೀರಿತಮ್ ॥ ೪ ॥

ಅನ್ಯಚ್ಚ ತೀರ್ಥಪ್ರವರಂ ಕುರೂಣಾಂ ದೇವವಂದಿತಮ್ ।
ಋಷೀಣಾಮಾಶ್ರಮೈರ್ಜುಷ್ಟಂ ಸರ್ವಪಾಪವಿಶೋಧನಮ್ ॥ ೫ ॥

ತತ್ರ ಸ್ನಾತ್ವಾ ವಿಶುದ್ಧಾತ್ಮಾ ದಂಭಮಾತ್ಸರ್ಯವರ್ಜಿತಃ ।
ದದಾತಿ ಯತ್ಕಿಂಚಿದಪಿ ಪುನಾತ್ಯುಭಯತಃ ಕುಲಮ್ ॥ ೬ ॥

---

೩. ಶ್ರೇಷ್ಠರಾದ ಮುನಿಗಳೆ ! ಅಂತಹ ಪವಿತ್ರತೀರ್ಥಗಳಲ್ಲಿ ಮಾಡಿದ ಸ್ನಾನ ಜಪ, ಹೋಮ, ಶ್ರಾದ್ಧ ಮತ್ತು ದಾನಾದಿ ಕರ್ಮಗಳಲ್ಲಿ ಒಂದೊಂದು ಪುಣ್ಯ ಕರ್ಮವೂ ಸಪ್ತಪುರುಷರವರೆಗೆ ಕುಲವನ್ನು ಪವಿತ್ರಮಾಡುವುದು.

೪. ಪರಮಪೂಜ್ಯವಾದ ಸ್ಥಾನದಲ್ಲಿರುವ ಬ್ರಹ್ಮದೇವನ ಸಂಬಂಧಿಯಾಗಿರುವ ಐದು ಯೋಜನ ಪರಿಮಾಣದಷ್ಟು ವಿಸ್ತಾರವುಳ್ಳ ಪ್ರಯಾಗವೆಂಬ ಉತ್ತಮ ತೀರ್ಥವು ಹೇಳಲ್ಪಟ್ಟಿದೆ. ಅದರ ಮಾಹಾತ್ಮ್ಯವು ಹಿಂದೆ ವರ್ಣಿಸಲ್ಪಟ್ಟಿದೆ.

೫. ಮತ್ತೊಂದು ಕುರುತೀರ್ಥವೆಂಬ ಉತ್ತಮವಾದ ಪುಣ್ಯತೀರ್ಥವು ಇರುವುದು. ದೇವತೆಗಳಿಂದ ನಮಸ್ಕರಿಸಲ್ಪಟ್ಟಿರುವುದೂ ಮತ್ತು ಅನೇಕ ಮಹರ್ಷಿಗಳ ಆಶ್ರಮಗಳಿಂದ ಕೂಡಿರುವುದೂ ಆದ ಆ ತೀರ್ಥವು ಸಮಸ್ತ ಪಾತಕಗಳನ್ನು ಶೋಧನಮಾಡುವುದು.

೬. ಆ ತೀರ್ಥದಲ್ಲಿ ಸ್ನಾನಮಾಡಿ ಪರಿಶುದ್ಧನಾಗಿ ಮತ್ತು ದಂಭ ಮಾತ್ಸರ್ಯ ಮುಂತಾದ ಕಲ್ಮಷಗಳಿಂದ ಶೂನ್ಯವಾದ ಮಾನಸವುಳ್ಳವನಾಗಿ ಯಾವುದಾದರೊಂದು ಅಲ್ಪದ್ರವ್ಯವನ್ನು ದಾನಮಾಡಿದರೂ ಆ ದಾನವು ತನ್ನ ಹಿಂದೆ ಮತ್ತು ಮುಂದಿನ ವಂಶಾವಳಿಯನ್ನು ಪವಿತ್ರಮಾಡುವುದು.

ಪರಂ ಗುಹ್ಯಂ ಗಯಾತೀರ್ಥಂ ಪಿತೄಣಾಂ ಚಾತಿದುರ್ಲಭಮ್ ।
ಕೃತ್ವಾ ಪಿಂಡಪ್ರದಾನಂ ಚ ನ ಭೂಯೋ ಜಾಯತೇ ನರಃ ॥ ೭ ॥

ಸಕೃದ್ಗಯಾಭಿಗಮನಂ ಕೃತ್ವಾ ಪಿಂಡಂ ದದಾತಿ ಯಃ ।
ತಾರಿತಾಃ ಪಿತರಸ್ತೇನ ಯಾಸ್ಯಂತಿ ಪರಮಾಂ ಗತಿಮ್ ॥ ೮ ॥

ತತ್ರ ಲೋಕಹಿತಾರ್ಥಾಯ ರುದ್ರೇಣ ಪರಮಾತ್ಮನಾ ।
ಶಿಲಾತಲೇ ಪದಂ ನ್ಯಸ್ತಂ ತತ್ರ ಪಿತೄನ್ ಪ್ರಸಾದಯೇತ್ ॥ ೯ ॥

ಗಯಾಭಿಗಮನಂ ಕರ್ತುಂ ಯಃ ಶಕ್ತೋ ನಾಧಿಗಚ್ಛತಿ ।
ಶೋಚಂತಿ ಪಿತರಸ್ತಂ ವೈ ವೃಥಾ ತಸ್ಯ ಪರಿಶ್ರಮಃ ॥ ೧೦ ॥

---

೭. ಮತ್ತು ಗಯಾತೀರ್ಥವು ಅತ್ಯಂತ ರಹಸ್ಯವಾದುದೂ ಮತ್ತು ಪಿತೃಗಳಿಗೆ ದುರ್ಲಭವೂ ಆದ ತೀರ್ಥವಾಗಿದೆ. ಆ ತೀರ್ಥದಲ್ಲಿ ಪಿಂಡದಾನ ಮಾಡಿದ ಮಾನವನು ಪುನರ್ಜನ್ಮವನ್ನು ಹೊಂದುವುದಿಲ್ಲ.

೮. ಇಂತಹ ಗಯಾತೀರ್ಥದ ಯಾತ್ರೆಯನ್ನು ಮಾಡಿ ಯಾವ ಮಾನವನು ಒಂದುಸಲ ಮಾತ್ರ ಪಿತೃಗಳಿಗೆ ಪಿಂಡದಾನ ಮಾಡುವನೊ, ಅವನಿಂದ ತನ್ನ ಪಿತೃಗಳು ಉದ್ಧರಿಸಲ್ಪಟ್ಟವರಾಗಿ ಉತ್ತಮವಾದ ಸದ್ಗತಿಯನ್ನು ಹೊಂದುತ್ತಾರೆ.

೯. ಆ ತೀರ್ಥದ ತೀರದಲ್ಲಿರುವ ಒಂದು ಶಿಲೆಯಲ್ಲಿ ರುದ್ರಮೂರ್ತಿಯಾದ ಪರಮಾತ್ಮನಿಂದ ಲೋಕಕ್ಕೆ ಹಿತವನ್ನು ತೋರುವ ಅಭಿಲಾಷೆಯಿಂದ ಪದವು ಇರಿಸಲ್ಪಟ್ಟಿದೆ. ಆ ಪಾದದಲ್ಲಿ ಪಿತೃಗಳನ್ನು ತೃಪ್ತಿಗೊಳಿಸಬೇಕು.

೧೦. ಯಾವ ನರನು ಗಯಾತೀರ್ಥದ ಯಾತ್ರೆಯನ್ನು ಮಾಡಲು ಶಕ್ತನಾದರೂ ಅದನ್ನು ಮಾಡುವುದಿಲ್ಲವೊ, ಅವನ ಪಿತೃಗಳು ಸರ್ವ ಕಾಲದಲ್ಲಿಯೂ ಶೋಕಿಸುತ್ತಿರುವರು. ಅವನ ಮತ್ತಾವ ಧರ್ಮಾಚರಣೆಯ ಶ್ರಮವೂ ನಿರರ್ಥಕವಾದುದು.

ಗಾಯಂತಿ ಪಿತರೋ ಗಾಥಾಃ ಕೀರ್ತಯಂತಿ ಮಹರ್ಷಯಃ ।
ಗಯಾಂ ಯಾಸ್ಯತಿ ಯಃ ಕಶ್ಚಿತ್ಸೋಽಸ್ಮಾನ್ ಸಂತಾರಯಿಷ್ಯತಿ ॥೧೧॥

ಯದಿ ಸ್ಯಾತ್ ಪಾತಕೋಪೇತಃ ಸ್ವಧರ್ಮಪರಿವರ್ಜಿತಃ ।
ಗಯಾಂ ಯಾಸ್ಯತಿ ಯಃ ಕಶ್ಚಿತ್ ಸೋಽಸ್ಮಾನ್ ಸಂತಾರಯಿಷ್ಯತಿ ॥

ಏಷ್ಟವ್ಯಾ ಬಹವಃ ಪುತ್ರಾಃ ಶೀಲವಂತೋ ಗುಣಾನ್ವಿತಾಃ ।
ತೇಷಾಂ ತು ಸಮವೇತಾನಾಂ ಯದ್ಯೇಕೋಽಪಿ ಗಯಾಂ ವ್ರಜೇತ್ ॥

ತಸ್ಮಾತ್ ಸರ್ವಪ್ರಯತ್ನೇನ ಬ್ರಾಹ್ಮಣಸ್ತು ವಿಶೇಷತಃ ।
ಪ್ರದದ್ಯಾದ್ವಿಧಿವತ್ ಪಿಂಡಾನ್ ಗಯಾಂ ಗತ್ವಾ ಸಮಾಹಿತಃ ॥ ೧೪ ॥

---

೧೧. ಗಯಾತೀರ್ಥದ ಮಹಿಮೆಯ ವಿಷಯದಲ್ಲಿ ಪಿತೃದೇವರು ಒಂದು ಗಾಥಾಶ್ಲೋಕವನ್ನು ಗಾನಮಾಡುತ್ತಿರುವರು. ಮಹರ್ಷಿಗಳು ಕೀರ್ತಿಸುತ್ತಿರುವರು. ಹುಟ್ಟಿದ ಪುತ್ರರಲ್ಲಿ ಯಾವನಾದರೊಬ್ಬನು ಗಯಾತೀರ್ಥಕ್ಕೆ ಹೋಗುವನು. ಅವನು ನಮ್ಮನ್ನು ಉದ್ಧರಿಸುವನು.

೧೨. ಒಂದುವೇಳೆ ಸ್ವಧರ್ಮಾಚರಣೆಯಿಂದ ರಹಿತನೂ, ಹಾಗು ನಿಷಿದ್ಧಾಚರಣೆಯಿಂದುಂಟಾದ ಪಾಪಗಳಿಂದ ಪೂರ್ಣನೂ, ಆಗಿದ್ದರೂ ಗಯಾತೀರ್ಥಕ್ಕೆ ಹೋದವನು ಯಾರೇ ಆಗಲಿ ನಮ್ಮನ್ನು ತಾರಣಮಾಡುವನು.

೧೩. ಸದಾಚಾರ ಸದ್ಗುಣಗಳಿಂದ ಕೂಡಿದ ಅನೇಕ ಪುತ್ರರು ಹುಟ್ಟಬೇಕೆಂದು ಪಿತೃಗಳು ಆಶಿಸಬೇಕು. ಹಾಗೆ ಜನಿಸಿದ ಅನೇಕಮಂದಿ ಪುತ್ರರಲ್ಲಿ ಒಬ್ಬನಾದರೂ ಗಯಾತೀರ್ಥಯಾತ್ರೆಯನ್ನು ನೆರವೇರಿಸಬಹುದು.

೧೪. ಆದುದರಿಂದ ಬ್ರಾಹ್ಮಣನು ವಿಶೇಷವಾಗಿ ಸರ್ವಪ್ರಯತ್ನಪೂರ್ವಕವಾಗಿ ಗಯಾತೀರ್ಥಕ್ಕೆ ಹೋಗಿ ಶ್ರದ್ಧಾ-ಸಮಾಧಾನಗಳಿಂದ ಕೂಡಿ ಅಲ್ಲಿ ವಿಧಿವತ್ತಾಗಿ ಪಿತೃಗಳಿಗೆ ಪಿಂಡದಾನವನ್ನು ಮಾಡಬೇಕು.

ಧನ್ಯಾಸ್ತು ಖಲು ತೇ ಮರ್ತ್ಯಾ ಗಯಾಯಾಂ ಪಿಂಡದಾಯಿನಃ ।
ಕುಲಾನ್ಯುಭಯತಃ ಸಪ್ತ ಸಮುದ್ಧೃತ್ಯಾಪ್ನುಯುಃ ಪರಮ್ ॥ ೧೫ ॥

ಅನ್ಯಚ್ಚ ತೀರ್ಥಪ್ರವರಂ ಸಿದ್ಧಾವಾಸಮುದಾಹೃತಮ್ ।
ಪ್ರಭಾಸಮಿತಿ ವಿಖ್ಯಾತಂ ಯತ್ರಾಸ್ತೇ ಭಗವಾನ್ ಭವಃ ॥ ೧೬ ॥

ತತ್ರ ಸ್ನಾನಂ ತತಃ ಶ್ರಾದ್ಧಂ ಬ್ರಾಹ್ಮಣಾನಾಂ ಚ ಪೂಜನಮ್ ।
ಕೃತ್ವಾ ಲೋಕಮವಾಪ್ನೋತಿ ಬ್ರಾಹ್ಮಣೋಽಕ್ಷಯ್ಯಮುತ್ತಮಮ್ ॥

ತೀರ್ಥಂ ತ್ರೈಯಂಬಕಂ ನಾಮ ಸರ್ವದೇವನಮಸ್ಕೃತಮ್ ।
ಪೂಜಯಿತ್ವಾ ತತ್ರ ರುದ್ರಂ ಜ್ಯೋತಿಷ್ಟೋಮಫಲಂ ಲಭೇತ್ ॥ ೧೮ ॥

---

೧೫. ಗಯಾತೀರ್ಥದಲ್ಲಿ ಪಿಂಡದಾನವಮಾಡಿದ ಮಾನವರು ಬಹು ಪುಣ್ಯಾತ್ಮರೂ, ಧನ್ಯರೂ ಆಗಿರುವರು. ಅವರು ತಮ್ಮ ಮಾತೃ-ಪಿತೃಗಳ ಎರಡು ವಂಶಗಳನ್ನೂ ಸಪ್ತಪುರುಷಪರ್ಯಂತವಾಗಿ ಉದ್ಧಾರಮಾಡಿ ಪರಮಗತಿಯನ್ನು ಹೊಂದುವರು.

೧೬. ಸಿದ್ಧಜನರಿಗೆ ವಾಸಭೂಮಿಯೆಂದು ಹೇಳಲ್ಪಟ್ಟಿರುವ " ಪ್ರಭಾಸ " ಎಂಬ ನಾಮಾಂಕನದಿಂದ ವಿಖ್ಯಾತವಾದ ಮತ್ತೊಂದು ಪ್ರಶಸ್ತವಾದ ತೀರ್ಥವು ಇರುವುದು. ಆ ತೀರ್ಥಸನ್ನಿಧಿಯಲ್ಲಿ ಮಹೇಶ್ವರನು ವಾಸಮಾಡಿರುವನು.

೧೭. ಆ ತೀರ್ಥದಲ್ಲಿ ಬ್ರಾಹ್ಮಣನು ಸ್ನಾನಮಾಡಿ ಅನಂತರ ಪಿತೃಗಳಿಗೆ ಶ್ರಾದ್ಧ, ಬ್ರಾಹ್ಮಣಪೂಜೆಗಳನ್ನು ಮಾಡಿ ಶಾಶ್ವತವೂ ಉತ್ತಮವೂ ಆದ ಪುಣ್ಯಲೋಕವನ್ನು ಹೊಂದುವನು.

೧೮. ತ್ರೈಯಂಬಕವೆಂದು ಸಂಜ್ಞಾಂಕಿತವೂ ಸಮಸ್ತ ದೇವತೆಗಳಿಂದ ವಂದಿಸಲ್ಪಡುವುದೂ ಆದ ಮತ್ತೊಂದು ತೀರ್ಥವು ಇದೆ. ಆ ತೀರ್ಥದಲ್ಲಿ ರುದ್ರದೇವನನ್ನು ಪೂಜಿಸಿದರೆ ಜ್ಯೋತಿಷ್ಟೋಮಯಾಗವನ್ನು ಮಾಡಿದ ಫಲವು ಲಭಿಸುವುದು.

ಸುವರ್ಣಾಕ್ಷಂ ಮಹಾದೇವಂ ಸಮಭ್ಯರ್ಚ್ಯ ಕಪರ್ದಿನಮ್ ।
ಬ್ರಾಹ್ಮಣಾನ್ ಪೂಜಯಿತ್ವಾ ಚ ಗಾಣಪತ್ಯಂ ಲಭೇತ ಸಃ ॥ ೧೯ ॥

ಸೋಮೇಶ್ವರಂ ತೀರ್ಥವರಂ ರುದ್ರಸ್ಯ ಪರಮೇಷ್ಠಿನಃ ।
ಸರ್ವವ್ಯಾಧಿಹರಂ ಪುಣ್ಯಂ ರುದ್ರಸಾಲೋಕ್ಯಕಾರಣಮ್ ॥ ೨೦ ॥

ತೀರ್ಥಾನಾಂ ಪರಮಂ ತೀರ್ಥಂ ವಿಜಯಂ ನಾಮ ಶೋಭನಮ್ ।
ತತ್ರ ಲಿಂಗಂ ಮಹೇಶಸ್ಯ ವಿಜಯಂ ನಾಮ ವಿಶ್ರುತಮ್ ॥ ೨೧ ॥

ಷಣ್ಮಾಸನಿಯತಾಹಾರೋ ಬ್ರಹ್ಮಚಾರೀ ಸಮಾಹಿತಃ ।
ಉಷಿತ್ವಾ ತತ್ರ ವಿಪ್ರೇಂದ್ರಾ ಯಾಸ್ಯಂತಿ ಪರಮಂ ಪದಮ್ ॥ ೨೨ ॥

---

೧೯. ದೇವೋತ್ತಮನೂ ಜಟಾಜೂಟಧರನೂ ಆದ ಸುವರ್ಣಾಕ್ಷೇಶ್ವರನನ್ನು ಅರ್ಚನೆಮಾಡಿ ಅಲ್ಲಿ ಬ್ರಾಹ್ಮಣರನ್ನು ಪೂಜಿಸಿದವನು ಗಣಗಳ ಅಧಿಪತ್ಯವನ್ನು ಹೊಂದುತ್ತಾನೆ.

೨೦. ಪರಮಪದದಲ್ಲಿರುವ ರುದ್ರಮೂರ್ತಿಯ ಸಾನ್ನಿಧ್ಯದಿಂದ ಕೂಡಿದ ಸೋಮೇಶ್ವರವೆಂಬ ಶ್ರೇಷ್ಠತೀರ್ಥವು ಮತ್ತೊಂದು ಇದೆ. ಆ ತೀರ್ಥವು ಪವಿತ್ರವೂ ಸರ್ವರೋಗ ನಿವಾರಕವೂ, ರುದ್ರನ ಸಾಲೋಕ್ಯ ಮುಕ್ತಿಯನ್ನು ಕೊಡುವುದೂ ಆಗಿದೆ.

೨೧. ತೀರ್ಥಗಳಲ್ಲೆಲ್ಲ ಉತ್ತಮ ತೀರ್ಥವೆಂದರೆ ಮಂಗಳಕರವಾದ ವಿಜಯವೆಂದು ಪ್ರಸಿದ್ಧವಾದ ತೀರ್ಥವಾಗಿರುವುದು. ಅಲ್ಲಿ ಮಾಹೇಶ್ವರನ "ವಿಜಯೇಶ್ವರ" ಎಂಬ ಲಿಂಗವು ಪ್ರಖ್ಯಾತಿ ಹೊಂದಿದೆ.

೨೨. ಆ ವಿಜಯ ತೀರ್ಥದಲ್ಲಿ ವಿಪ್ರೇಂದ್ರನು ಆರುಮಾಸಗಳವರೆಗೆ ನಿಯತವಾದ ಆಹಾರವುಳ್ಳವನೂ, ಬ್ರಹ್ಮಚರ್ಯ ನಿಯಮವಂತನೂ, ಮತ್ತು ಶಾಂತಚಿತ್ತನೂ ಆಗಿ ವಾಸಮಾಡಿ ಪರಮಪದವನ್ನು ಹೊಂದುತ್ತಾನೆ.

ಅನ್ಯಚ್ಚ ತೀರ್ಥಪ್ರವರಂ ಪೂರ್ವದೇಶೇಷು ಶೋಭನಮ್ ।
ಏಕಾಂತಂ ದೇವದೇವಸ್ಯ ಗಾಣಪತ್ಯಫಲಪ್ರದಮ್ ॥ ೨೩ ॥

ದತ್ವಾತ್ರ ಶಿವಭಕ್ತಾನಾಂ ಕಿಂಚಿಚ್ಛಶ್ವನ್ಮಹೀಂ ಶುಭಾಮ್ ।
ಸಾರ್ವಭೌಮೋ ಭವೇದ್ರಾಜಾ ಮುಮುಕ್ಷುರ್ಮೋಕ್ಷಮಾಪ್ನುಯಾತ್ ॥

ಮಹಾನದೀಜಲಂ ಪುಣ್ಯಂ ಸರ್ವಪಾಪವಿನಾಶನಮ್ ।
ಗ್ರಹಣೇ ತದುಪಸ್ಪೃಶ್ಯ ಮುಚ್ಯತೇ ಸರ್ವಪಾತಕೈಃ ॥ ೨೫ ॥

ಅನ್ಯಾ ಚ ವಿರಜಾ ನಾಮ ನದೀ ತ್ರೈಲೋಕ್ಯವಿಶ್ರುತಾ ।
ತಸ್ಯಾಂ ಸ್ನಾತ್ವಾ ನರೋ ವಿಪ್ರೋ ಬ್ರಹ್ಮಲೋಕೇ ಮಹೀಯತೇ ॥ ೨೬ ॥

---

೨೩. ಪೂರ್ವದ ದೇಶಗಳಲ್ಲಿ ಮಂಗಳಕರವಾದ ಮತ್ತೊಂದು ಉತ್ತಮ ತೀರ್ಥವು ಇರುವುದು. ಆ ತೀರ್ಥವು ದೇವೋತ್ತಮನಾದ ಈಶ್ವರನಿಗೆ ಏಕಾಂತ ವಾಸದಂತಿರುವುದೂ, ಗಾಣಪತ್ಯ ಫಲವನ್ನು ಕೊಡುವುದೂ ಆಗಿದೆ.

೨೪. ಈ ಪುಣ್ಯಕ್ಷೇತ್ರದಲ್ಲಿ ಶಿವಭಕ್ತಜನರಿಗೆ ಸ್ವಲ್ಪ ಮಾತ್ರ ಪರಿಮಾಣದ ಉತ್ತಮ ಭೂಮಿಯನ್ನು ಚಿರಕಾಲ ಅನುಭವಿಸುವಂತೆ ದಾನಮಾಡಿದವನು ಸಾರ್ವಭೌಮರಾಜನಾಗುತ್ತಾನೆ. ಮುಮುಕ್ಷುವಾದರೆ ಮುಕ್ತಿಯನ್ನು ಹೊಂದುತ್ತಾನೆ.

೨೫ ಮಹಾನದಿಗಳ ಜಲವು ಪವಿತ್ರವೂ ಸಮಸ್ತ ಪಾಪಗಳನ್ನು ನಾಶಮಾಡುವುದೂ ಆಗಿದೆ. ಗ್ರಹಣ ಸಮಯದಲ್ಲಿ ಮಹಾನದೀ ಜಲದಲ್ಲಿ ಸ್ನಾನ, ಆಚಮನಗಳನ್ನು ಮಾಡಿದರೆ ಸರ್ವಪಾಪಗಳಿಂದ ಮುಕ್ತನಾಗುತ್ತಾನೆ.

೨೬. "ವಿರಜಾ" ಎಂಬ ನಾಮಾಂಕನದಿಂದ ಮೂರು ಲೋಕಗಳಲ್ಲಿ ಪ್ರಸಿದ್ಧಿಯನ್ನು ಹೊಂದಿರುವ ಮತ್ತೊಂದು ಉತ್ತಮವಾದ ನದಿಯು ಇದೆ. ಬ್ರಾಹ್ಮಣ ಜಾತಿಯ ಮಾನವನು ಆ ನದಿಯಲ್ಲಿ ಸ್ನಾನಮಾಡಿ ಪುಣ್ಯದಿಂದ ಬ್ರಹ್ಮಲೋಕದಲ್ಲಿ ಪೂಜ್ಯನಾಗುತ್ತಾನೆ

ತೀರ್ಥಂ ನಾರಾಯಣಸ್ಯಾನ್ಯನ್ನಾಮ್ನಾ ತು ಪುರುಷೋತ್ತಮಮ್ ।
ತತ್ರ ನಾರಾಯಣಃ ಶ್ರೀಮಾನಾಸ್ತೇ ಪರಮಪೂರುಷಃ ॥ ೨೭ ॥

ಪೂಜಯಿತ್ವಾ ಪರಂ ವಿಷ್ಣುಂ ಸ್ನಾತ್ವಾ ತತ್ರ ದ್ವಿಜೋತ್ತಮಃ ।
ಬ್ರಾಹ್ಮಣಾನ್ ಪೂಜಯಿತ್ವಾ ತು ವಿಷ್ಣುಲೋಕಮವಾಪ್ನುಯಾತ್ ॥

ತೀರ್ಥಾನಾಂ ಪರಮಂ ತೀರ್ಥಂ ಗೋಕರ್ಣಂ ನಾಮ ವಿಶ್ರುತಮ್ ।
ಸರ್ವಪಾಪಹರಂ ಶಂಭೋರ್ನಿವಾಸಃ ಪರಮೇಷ್ಠಿನಃ ॥ ೨೯ ॥

ದೃಷ್ಟ್ವಾ ಲಿಂಗಂ ತು ದೇವಸ್ಯ ಗೋಕರ್ಣಂ ಪರಮುತ್ತಮಮ್ ।
ಈಪ್ಸಿತಾನ್ ಲಭತೇ ಕಾಮಾನ್ ರುದ್ರಸ್ಯ ದಯಿತೋ ಭವೇತ್ ॥೩೦॥

---

೨೭. ಶ್ರೀಮನ್ನಾರಾಯಣನ ಸನ್ನಿಧಿಯಿಂದ ಕೂಡಿದ, "ಪುರುಷೋತ್ತಮ" ತೀರ್ಥವೆಂಬ ಹೆಸರಿನಿಂದ ಪ್ರಸಿದ್ಧವಾದ ಮತ್ತೊಂದು ತೀರ್ಥವು ಇರುವುದು. ಅಲ್ಲಿ ಪರಮಪುರುಷನಾದ ಶ್ರೀಮನ್ನಾರಾಯಣಸ್ವಾಮಿಯು ವಾಸಮಾಡುತ್ತಲಿರುವನು.

೨೮. ದ್ವಿಜೋತ್ತಮನು ಪುರುಷೋತ್ತಮ ತೀರ್ಥದಲ್ಲಿ ಸ್ನಾನಮಾಡಿ ಪರಮ ಪುರುಷನಾದ ವಿಷ್ಣುವನ್ನು ಪೂಜೆಮಾಡಿ ಹಾಗು ಬ್ರಾಹ್ಮಣರನ್ನು ಸತ್ಕರಿಸಿದರೆ ವಿಷ್ಣು ಲೋಕವನ್ನು ಹೊಂದುವನು.

೨೯. ಪರಮಪದದಲ್ಲಿ ವಾಸವಾಗಿರುವ ಶಂಭುವಿಗೆ ನಿವಾಸಸ್ಥಾನವೂ, ಸರ್ವ ಪಾತಕ ಮೋಚಕವೂ, ಮತ್ತು ಗೋಕರ್ಣವೆಂಬ ನಾಮದಿಂದ ಪ್ರಖ್ಯಾತವೂ ಆದ ತೀರ್ಥವು ತೀರ್ಥಗಳಲ್ಲೆಲ್ಲ ಉತ್ತಮ ತೀರ್ಥವಾದುದು.

೩೦. ಗೋಕರ್ಣ ತೀರ್ಥದಲ್ಲಿರುವ ಪರಮೋತ್ತಮವಾದ ಮಹಾಬಲೇಶ್ವರ ಲಿಂಗವನ್ನು ದರ್ಶನಮಾಡಿದವನು ತನ್ನ ಸಕಲ ಇಷ್ಟಾರ್ಥಗಳನ್ನೂ ಹೊಂದಿ ರುದ್ರ ಮೂರ್ತಿಗೆ ಅತಿ ಪ್ರಿಯನಾಗಿರುವನು.

ಉತ್ತರಂ ಚಾಪಿ ಗೋಕರ್ಣಂ ಲಿಂಗಂ ದೇವಸ್ಯ ಶೂಲಿನಃ ।
ಮಹಾದೇವಂ ಚಾರ್ಚಯಿತ್ವಾ ಶಿವಸಾಯುಜ್ಯಮಾಪ್ನುಯಾತ್ ॥ ೩೧ ॥

ತತ್ರ ದೇವೋ ಮಹಾದೇವಃ ಸ್ಥಾಣುರಿತ್ಯಭಿವಿಶ್ರುತಃ ।
ತಂ ದೃಷ್ಟ್ವಾ ಸರ್ವಪಾಪೇಭ್ಯಸ್ತತ್ಕ್ಷಣಾನ್ಮುಚ್ಯತೇ ನರಃ ॥ ೩೨ ॥

ಅನ್ಯತ್ ಕುಬ್ಜಾಶ್ರಮಂ ಪುಣ್ಯಂ ಸ್ಥಾನಂ ವಿಷ್ಣೋರ್ಮಹಾತ್ಮನಃ ।
ಸಂಪೂಜ್ಯ ಪುರುಷಂ ವಿಷ್ಣುಂ ಶ್ವೇತದ್ವೀಪೇ ಮಹೀಯತೇ ॥ ೩೩ ॥

ಯತ್ರ ನಾರಾಯಣೋ ದೇವೋ ರುದ್ರೇಣ ತ್ರಿಪುರಾರಿಣಾ ।
ಕೃತ್ವಾ ಯಜ್ಞಸ್ಯ ಮಥನಂ ದಕ್ಷಸ್ಯ ತು ವಿಸರ್ಜಿತಃ ॥ ೩೪ ॥

---

೩೧. ಶೂಲಧಾರಿಯಾದ ಶಂಕರಸ್ವಾಮಿಯ ಸರ್ವೋತ್ತಮವಾದ ಗೋಕರ್ಣವಾಸಿ ಲಿಂಗವನ್ನೂ ಶಂಕರನನ್ನೂ ಪೂಜೆಮಾಡಿ ಆದರ ಪುಣ್ಯಪರಿಪಾಕದಿಂದ ಶಿವನ ಸಾಯುಜ್ಯವನ್ನು ಹೊಂದುತ್ತಾನೆ.

೩೨. ಉತ್ತರ ಗೋಕರ್ಣದಲ್ಲಿ ಸ್ವಾಮಿಯಾದ ಮಹಾದೇವನು " ಸ್ಥಾಣ್ವೀಶ್ವರ " ಎಂದು ಪ್ರಸಿದ್ಧನಾಗಿರುವನು. ಮಾನವನು ಆ ಸ್ಥಾಣ್ವೀಶ್ವರನನ್ನು ಸಂದರ್ಶನ ಮಾಡಿ ಆ ಕ್ಷಣದಲ್ಲಿ ಸರ್ವಪಾಪಗಳಿಂದ ಮುಕ್ತನಾಗುತ್ತಾನೆ.

೩೩. ಮಹಾತ್ಮನಾದ ವಿಷ್ಣುವಿನ ಸಾನ್ನಿಧ್ಯದಿಂದ ಕೂಡಿದ " ಕುಬ್ಜಾಶ್ರಮ " ವೆಂಬ ಮತ್ತೊಂದು ಪುಣ್ಯಸ್ಥಾನವಿರುವುದು. ಪೂರ್ಣಾಕಾರನಾದ ವಿಷ್ಣುವನ್ನು ಆ ಕುಬ್ಜಾಶ್ರಮದಲ್ಲಿ ಪೂಜಿಸಿದ ಮಾನವನು ಶ್ವೇತದ್ವೀಪದಲ್ಲಿ ಪೂಜ್ಯನಾಗುತ್ತಾನೆ.

೩೪. ಆ ಕ್ಷೇತ್ರದಲ್ಲಿ ತ್ರಿಪುರಾಸುರ ಸಂಹಾರಿಯಾದ ರುದ್ರದೇವನಿಂದ ಸ್ವಾಮಿಯಾದ ನಾರಾಯಣನು ಮಾತ್ರ ದಕ್ಷಪ್ರಜಾಪತಿಯ ಯಜ್ಞವನ್ನು ಧ್ವಂಸ ಮಾಡಿ ಆ ಸಮಯದಲ್ಲಿ ಬಿಡಲ್ಪಟ್ಟನು.

ಸಮಂತಾದ್ಯೋಜನಕ್ಷೇತ್ರಂ ಸಿದ್ಧರ್ಷಿಗಣಸೇವಿತಮ್ ।
ಪುಣ್ಯಮಾಯತನಂ ವಿಷ್ಣೋಸ್ತತ್ರಾಸ್ತೇ ಪುರುಷೋತ್ತಮಃ ॥ ೩೫ ॥

ಅನ್ಯತ್ ಕೋಕಾಮುಖೇ ವಿಷ್ಣೋಸ್ತೀರ್ಥಮದ್ಭುತಕರ್ಮಣಃ ।
ಮುಕ್ತೋಽತ್ರ ಪಾತಕೈರ್ಮರ್ತ್ಯೋ ವಿಷ್ಣುಸಾರೂಪ್ಯಮಾಪ್ನುಯಾತ್ ॥

ಶಾಲಿಗ್ರಾಮಂ ಮಹಾತೀರ್ಥಂ ವಿಷ್ಣೋಃ ಪ್ರೀತಿವಿವರ್ಧನಮ್ ।
ಪ್ರಾಣಾಂಸ್ತತ್ರ ನರಸ್ತ್ಯಕ್ತ್ವಾ ಹೃಷೀಕೇಶಂ ಪ್ರಪಶ್ಯತಿ ॥ ೩೭ ॥

ಅಶ್ವತೀರ್ಥಮಿತಿ ಖ್ಯಾತಂ ಸಿದ್ಧಾವಾಸಂ ಸುಶೋಭನಮ್ ।
ಆಸ್ತೇ ಹಯಶಿರಾ ನಿತ್ಯಂ ತತ್ರ ನಾರಾಯಣಃ ಸ್ವಯಮ್ ॥ ೩೮ ॥

---

೩೫. ಆ ತೀರ್ಥವು ಸುತ್ತಲೂ ಒಂದುಯೋಜನ ಪರಿಮಾಣವುಳ್ಳದ್ದೂ, ಸಿದ್ಧರು ಮತ್ತು ಮುನಿಜನರ ವೃಂದದಿಂದ ಸೇವಿಸಲ್ಪಟ್ಟಿರುವುದೂ ಆಗಿದೆ. ಅಲ್ಲಿ ವಿಷ್ಣುವಿನ ಪವಿತ್ರವಾದ ಆಲಯವು ಇದೆ. ಆ ಆಲಯದಲ್ಲಿ ಪುರುಷೋತ್ತಮನಾದ ವಿಷ್ಣುವು ವಾಸಮಾಡಿಕೊಂಡಿರುವನು.

೩೬. ಕೋಕಾಮುಖವೆಂಬ ಕ್ಷೇತ್ರದಲ್ಲಿ ಅದ್ಭುತವಾದ ಕರ್ಮಗಳಿಂದ ಮಹಿಮೆಯನ್ನು ತೋರ್ಪಡಿಸಿದ ವಿಷ್ಣುವಿನ ಒಂದು ತೀರ್ಥವಿದೆ. ಇದನ್ನು ಸೇವಿಸಿದ ಮಾನವನು ಪಾಪಗಳಿಂದ ವಿಮುಕ್ತನಾಗಿ ವಿಷ್ಣುವಿನ ಸಾರೂಪ್ಯವನ್ನು ಹೊಂದುವನು.

೩೭. ಶಾಲಿಗ್ರಾಮ ತೀರ್ಥವೆಂಬ ಮತ್ತೊಂದು ಮಹಾತೀರ್ಥವು ವಿಷ್ಣು ಪರಮಾತ್ಮನಿಗೆ ಪ್ರೀತಿಕರವಾಗಿರುವುದು. ಅಲ್ಲಿ ಪ್ರಾಣತ್ಯಾಗಮಾಡಿರುವ ಮಾನವನು ವಿಷ್ಣುಪರಮಾತ್ಮನನ್ನು ಸಾಕ್ಷಾತ್ಕರಿಸುತ್ತಾನೆ.

೩೮. ಹಯಗ್ರೀವಾವತಾರದಿಂದ ಕೂಡಿದ ಶ್ರೀಮನ್ನಾರಾಯಣನು ತಾನಾಗಿ ನಿತ್ಯದಲ್ಲಿಯೂ ವಾಸಮಾಡುತ್ತಲಿರುವ ಸಿದ್ಧಪುರುಷರಿಗೆ ವಾಸಸ್ಥಾನವೂ, ಕಲ್ಯಾಣಪ್ರದವೂ ಆದ ಅಶ್ವತೀರ್ಥವೆಂಬ ಒಂದು ತೀರ್ಥವು ಪ್ರಸಿದ್ಧವಾಗಿದೆ.

ತೀರ್ಥಂ ತ್ರೈಲೋಕ್ಯವಿಖ್ಯಾತಂ ಸಿದ್ಧಾವಾಸಂ ಸುಶೋಭನಮ್ ।
ತತ್ರಾಸ್ತಿ ಪುಣ್ಯದಂ ತೀರ್ಥಂ ಬ್ರಹ್ಮಣಃ ಪರಮೇಷ್ಠಿನಃ ॥ ೩೯ ॥

ಪುಷ್ಕರಂ ಸರ್ವಪಾಪಘ್ನಂ ಮೃತಾನಾಂ ಬ್ರಹ್ಮಲೋಕದಮ್ ॥ ೪೦ ॥

ಮನಸಾ ಸಂಸ್ಮರೇದ್ಯಸ್ತು ಪುಷ್ಕರಂ ವೈ ದ್ವಿಜೋತ್ತಮಃ ।
ಪೂಯತೇ ಪಾತಕೈಃ ಸರ್ವೈಃ ಶಕ್ರೇಣ ಸಹ ಮೋದತೇ ॥ ೪೧ ॥

ತತ್ರ ದೇವಾಃ ಸಗಂಧರ್ವಾಃ ಸಯಕ್ಷೋರಗರಾಕ್ಷಸಾಃ ।
ಉಪಾಸತೇ ಸಿದ್ಧಸಂಘಾ ಬ್ರಹ್ಮಾಣಂ ಪದ್ಮಸಂಭವಮ್ ॥ ೪೨ ॥

---

೩೯. ಸಿದ್ಧರಿಂದ ಆಶ್ರಯಿಸಲ್ಪಟ್ಟಿರುವುದೂ, ಮಂಗಳಮಯವೂ ಮತ್ತು ತ್ರಿಲೋಕಗಳಲ್ಲಿ ವಿಖ್ಯಾತವೂ ಆದ ಮತ್ತೊಂದು ತೀರ್ಥಕ್ಷೇತ್ರವಿರುವುದು. ಅಲ್ಲಿ ಉತ್ತಮ ಸ್ಥಾನವಾಸಿಯಾದ ಬ್ರಹ್ಮದೇವನ ತೀರ್ಥವು ಭಕ್ತರಿಗೆ ಪುಣ್ಯದಾಯಕವಾಗಿದೆ.

೪೦. ಆ ತೀರ್ಥವು ಪುಷ್ಕರತೀರ್ಥವೆಂಬ ನಾಮಾಂಕನದಿಂದ ಪ್ರಸಿದ್ಧವೂ ಸಕಲಪಾಪ ಭಂಜಕವೂ ಮತ್ತು ಅಲ್ಲಿ ಮರಣಹೊಂದಿದ ಮಾನವರಿಗೆ ಬ್ರಹ್ಮಲೋಕ ಪ್ರಾಪ್ತಿಫಲವನ್ನು ಕೊಡುವುದೂ ಆಗಿದೆ.

೪೧ ಯಾವ ದ್ವಿಜಶ್ರೇಷ್ಠನು ಪುಷ್ಕರತೀರ್ಥವನ್ನು ಮನಸ್ಸಿನಲ್ಲಿ ಶ್ರದ್ಧೆಯಿಂದ ಸ್ಮರಣಮಾಡುವನೊ ; ಅವನು ಸಮಸ್ತ ಪಾತಕಗಳಿಂದ ಮುಕ್ತಿಹೊಂದುತ್ತಾನೆ. ಮತ್ತು ಇಂದ್ರನೊಡನೆ ದಿವ್ಯಭೋಗವನ್ನು ಅನುಭವಿಸುತ್ತಾನೆ.

೪೨. ಆ ಪುಷ್ಕರತೀರ್ಥದಲ್ಲಿ ಗಂಧರ್ವ-ಯಕ್ಷ-ರಾಕ್ಷಸ ಮತ್ತು ಸರ್ಪಗಳಿಂದ ಕೂಡಿದ ದೇವತೆಗಳೂ, ಅನೇಕ ಮಂದಿ ಸಿದ್ಧಜನರೂ ಪದ್ಮಪುಷ್ಪದಿಂದ ಜನಿಸಿದ ಬ್ರಹ್ಮದೇವನನ್ನು ಉಪಾಸನೆಮಾಡುತ್ತಾರೆ.

ತತ್ರ ಸ್ನಾತ್ವಾ ವ್ರಜೇಚ್ಛುದ್ಧೋ ಬ್ರಹ್ಮಾಣಂ ಪರಮೇಷ್ಠಿನಮ್ ।
ಪೂಜಯಿತ್ವಾ ದ್ವಿಜವರಂ ಬ್ರಹ್ಮಾಣಂ ಸಂಪ್ರಪಶ್ಯತಿ ॥ ೪೩ ॥

ತತ್ರಾಭಿಗಮ್ಯ ದೇವೇಶಂ ಪುರುಹೂತಮನಿಂದಿತಮ್ ।
ತದ್ರೂಪೋ ಜಾಯತೇ ಮರ್ತ್ಯಃ ಸರ್ವಾನ್ ಕಾಮಾನವಾಪ್ನುಯಾತ್ ॥

ಸಪ್ತಸಾರಸ್ವತಂ ತೀರ್ಥಂ ಬ್ರಹ್ಮಾದ್ಯೈಃ ಸೇವಿತಂ ಪರಮ್ ।
ಪೂಜಯಿತ್ವಾ ತತ್ರ ರುದ್ರಮಶ್ವಮೇಧಫಲಂ ಲಭೇತ್ ॥ ೪೫ ॥

ಯತ್ರ ಮಙ್ಕಣಕೋ ರುದ್ರಂ ಪ್ರಸನ್ನಂ ಪರಮೇಶ್ವರಮ್ ।
ಆರಾಧಯಾಮಾಸ ಶಿವಂ ತಪಸಾ ಗೋವೃಷಧ್ವಜಮ್ ॥ ೪೬ ॥

---

೪೩. ಆ ತೀರ್ಥದಲ್ಲಿ ಸ್ನಾನಮಾಡಿ ಶುದ್ಧನಾಗಿರುವ ಸುಕೃತಿಯು ಪರಮ ಪದವಾಸಿಯಾದ ಬ್ರಹ್ಮದೇವನ ಸಾಮೀಪ್ಯವನ್ನು ಹೊಂದುತ್ತಾನೆ. ಹಾಗು ಅಲ್ಲಿ ದ್ವಿಜೋತ್ತಮನನ್ನು ಪೂಜಿಸಿ ಬ್ರಹ್ಮದೇವನನ್ನು ಸಾಕ್ಷಾತ್ಕರಿಸುತ್ತಾನೆ.

೪೪. ಮತ್ತು ಆ ಕ್ಷೇತ್ರದಲ್ಲಿ ನಿಂದಾಸ್ಪದನಲ್ಲದವನೂ, ದೇವರಾಜನೂ, ಆದ ಇಂದ್ರದೇವತೆಯನ್ನು ಪೂಜಾಸತ್ಕಾರಗಳಿಂದ ಶರಣುಹೊಂದಿದ ಮನುಜನು ಇಂದ್ರದೇವತಾಸಾರೂಪ್ಯವನ್ನು ಹೊಂದಿ ಸಮಸ್ತ ಕಾಮಗಳನ್ನು ಸಿದ್ಧಿಹೊಂದುತ್ತಾನೆ.

೪೫. ಬ್ರಹ್ಮನೇ ಆದಿಯಾದ ಸಕಲ ಸುರರಿಂದ ಸೇವಿಸಲ್ಪಟ್ಟಿರುವ ಸಪ್ತಸಾರ ಸ್ವತವೆಂಬ ತೀರ್ಥವು ಒಂದಿದೆ. ಆ ತೀರ್ಥಸನ್ನಿಧಿಯಲ್ಲಿ ರುದ್ರದೇವನನ್ನು ಪೂಜಿಸಿ ಅಶ್ವಮೇಧಯಾಗದ ಫಲವನ್ನು ಹೊಂದುವನು.

೪೬. ಸಪ್ತಸಾರಸ್ವತ ತೀರ್ಥದಲ್ಲಿ ಮಂಕಣಕನೆಂಬಮುನಿಯು ವೃಷದಿಂದ ಅಂಕಿತವಾದ ಧ್ವಜವುಳ್ಳವನೂ, ಪರಮೇಶ್ವರನೂ, ದಯೆಯಿಂದ ಸನ್ನಿಧಿಗೆ ಬಂದ ವನೂ ಆದ ರುದ್ರದೇವನನ್ನು ತಪಶ್ಚರ್ಯೆಯಿಂದ ಆರಾಧಿಸಿದನು.

ಪ್ರಜಜ್ವಾಲಾಥ ತಪಸಾ ಮುನಿರ್ಮಙ್ಕಣಕಸ್ತದಾ ।
ನನರ್ತ ಹರ್ಷವೇಗೇನ ಜ್ಞಾತ್ವಾ ರುದ್ರಂ ಸಮಾಗತಮ್ ॥ ೪೭ ॥

ತಂ ಪ್ರಾಹ ಭಗವಾನ್ ರುದ್ರಃ ಕಿಮರ್ಥಂ ನರ್ತಿತಂ ತ್ವಯಾ ॥ ೪೮ ॥

ದೃಷ್ಟ್ವಾಽಪಿ ದೇವಮೀಶಾನಂ ನೃತ್ಯತಿ ಸ್ಮ ಪುನಃ ಪುನಃ ।
ಸೋಽನ್ವೀಕ್ಷ್ಯ ಭಗವಾನೀಶಃ ಸಗರ್ವಂ ಗರ್ವಶಾಂತಯೇ ॥ ೪೯ ॥

ಸ್ವಕಂ ದೇಹಂ ವಿದಾರ್ಯಾಸ್ಮೈ ಭಸ್ಮರಾಶಿಮದರ್ಶಯತ್ ।
ಪಶ್ಯೇಮಂ ಮಚ್ಛರೀರೋತ್ಥಂ ಭಸ್ಮರಾಶಿಂ ದ್ವಿಜೋತ್ತಮ ॥ ೫೦ ॥

---

೪೭. ಆ ಸಮಯದಲ್ಲಿ ಮಂಕಣಕಮುನಿಯು ಘೋರವಾದ ತಪಸ್ಸಿನಿಂದ ಜ್ವಲಿಸಿದನು. ಮತ್ತು ರುದ್ರನು ತನ್ನ ಸನ್ನಿಧಿಯಲ್ಲಿ ಬಂದಿರುವುದನ್ನು ತಿಳಿದು ಹರ್ಷ ಮತ್ತು ವೇಗಗಳಿಂದ ಮತ್ತೆ ಮತ್ತೆ ನರ್ತನಮಾಡಿದನು.

೪೮. ಮಹೇಶ್ವರನೂ ಷಡ್ಗುಣೈಶ್ವರ್ಯ ಸಂಪನ್ನನೂ ಆದ ರುದ್ರದೇವನು ಮಂಕಣಕಮುನಿಯನ್ನು ಕುರಿತು ನೀನು ಏಕೆ ನರ್ತನಮಾಡಿದೆ ? ಎಂದು ಪ್ರಶ್ನಿಸಿದನು.

೪೯. ಆದರೆ ಆ ಮುನಿಯು ಸರ್ವೇಶ್ವರನಾದ ಸ್ವಾಮಿಯನ್ನು ನೋಡಿದರೂ ಮತ್ತೆ ಮತ್ತೆ ನರ್ತನಮಾಡುತ್ತಲೆ ಇದ್ದನು. ಪೂಜ್ಯನಾದ ಆ ಮಹೇಶ್ವರನು ಗರ್ವದಿಂದ ಕೂಡಿದ ಮುನಿಯನ್ನು ನೋಡಿ ಅವನ ಗರ್ವಶಾಂತಿಯನ್ನು ಮಾಡಲು ಚಿಂತಿಸಿದನು.

೫೦. ಆಗ ತನ್ನ ದೇಹವನ್ನು ಸೀಳಿಕೊಂಡು ಅದರಿಂದ ಮುನಿಗೆ ಭಸ್ಮದ ರಾಶಿಯನ್ನು ತೋರಿಸಿದನು ಮತ್ತು ಹೀಗೆಂದು ಹೇಳಿದನು ದ್ವಿಜೋತ್ತಮನೆ ! ನನ್ನ ದೇಹದಿಂದ ಬಂದಿರುವ ಈ ಭಸ್ಮರಾಶಿಯನ್ನು ನೋಡು.

ಮಾಹಾತ್ಮ್ಯಮೇತತ್ತಪಸಸ್ತ್ವಾದೃಶೋಽನ್ಯೋಽಪಿ ವಿದ್ಯತೇ ।
ಯತ್ಸಗರ್ವಂ ಹಿ ಭವತಾ ನರ್ತಿತಂ ಮುನಿಪುಂಗವ ॥ ೫೧ ॥

ನ ಯುಕ್ತಂ ತಾಪಸಸ್ಯೈತತ್ ತ್ವತ್ತೋ ಹ್ಯಭ್ಯಧಿಕೋ ಹ್ಯಹಮ್ ।
ಇತ್ಯಾಭಾಷ್ಯ ಮುನಿಶ್ರೇಷ್ಠಂ ಸ ರುದ್ರೋಽಖಿಲವಿಶ್ವದೃಕ್ ॥ ೫೨ ॥

ಆಖ್ಯಾಯ ಪರಮಂ ಭಾವಂ ನನರ್ತ ಜಗತೋ ಹರಃ ॥ ೫೩ ॥

ಸಹಸ್ರಶೀರ್ಷಾ ಭೂತ್ವಾ ಸ ಸಹಸ್ರಾಕ್ಷಃ ಸಹಸ್ರಪಾತ್ ।
ದಂಷ್ಟ್ರಾಕರಾಲವದನೋ ಜ್ವಾಲಾಮಾಲೀ ಭಯಂಕರಃ ॥ ೫೪ ॥

---

೫೧. ಇದು ನನ್ನ ತಪಶ್ಚರ್ಯೆಯ ಮಹಿಮೆಯು. ಆದುದರಿಂದ ನಿನ್ನಂತಹ ತಪಸ್ವಿಯು ಮತ್ತೊಬ್ಬನು ಇರುವನು. ಮುನಿಪುಂಗವನೆ ! ನಾನು ಅದ್ವಿತೀಯನಾಗಿರುವೆನೆಂದು ತಿಳಿದು ನಿನ್ನಿಂದ ಗರ್ವದಿಂದ ನರ್ತಿಸಲ್ಪಟ್ಟಿತು.

೫೨. ತಪಸ್ವಿಯಾದ ನಿನಗೆ ಇದು ಸರಿಯಲ್ಲ. ನಾನು ನಿನಗಿಂತಲೂ ಮಹಿಮೆಯಲ್ಲಿ ಅಧಿಕನಾಗಿರುವೆನು. ಹೀಗೆಂದು ವಿಶ್ವವನ್ನು ಅರಿತಿರುವ ಆ ರುದ್ರಮೂರ್ತಿಯು ಮುನಿಶ್ರೇಷ್ಠನಿಗೆ ಹೇಳಿದನು.

೫೩. ಮತ್ತು ಮಹೇಶ್ವರನು ಜಗತ್ತಿನಲ್ಲಿ ಅಂತರ್ಗತವಾದ ಪಾರಮಾರ್ಥಿಕ ತತ್ತ್ವವನ್ನು ಹೇಳಿ ತಾನು ನರ್ತನಮಾಡಿದನು.

೫೪. ಆಗ ಮಹೇಶ್ವರನು ಸಹಸ್ರ ಸಂಖ್ಯೆಯ ಶಿರಗಳಿಂದಲೂ ಸಹಸ್ರ ಸಂಖ್ಯೆಯ ನೇತ್ರಗಳಿಂದಲೂ ಮತ್ತು ಸಹಸ್ರಸಂಖ್ಯೆಯ ಪಾದಗಳಿಂದಲೂ ಕೂಡಿದವನೂ ಕೋರೆಹಲ್ಲುಗಳಿಂದ ಭಯಂಕರವಾದ ಮುಖವುಳ್ಳವನೂ, ಮಾಲಾಕಾರವಾದ ಜ್ವಾಲೆಯುಳ್ಳವನೂ ಮತ್ತು ಭಯಂಕರನೂ ಆಗಿ ನರ್ತಿಸಿದನು.

ಸೋಽಪಶ್ಯದಥೇಶಸ್ಯ ಪಾರ್ಶ್ವೇ ತಸ್ಯ ತ್ರಿಶೂಲಿನಃ ।
ವಿಶಾಲಲೋಚನಾಮೇಕಾಂ ದೇವೀಂ ಚಾರುವಿಲಾಸಿನೀಮ್ ॥ ೫೫ ॥

ಸೂರ್ಯಾಯುತಸಮಾಕಾರಾಂ ಪ್ರಸನ್ನವದನಾಂ ಶಿವಾಮ್ ॥ ೫೬ ॥

ಸಸ್ಮಿತಂ ಪ್ರೇಕ್ಷ್ಯ ವಿಶ್ವೇಶಂ ತಿಷ್ಠಂತಮಮಿತದ್ಯುತಿಮ್ ।
ದೃಷ್ಟ್ವಾ ಸಂತ್ರಸ್ತಹೃದಯೋ ವೇಪಮಾನೋ ಮುನೀಶ್ವರಃ ॥ ೫೭ ॥

ನನಾಮ ಶಿರಸಾ ರುದ್ರಂ ರುದ್ರಾಧ್ಯಾಯಂ ಜಪನ್ ವಶೀ ।
ಪ್ರಸನ್ನೋ ಭಗವಾನೀಶಸ್ತ್ರ್ಯಂಬಕೋ ಭಕ್ತವತ್ಸಲಃ ॥ ೫೮ ॥

---

೫೫. ತರುವಾಯ ಆ ಮುನಿಯು ತ್ರಿಶೂಲಧರನಾದ ಈಶ್ವರನ ಒಂದು ಪಾರ್ಶ್ವದಲ್ಲಿ ವಿಶಾಲವಾದ ನೇತ್ರಗಳಿಂದಲೂ, ಸುಂದರವಾದ ವಿಲಾಸಗಳಿಂದಲೂ ಕೂಡಿದ ಒಬ್ಬಳು ದೇವಿಯನ್ನು ನೋಡಿದನು.

೫೬. ಮತ್ತು ಆ ದೇವಿಯು ಅಯುತ ಸೂರ್ಯಬಿಂಬಗಳಂತೆ ಹೊಳೆಯುವ ಆಕಾರವುಳ್ಳವಳೂ, ಪ್ರಸನ್ನವಾದ ಮುಖಕಮಲವುಳ್ಳವಳೂ ಮತ್ತು ಮಂಗಳ ಮೂರ್ತಿಯೂ ಆಗಿದ್ದಳು.

೫೭. ಮುನಿಯು ನಗುಮುಖದಿಂದ ಕೂಡಿರುವವನೂ, ವಿಶ್ವಕ್ಕೆ ನಿಯಾಮಕನೂ, ಮತ್ತು ಅನಂತವಾದ ತೇಜಃ ಪುಂಜವುಳ್ಳವನೂ ಆಗಿ ನಿಂತಿದ್ದ ಸ್ವಾಮಿಯನ್ನು ಕಂಡನು. ಮುನೀಶ್ವರನು ಹಾಗೆ ನಿಂತಿರುವ ಸ್ವಾಮಿಯನ್ನು ಕಂಡು ಬೆದರಿದ ಹೃದಯವುಳ್ಳವನೂ ನಡುಗುತ್ತಿರುವವನೂ ಆದನು.

೫೮. ಆಗ ಜಿತೇಂದ್ರಿಯನಾದ ಮುನಿಯು ರುದ್ರಾಧ್ಯಾಯವನ್ನು ಜಪಿಸುತ್ತ ತಲೆಬಾಗಿಸಿ ರುದ್ರನನ್ನು ನಮಸ್ಕರಿಸಿದನು. ಪರಮಪೂಜ್ಯನೂ ಮೂರುಲೋಚನಗಳಿಂದ ಶೋಭಿತನೂ ಆದ ಈಶ್ವರನು ಭಕ್ತನಲ್ಲಿ ವಾತ್ಸಲ್ಯವುಳ್ಳವನಾಗಿ ಪ್ರಸನ್ನನಾದನು.

ಪೂರ್ವವೇಷಂ ಸ ಜಗ್ರಾಹ ದೇವೀ ಚಾಂತರ್ಹಿತಾಭವತ್ ।
ಆಲಿಂಗ್ಯ ಭಕ್ತಂ ಪ್ರಣತಂ ದೇವದೇವಃ ಸ್ವಯಂ ಶಿವಃ ॥ ೫೯ ॥

ನ ಭೇತವ್ಯಂ ತ್ವಯಾ ವತ್ಸ ಪ್ರಾಹ ಕಿಂ ತೇ ದದಾಮ್ಯಹಮ್ ॥ ೬೦ ॥

ಪ್ರಣಮ್ಯ ಮೂರ್ಧ್ನಾ ಗಿರಿಶಂ ಹರಂ ತ್ರಿಪುರಸೂದನಮ್ ।
ವಿಜ್ಞಾಪಯಾಮಾಸ ತದಾ ಹೃಷ್ಟಃ ಪ್ರಷ್ಟುಮನಾ ಮುನಿಃ ॥ ೬೧ ॥

ನಮೋಽಸ್ತು ತೇ ಮಹಾದೇವ ಮಹೇಶ್ವರ ನಮೋಽಸ್ತು ತೇ ।
ಕಿಮೇತದ್ಭಗವದ್ರೂಪಂ ಸುಘೋರಂ ವಿಶ್ವತೋಮುಖಮ್ ॥ ೬೨ ॥

---

೫೯. ಆಗ ರುದ್ರಮೂರ್ತಿಯು ವಿಶ್ವಾಕಾರವನ್ನು ಬಿಟ್ಟು ಮೊದಲಿನ ರೂಪ ವನ್ನು ಪರಿಗ್ರಹಿಸಿದನು. ದೇವಿಯು ಅದೃಶ್ಯಳಾದಳು. ದೇವೋತ್ತಮನಾದ ಪರ ಮೇಶ್ವರನು ತಾನಾಗಿ ಬಂದು ನಮಸ್ಕಾರಮಾಡಿದ ಭಕ್ತನನ್ನು ಆಲಿಂಗಿಸಿಕೊಂಡನು.

೬೦. ಮತ್ತು ಪರಮೇಶ್ವರನು ಮುನಿಯನ್ನು ಕುರಿತು "ವತ್ಸನೆ! ನೀನು ಭಯಪಡಲಾಗದು. ನಿನಗೆ ನಾನು ಯಾವ ವರವನ್ನು ಕೊಡಲಿ" ಹೀಗೆಂದು ಕೇಳಿದನು.

೬೧. ಆಗ ಹರ್ಷಗೊಂಡಿರುವ ಮಂಕಣಕಮುನಿಯು ಪ್ರಶ್ನೆಮಾಡಲು ಇಷ್ಟ ವುಳ್ಳ ಮಾನಸವುಳ್ಳವನಾಗಿ ತ್ರಿಪುರಸಂಹಾರಿಯೂ, ಕೈಲಾಸಾದ್ರಿವಾಸಿಯೂ ಆದ ಶಿವನನ್ನು ತಲೆಬಾಗಿಸಿ ನಮಸ್ಕಾರಮಾಡಿ ವಿಜ್ಞಾಪಿಸಿಕೊಂಡನು.

೬೨. ಮಹಾದೇವನೆ! ನಿನಗೆ ನಮಸ್ಕಾರವು. ಮಹೇಶ್ವರನೆ! ನಿನಗೆ ನಮಸ್ಕಾರವು. ವಿಶ್ವಾಕಾರವಾದ ಮುಖವುಳ್ಳದ್ದೂ ಘೋರವೂ ಆದ ಭಗವಂತನಾದ ನಿನ್ನ ಅದ್ಭುತ ರೂಪವಾವುದು ?

ಕಾ ಚ ಸಾ ಭಗವತ್ಪಾರ್ಶ್ವೇ ರಾಜಮಾನಾ ವ್ಯವಸ್ಥಿತಾ ।
ಅಂತರ್ಹಿತಾ ಚ ಸಹಸಾ ಸರ್ವಮಿಚ್ಛಾಮಿ ವೇದಿತುಮ್ ॥ ೬೩ ॥

ಇತ್ಯುಕ್ತೇ ವ್ಯಾಜಹಾರೇಶಸ್ತದಾ ಮಂಕಣಕಂ ಹರಃ ।
ಮಹೇಶಃ ಸ್ವಾತ್ಮನೋ ಯೋಗಂ ದೇವೀಂ ಚ ತ್ರಿಪುರಾನಲಃ ॥ ೬೪ ॥

ಅಹಂ ಸಹಸ್ರನಯನಃ ಸರ್ವಾತ್ಮಾ ಸರ್ವತೋಮುಖಃ ।
ದಾಹಕಃ ಸರ್ವಪಾಶಾನಾಂ ಕಾಲಃ ಕಾಲಹರೋ ಹರಃ ॥ ೬೫ ॥

ಮಯ್ಯೈವ ಪ್ರೇರ್ಯತೇ ಕೃತ್ಸ್ನಂ ಚೇತನಾಚೇತನಾತ್ಮಕಮ್ ।
ಸೋಽಂತರ್ಯಾಮೀ ಸ ಪುರುಷೋ ಹ್ಯಹಂ ವೈ ಪುರುಷೋತ್ತಮಃ ॥

---

೬೩. ಭಗವಂತನಾದ ನಿನ್ನ ಪಾರ್ಶ್ವದಲ್ಲಿ ಪ್ರಕಾಶಿಸುತ್ತಲಿದ್ದ ದೇವಿಯು ಯಾರು ? ಅವಳು ಪರಮವೇಗದಲ್ಲಿ ಈಗ ಎಲ್ಲಿ ಅದೃಶ್ಯಳಾದಳು ? ಇದೆಲ್ಲವನ್ನೂ ತಿಳಿಯಬೇಕೆಂದು ಆಕಾಂಕ್ಷಿಸುತ್ತೇನೆ.

೬೪. ಮಂಕಣಕಮುನಿಯು ಹೀಗೆಂದು ಕೇಳಲು ಆಗ ಸರ್ವೇಶ್ವರನೂ, ತ್ರಿಪುರದಾಹಕನೂ, ಮತ್ತು ಸರ್ವಪ್ರಭುವೂ ಆದ ಹರನು ಸ್ವಾತ್ಮಯೋಗ ಮತ್ತು ತನ್ನ ಪಾರ್ಶ್ವದಲ್ಲಿದ್ದ ದೇವಿಯ ಸ್ವರೂಪವನ್ನು ಹೇಳಿದನು.

೬೫. ನಾನು ಸಹಸ್ರಾರು ನೇತ್ರಗಳುಳ್ಳವನೂ ಸರ್ವರಿಗೂ ಆತ್ಮರೂಪನೂ, ಸರ್ವದಿಕ್ಕುಗಳಲ್ಲಿ ಮುಖವುಳ್ಳವನೂ, ಸರ್ವಸಂಸಾರ ಪಾಶಗಳನ್ನು ದಹಿಸುವವನೂ, ಕಾಲಮೂರ್ತಿಯೂ ಮತ್ತು ಅಂತಕನನ್ನು ನಿಗ್ರಹಿಸಿದವನೂ ಆದ ಮಹೇಶ್ವರ ನಾಗಿದ್ದೇನೆ.

೬೬. ಚೇತನ ಅಚೇತನರೂಪವಾದ ಸಮಸ್ತ ಪ್ರಪಂಚವು ನನ್ನಿಂದ ಪ್ರೇರೇಪಿಸಲ್ಪಡುತ್ತದೆ. ಹಾಗೆ ಪ್ರಪಂಚದಲ್ಲಿ ಅಂತರ್ಯಾಮಿಯಾಗಿರುವವನು ನಾನೆ; ಸರ್ವವ್ಯಾಪಕನು ನಾನೆ; ಮತ್ತು ಪುರುಷೋತ್ತಮನೂ ನಾನೇ ಆಗಿರುವೆನು.

ತಸ್ಯ ಸಾ ಪರಮಾ ಮಾಯಾ ಪ್ರಕೃತಿಸ್ತ್ರಿಗುಣಾತ್ಮಿಕಾ ।
ಪ್ರೋಚ್ಯತೇ ಮುನಿಭಿಃ ಶಕ್ತಿರ್ಜಗದ್ಯೋನಿಃ ಸನಾತನೀ ॥ ೬೭ ॥

ಸ ಏಷ ಮಾಯಯಾ ವಿಶ್ವಂ ವ್ಯಾಮೋಹಯತಿ ವಿಶ್ವಕೃತ್ ।
ನಾರಾಯಣಃ ಪರೋಽವ್ಯಕ್ತೋ ಮಾಯಾರೂಪ ಇತಿ ಶ್ರುತಿಃ ॥ ೬೮ ॥

ಏವಮೇತಜ್ಜಗತ್ ಸರ್ವಂ ಸರ್ವದಾ ಸ್ಥಾಪಯಾಮ್ಯಹಮ್ ॥ ೬೯ ॥

ಯೋಜಯಾಮಿ ಪ್ರಕೃತ್ಯಾಹಂ ಪುರುಷಂ ಪಂಚವಿಂಶಕಮ್ ।
ತಥಾ ವೈ ಸಂಗತೋ ದೇವಃ ಕೂಟಸ್ಥಃ ಸರ್ವಗೋಽಮಲಃ ॥ ೭೦ ॥

---

೬೭. ಅಂತಹ ಪುರುಷೋತ್ತಮನ ಅಧೀನದಲ್ಲಿರುವ ಸರ್ವೋತ್ತಮವಾದ ಮಾಯೆಯು ಸತ್ತ್ವ-ರಜ-ತಮೋಗುಣ ರೂಪವಾದ ಪ್ರಕೃತಿಯೆಂದೂ, ಜಗತ್ತಿಗೆ ಕಾರಣವಾದ ಅನಾದಿಯಾದ ಶಕ್ತಿಯೆಂದೂ ಮುನಿಗಳಿಂದ ಕರೆಯಲ್ಪಡುತ್ತದೆ.

೬೮. ವಿಶ್ವವನ್ನು ರಚಿಸುವ ಪುರುಷೋತ್ತಮನು ಮಾಯೆಯಿಂದ ವಿಶ್ವವನ್ನು ವ್ಯಾಮೋಹಗೊಳಿಸುವನು. ಆದ್ದರಿಂದ ಮೋಹಪಡಿಸುವ, ಸರ್ವೋತ್ತಮನೂ ಮತ್ತು ಅತೀಂದ್ರಿಯನೂ ಆದ ನಾರಾಯಣನು ಮಾಯಾಸ್ವರೂಪನೆಂದು ಶ್ರುತಿಯು ಹೇಳುವುದು.

೬೯. ಈ ರೀತಿಯಾಗಿ ನಾನು ಸರ್ವಕಾಲಗಳಲ್ಲಿಯೂ ಸ್ಥಾವರ-ಜಂಗಮ, ಚೇತನ-ಅಚೇತನ ರೂಪವಾದ ಸಮಸ್ತ ಜಗತ್ತನ್ನು ಸ್ಥಾಪಿಸುತ್ತೇನೆ.

೭೦. ನಾರಾಯಣ ರೂಪನಾದ ನಾನು ಪಂಚವಿಂಶ ತತ್ತ್ವರೂಪನಾದ ಪುರುಷನನ್ನು ಪ್ರಕೃತಿಯೊಡನೆ ಸಂಯೋಜಿಸುತ್ತೇನೆ. ಕೂಟಸ್ಥನೂ, ಸರ್ವವ್ಯಾಪಿಯೂ ಮತ್ತು ನಿರ್ಮಲನೂ ಆದ ಪುರುಷನು ಪ್ರಕೃತಿ ಸಂಗಿಯಾಗುತ್ತಾನೆ.

ಸೃಜತ್ಯಶೇಷಮೇವೇದಂ ಸ್ವಮೂರ್ತೇಃ ಪ್ರಕೃತೇರಜಃ ।
ಸ ದೇವೋ ಭಗವಾನ್ ಬ್ರಹ್ಮಾ ವಿಶ್ವರೂಪಃ ಪಿತಾಮಹಃ ॥ ೭೧ ॥

ತವೈತತ್ ಕಥಿತಂ ಸಮ್ಯಕ್ ಸ್ರಷ್ಟೃತ್ವಂ ಪರಮಾತ್ಮನಃ ।
ಏಕೋಽಹಂ ಭಗವಾನ್ ಕಾಲೋ ಹ್ಯನಾದಿಶ್ಚಾಂತಕೃದ್ವಿಭುಃ ॥ ೭೨ ॥

ಸಮಾಸ್ಥಾಯ ಪರಂ ಭಾವಂ ಪ್ರೋಕ್ತೋ ರುದ್ರೋ ಮನೀಷಿಭಿಃ ।
ಮಮೈವ ಸಾ ಪರಾ ಶಕ್ತಿರ್ದೇವೀ ವಿದ್ಯೇತಿ ವಿಶ್ರುತಾ ॥ ೭೩ ॥

ದೃಷ್ಟೋ ಹಿ ಭವತಾ ನೂನಂ ವಿದ್ಯಾದೇಹಃ ಸ್ವಯಂ ತತಃ ।
ಏವಮೇತಾನಿ ತತ್ತ್ವಾನಿ ಪ್ರಧಾನಪುರುಷೇಶ್ವರಃ ॥ ೭೪ ॥

---

೭೧. ಮತ್ತು ಅನಾದಿಯಾದ ಸ್ವಾಮಿಯು ತನ್ನ ಮೂರ್ತಿರೂಪವಾದ ಪ್ರಕೃತಿಯಿಂದ ಈ ಸಂಪೂರ್ಣ ವಿಶ್ವವನ್ನು ಸೃಜಿಸುತ್ತಾನೆ. ಪೂಜ್ಯನೂ, ವಿಶ್ವ ರೂಪಿಯೂ ಆದ ಆ ಸೃಷ್ಟಿಕರ್ತನಾದ ದೇವನು ಬ್ರಹ್ಮದೇವನೆಂದೂ, ಲೋಕಪಿತಾ ಮಹನೆಂದೂ ಹೇಳಲ್ಪಡುವನು.

೭೨. ಮುನಿಯೆ ! ಪರಮಾತ್ಮನಿಗೆ ಸೃಷ್ಟಿಕರ್ತೃತ್ವವು ಸಂಭವಿಸುವ ರೀತಿಯು ನಿನಗೆ ನನ್ನಿಂದ ಪೂರ್ತಿಯಾಗಿ ಹೇಳಲ್ಪಟ್ಟಿತು. ನಾನು ಅದ್ವಿತೀಯನೂ, ಪೂಜ್ಯನೂ, ಕಾಲರೂಪಿಯೂ, ಅನಾದಿಯೂ, ಸರ್ವಾಂತಕನೂ ಮತ್ತು ಸರ್ವವ್ಯಾಪಕನೂ ಆಗಿರುವೆನು.

೭೩ ಪಾರಮಾರ್ಥಿಕವಾದ ಭಾವರೂಪವನ್ನು ಹೊಂದಿರುವ ನಾನು ಜ್ಞಾನಿಗಳಿಂದ ರುದ್ರನೆಂದು ಹೇಳಲ್ಪಡುವೆನು. ನನಗೆ ಅಧೀನವಾಗಿರುವ ಪರಮಶಕ್ತಿ ರೂಪಳಾದ ದೇವಿಯು " ವಿದ್ಯಾ " ಎಂದು ಪ್ರಸಿದ್ಧವಾಗಿದೆ,

೭೪. ನಿನ್ನಿಂದ ನಿಜವಾಗಿ ವಿದ್ಯಾರೂಪಳಾದ ದೇವಿಯ ಸ್ವರೂಪವು ನೋಡಲ್ಪಟ್ಟಿತು ಹೀಗೆ ಪ್ರಧಾನ ಪುರುಷ ಈಶ್ವರ ಎಂಬ ನಾನಾವಿಧಗಳಾದ ತತ್ತ್ವಗಳು ತತ್ತ್ವಜ್ಞರಿಂದ ಹೇಳಲ್ಪಡುತ್ತವೆ.

ವಿಷ್ಣುರ್ಬ್ರಹ್ಮಾ ಚ ಭಗವಾನ್ ರುದ್ರಃ ಕಾಲ ಇತಿ ಶ್ರುತಿಃ ।
ತ್ರಯಮೇತದನಾದ್ಯಂತಂ ಬ್ರಹ್ಮಣ್ಯೇವ ವ್ಯವಸ್ಥಿತಮ್ ॥ ೭೫ ॥

ತದಾತ್ಮಕಂ ತದವ್ಯಕ್ತಂ ತದಕ್ಷರಮಿತಿ ಶ್ರುತಿಃ ।
ಆತ್ಮಾನಂದಪರಂ ತತ್ತ್ವಂ ಚಿನ್ಮಾತ್ರಂ ಪರಮಂ ಪದಮ್ ॥ ೭೬ ॥

ಆಕಾಶಂ ನಿಷ್ಕಲಂ ಬ್ರಹ್ಮ ತಸ್ಮಾದನ್ಯನ್ನ ವಿದ್ಯತೇ ॥ ೭೭ ॥

ಏವಂ ವಿಜ್ಞಾಯ ಭವತಾ ಭಕ್ತಿಯೋಗಾಶ್ರಯೇಣ ತು ।
ಸಂಪೂಜ್ಯೋ ವಂದನೀಯೋಽಹಂ ತತಸ್ತಂ ಪಶ್ಯ ಸೀಶ್ವರಮ್ ॥ ೭೮ ॥

---

೭೫. ಪೂಜ್ಯನಾದ ವಿಷ್ಣು ಮತ್ತು ಬ್ರಹ್ಮದೇವನೂ ಕಾಲರೂಪಿಯಾದ ರುದ್ರನೂ ಸೇರಿ ತ್ರಿಮೂರ್ತಿಗಳು ಶ್ರುತಿಯಲ್ಲಿ ಪ್ರತಿಪಾದಿಸಲ್ಪಟ್ಟಿವೆ. ಈ ತ್ರಿಮೂರ್ತಿ ತತ್ತ್ವವು ಆದಿ-ಅಂತಗಳಿಂದ ವರ್ಜಿತವಾಗಿ ಪರಬ್ರಹ್ಮವಸ್ತುವಿನಲ್ಲಿ ಸೇರಿಕೊಂಡಿರುವುದು.

೭೬. ಆ ಪರಬ್ರಹ್ಮವಸ್ತುವು ಸರ್ವವಸ್ತುಗಳಿಗೆ ಆತ್ಮರೂಪವೂ, ಅವ್ಯಕ್ತವೂ ನಾಶಾತೀತವೂ ಆತ್ಮಾನಂದಸ್ವರೂಪವೂ ಪರಮಪದರೂಪವೂ ಮತ್ತು ಚೈತನ್ಯ ತತ್ತ್ವರೂಪವೂ ಆಗಿದೆಯೆಂದು ಶ್ರುತಿಯು ಪ್ರಶಂಸೆಮಾಡುತ್ತಿದೆ.

೭೭. ಮತ್ತು ಪ್ರಕಾಶಮಯವಾದ್ದರಿಂದ ಆಕಾಶಶಬ್ದವಾಚ್ಯವೂ ನಿರವಯವವೂ ಆದ ಬ್ರಹ್ಮತತ್ತ್ವಕ್ಕಿಂತಲೂ ಬೇರೆಯಾದ ಪರಮಾರ್ಥವಸ್ತುವು ಬೇರೆ ಯಾವುದೂ ಇಲ್ಲ.

೭೮. ಭಕ್ತಿಯೋಗವನ್ನು ತತ್ಪರತೆಯಿಂದ ಅವಲಂಬಿಸಿದ ನಿನ್ನಿಂದ ನನ್ನ ಪರಮಾರ್ಥರೂಪವನ್ನು ತಿಳಿದು ಪೂಜೆ ಮತ್ತು ವಂದನಾದಿಗಳಿಂದ ನಾನು ಆರಾಧಿಸಲ್ಪಡಬೇಕು. ಅದರಿಂದ ನೀನು ಈಶ್ವರನನ್ನು ಸಾಕ್ಷಾತ್ಕರಿಸುತ್ತೀಯೆ.

ಏತಾವದುಕ್ತ್ವಾ ಭಗವಾನ್ ಜಗಾಮಾದರ್ಶನಂ ಹರಃ ।
ತತ್ರೈವ ಭಕ್ತಿಯೋಗೇನ ರುದ್ರಮಾರಾಧಯನ್ಮುನಿಃ ॥ ೭೯ ॥

ಏತತ್ಪವಿತ್ರಮತುಲಂ ತೀರ್ಥಂ ಬ್ರಹ್ಮರ್ಷಿಸೇವಿತಮ್ ।
ಸಂಸೇವ್ಯ ಬ್ರಾಹ್ಮಣೋ ವಿದ್ವಾನ್ ಮುಚ್ಯತೇ ಸರ್ವಪಾತಕೈಃ ॥ ೮೦ ॥

ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇ
ಅಷ್ಟಾಶೀತಿತಮೋಽಧ್ಯಾಯಃ.

---

೭೯. ಭಗವಂತನಾದ ಪರಮೇಶ್ವರನು ಇದನ್ನು ಮುನಿಗೆ ಉಪದೇಶಿಸಿ ಅಲ್ಲಿಯೆ ಅಂತರ್ಧಾನಹೊಂದಿದನು. ಮುನಿಯು ಆ ತೀರ್ಥದಲ್ಲಿಯೆ ಭಕ್ತಿಯೋಗದಿಂದ ಪೂಜಾವಂದನಾದಿಗಳಿಂದ ರುದ್ರನನ್ನು ಆರಾಧಿಸಿದನು.

೮೦. ಬ್ರಹ್ಮರ್ಷಿಗಳಿಂದ ಸೇವಿಸಲ್ಪಟ್ಟಿರುವ ಈ ತೀರ್ಥವು ನಿರುಪಮವೂ ಪವಿತ್ರವೂ ಆಗಿದೆ. ಜ್ಞಾನಿಯಾದ ಬ್ರಾಹ್ಮಣನು ಈ ತೀರ್ಥವನ್ನು ಸೇವಿಸಿ ಸಮಸ್ತ ಪಾಪಸಂಸರ್ಗದಿಂದ ಬಿಡುಗಡೆಯನ್ನು ಹೊಂದುತ್ತಾನೆ.

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ಎಂಭತ್ತೆಂಟನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

# ಕೂರ್ಮಪುರಾಣಂ

---

## ಏಕೋನನವತಿತಮೋಽಧ್ಯಾಯಃ.

**ಸೂತ ಉವಾಚ :—**

**ಅನ್ಯತ್ ಪವಿತ್ರಂ ವಿಪುಲಂ ತೀರ್ಥಂ ತ್ರೈಲೋಕ್ಯವಿಶ್ರುತಮ್ ।**
**ರುದ್ರಕೋಟಿರಿತಿ ಖ್ಯಾತಂ ರುದ್ರಸ್ಯ ಪರಮೇಷ್ಠಿನಃ ॥ ೧ ॥**

**ಪುರಾ ಪುಣ್ಯತಮೇ ಕಾಲೇ ದೇವದರ್ಶನತತ್ಪರಾಃ ।**
**ಕೋಟಿಬ್ರಹ್ಮರ್ಷಯೋ ದಾಂತಾಸ್ತಂ ದೇಶಮಗಮನ್ ಪರಮ್ ॥ ೨ ॥**

---

## ಎಂಭತ್ತೊಂಭತ್ತನೆಯ ಅಧ್ಯಾಯವು

೧. ಸೂತಮುನಿಯು ಇಂತೆಂದನು:— ಇವುಗಳಲ್ಲದೆ ಮತ್ತೊಂದು ಮೂರು ಲೋಕಗಳಲ್ಲಿ ಪ್ರಖ್ಯಾತವೂ, ವಿಸ್ತಾರವೂ, ಪರಮಪದದಲ್ಲಿರುವ ರುದ್ರದೇವನ ಸನ್ನಿಧಿಯುಳ್ಳದ್ದೂ ಮತ್ತು ರುದ್ರಕೋಟಿಯೆಂಬ ಹೆಸರಿನಿಂದ ಕರೆಯಲ್ಪಡುವುದೂ ಆದ ಉತ್ತಮತೀರ್ಥವು ಇರುವುದು.

೨. ಪುಣ್ಯಪ್ರಚುರವಾದ ಪೂರ್ವಕಾಲದಲ್ಲಿ ಜಿತೇಂದ್ರಿಯರಾದ ಕೋಟಿ ಸಂಖ್ಯೆಯ ಬ್ರಹ್ಮರ್ಷಿಗಳು ದೇವತಾದರ್ಶನದಲ್ಲಿ ಆಸಕ್ತಿಯುಳ್ಳವರಾಗಿ ಆ ತೀರ್ಥೋತ್ತಮಕ್ಕೆ ಬಂದರು.

ಅಹಂ ದ್ರಕ್ಷ್ಯಾಮಿ ಗಿರಿಶಂ ಪೂರ್ವಮೇವ ಪಿನಾಕಿನಮ್ ।
ಅನ್ಯೋಽನ್ಯಂ ಭಕ್ತಿಯುಕ್ತಾನಾಂ ವಿವಾದೋಽಭೂನ್ಮಹಾನ್ ಕಿಲ ॥ ೩ ॥

ತೇಷಾಂ ಭಕ್ತಿಂ ತದಾ ದೃಷ್ಟ್ವಾ ಗಿರಿಶೋ ಯೋಗಿನಾಂ ಗುರುಃ ।
ಕೋಟಿರೂಪೋಽಭವದ್ರುದ್ರೋ ರುದ್ರಕೋಟಿಸ್ತತೋಽಭವತ್ ॥ ೪ ॥

ತೇ ಸ್ಮ ಸರ್ವೇ ಮಹಾದೇವಂ ಹರಂ ಗಿರಿಗುಹಾಶಯಮ್ ।
ಅಪಶ್ಯನ್ ಪಾರ್ವತೀನಾಥಂ ಹೃಷ್ಟಪುಷ್ಟಧಿಯೋಽಭವನ್ ॥ ೫ ॥

ಅನಾದ್ಯಂತಂ ಮಹಾದೇವಂ ಪೂರ್ವಮೇವಾಹಮೀಶ್ವರಮ್ ।
ದೃಷ್ಟವಾನಿತಿ ಭಕ್ತ್ಯಾ ತೇ ರುದ್ರನ್ಯಸ್ತಧಿಯೋಽಭವನ್ ॥ ೬ ॥

---

೩. ಹೀಗೆ ಬಂದಿರುವ ಮುನಿಗಳಲ್ಲಿ ಪಿನಾಕಧಾರಿಯಾದ ಮತ್ತು ಕೈಲಾಸಾದ್ರಿ ವಿಹಾರಿಯಾದ ರುದ್ರನನ್ನು ನಾನು ಮೊದಲು ನೋಡುವೆನೆಂದು ಪರಮಭಕ್ತಿಯಿಂದ ಕೂಡಿರುವ ಪ್ರತಿಯೊಬ್ಬರಲ್ಲಿಯೂ ದೊಡ್ಡ ವಾದವು ಉಂಟಾಯಿತು.

೪. ಆಗ ಯೋಗಿಗಳಿಗೆ ಗುರುವಾದವನೂ, ಕೈಲಾಸಾಧಿನಾಥನೂ ಆದ ಪರಮೇಶ್ವರನು ಆ ಮುನಿಜನರ ಪರಮಭಕ್ತಿಯನ್ನು ನೋಡಿ ತಾನು ಕೋಟಿಸಂಖ್ಯೆಯ ರೂಪವನ್ನು ತೆಗೆದುಕೊಂಡನು. ತರುವಾಯ ಆ ದೇಶವು ರುದ್ರಕೋಟಿಯೆಂದು ಪ್ರಸಿದ್ಧಿಹೊಂದಿತು.

೫ ಅಲ್ಲಿದ್ದ ಎಲ್ಲ ಮುನಿಗಳು ಗಿರಿಗುಹೆಯಲ್ಲಿ ವಾಸಮಾಡುವವನೂ ಸರ್ವ ಪಾಪಭಂಜಕನೂ ಮತ್ತು ಪಾರ್ವತೀರಮಣನೂ ಆದ ರುದ್ರಮೂರ್ತಿಯನ್ನು ನೋಡಿ ಆನಂದದಿಂದ ಹಿಗ್ಗಿದ ಮಾನಸವುಳ್ಳವರಾದರು.

೬. ಮತ್ತು ಅವರಲ್ಲಿ ಆದಿ-ಅಂತಗಳಿಂದ ರಹಿತನೂ ಸರ್ವೇಶ್ವರನೂ ಆದ ಮಹಾದೇವಸ್ವಾಮಿಯನ್ನು ಮೊದಲು ನಾನೇ ನೋಡಿರುವೆನೆಂದು ಪ್ರತಿಯೊಬ್ಬನೂ ತಿಳಿದು ಭಕ್ತಿಯಿಂದ ರುದ್ರದೇವನಲ್ಲಿ ಅರ್ಪಿಸಿದ ಮಾನಸವುಳ್ಳವರಾದರು.

ಅಥಾಂತರಿಕ್ಷೇ ವಿಮಲಂ ಪಶ್ಯಂತಿ ಸ್ಮ ಮಹತ್ತರಮ್ ।
ಜ್ಯೋತಿಸ್ತತ್ರೈವ ತೇ ಸರ್ವೇಽಭಿಲಷಂತಃ ಪರಂ ಪದಮ್ ॥ ೭ ॥

ಯತಃ ಸ ದೇವೋಽಧ್ಯುಷಿತಸ್ತೀರ್ಥಂ ಪುಣ್ಯತಮಂ ಶುಭಮ್ ।
ದೃಷ್ಟ್ವಾ ರುದ್ರಾನ್ ಸಮಭ್ಯರ್ಚ್ಯ ರುದ್ರಸಾಮೀಪ್ಯಮಾಪ್ನುಯುಃ ॥೮॥

ಅನ್ಯಚ್ಚ ತೀರ್ಥಪ್ರವರಂ ನಾಮ್ನಾ ಮಧುವನಂ ಶುಭಮ್ ।
ತತ್ರ ಗತ್ವಾ ನಿಯಮವಾನಿಂದ್ರಸ್ಯಾರ್ಧಾಸನಂ ಲಭೇತ್ ॥ ೯ ॥

ಅಥಾನ್ಯಾ ಪದ್ಮನಗರೀ ದೇಶಃ ಪುಣ್ಯತಮಃ ಶುಭಃ ।
ತತ್ರ ಗತ್ವಾ ಪಿತೄನ್ ಪೂಜ್ಯ ಕುಲಾನಾಂ ತಾರಯೇಚ್ಛತಮ್ ॥ ೧೦ ॥

---

೭. ತರುವಾಯ ಪರಮಪದವನ್ನು ಹೊಂದಲು ಆಕಾಂಕ್ಷಿಸುವ ಅವರೆಲ್ಲರೂ ಆ ತೀರ್ಥಸನ್ನಿಧಿಯಲ್ಲಿ ಆಕಾಶಪ್ರದೇಶಲ್ಲಿ ಮಹತ್ತರವೂ ನಿರ್ಮಲವೂ ಆದ ಒಂದು ಜ್ಯೋತಿಮಂಡಲವನ್ನು ನೋಡಿದರು.

೮. ಆ ರುದ್ರದೇವನು ಅತಿಪವಿತ್ರವೂ ಮಂಗಳಮಯವೂ ಆದ ಆ ತೀರ್ಥದಲ್ಲಿ ಸಾನ್ನಿಧ್ಯವನ್ನು ಇಟ್ಟು ವಾಸಮಾಡಿದ್ದರಿಂದ ಆ ತೀರ್ಥದಲ್ಲಿ ರುದ್ರದೇವತಾ ಸಂದರ್ಶನವನ್ನು ಪಡೆದು ಸ್ವಾಮಿಯನ್ನು ಅರ್ಚಿಸಿದ ನರನು ರುದ್ರನ ಸಾಮೀಪ್ಯವನ್ನು ಹೊಂದುತ್ತಾನೆ.

೯. ಮಂಗಳಮಯವೂ ಮಧುವನವೆಂಬ ಸಂಜ್ಞೆಯಿಂದ ಪ್ರಖ್ಯಾತವೂ ಆದ ಮತ್ತೊಂದು ಉತ್ತಮತೀರ್ಥವಿರುವುದು. ಆ ತೀರ್ಥಕ್ಕೆ ಹೋಗಿ ಯಾತ್ರಾ ನಿಯಮಗಳನ್ನು ಆಚರಿಸಿದವನು ಇಂದ್ರನ ಸಿಹ್ಮಾಸನಾರ್ಧದಲ್ಲಿ ಕುಳಿತುಕೊಳುವನು.

೧೦. ಮತ್ತು ಪವಿತ್ರವೂ ಕಲ್ಯಾಣಪೂರ್ಣವೂ ಆದ ದೇಶದಿಂದ ಕೂಡಿದ ಪದ್ಮನಗರೀ ಎಂಬ ಮತ್ತೊಂದು ಕ್ಷೇತ್ರವಿರುವುದು. ಅಲ್ಲಿಗೆ ಯಾತ್ರಾರ್ಥಿಯಾಗಿ ಹೋಗಿ ಪಿತೃದೇವತೆಗಳನ್ನು ಪೂಜಿಸಿದವನು ಒಂದುನೂರುಮಂದಿ ವಂಶಪುರುಷರನ್ನು ಉದ್ಧರಿಸುವನು.

ಕಾಲಂಜರಂ ಮಹಾತೀರ್ಥಂ ರುದ್ರಲೋಕೇ ಮಹೇಶ್ವರಃ ।
ಕಾಲಂಜರಂ ಭಜನ್ ದೇವಂ ತತ್ರ ಭಕ್ತಪ್ರಿಯೋ ಹರಃ ॥ ೧೧ ॥

ಶ್ವೇತೋ ನಾಮ ಶಿವೇ ಭಕ್ತೋ ರಾಜರ್ಷಿಪ್ರವರಃ ಪುರಾ ।
ತದಾಶೀಸ್ತನ್ನಮಸ್ಕಾರೈಃ ಪೂಜಯಾಮಾಸ ಶೂಲಿನಮ್ ॥ ೧೨ ॥

ಸಂಸ್ಥಾಪ್ಯ ವಿಧಿನಾ ರುದ್ರಂ ಭಕ್ತಿಯೋಗಪುರಃಸರಃ ।
ಜಜಾಪ ರುದ್ರಮನಿಶಂ ತತ್ರ ಸನ್ನ್ಯಸ್ತಮಾನಸಃ ॥ ೧೩ ॥

ಸಿತಂ ಕಾಷ್ಣಾಯಸಂ ದೀಪ್ತಂ ಶೂಲಮಾದಾಯ ಭೀಷಣಮ್ ।
ನೇತುಮಭ್ಯಾಗತೋ ದೇಶಂ ಸ ರಾಜಾ ಯತ್ರ ತಿಷ್ಠತಿ ॥ ೧೪ ॥

---

೧೧. ಮತ್ತೊಂದು ಕಾಲಂಜರವೆಂಬ ನಾಮಾಂಕನದಿಂದ ಕೂಡಿದ ತೀರ್ಥವಿರುವುದು. ಆ ಕಾಲಂಜರ ತೀರ್ಥವನ್ನು ಸೇವಿಸಿ ಮನುಜನು ರುದ್ರಲೋಕದಲ್ಲಿ ಮಹೇಶ್ವರಸಾರೂಪ್ಯವನ್ನು ಹೊಂದುವನು. ಆ ಪವಿತ್ರಸ್ಥಳದಲ್ಲಿ ಹರನು ಭಕ್ತ ಜನರಲ್ಲಿ ಅತ್ಯಂತ ವಿಶ್ವಾಸವನ್ನು ತೋರಿಸುವನು.

೧೨. ಪೂರ್ವಕಾಲದಲ್ಲಿ ಶಿವಭಕ್ತಿಯಿಂದ ಕೂಡಿದ ಶ್ವೇತ ಎಂಬ ಹೆಸರಿನಿಂದ ಪ್ರಸಿದ್ಧನಾದ ಒಬ್ಬ ಶ್ರೇಷ್ಠರಾಜರ್ಷಿಯು ಶಿವನ ಪ್ರಾರ್ಥನೆ, ಶಿವನಿಗೆ ನಮಸ್ಕಾರ ಮಾಡುವುದು, ಮುಂತಾದ ವಿಧಾನಗಳಿಂದ ತ್ರಿಶೂಲಧಾರಿಯಾದ ಶಿವನನ್ನು ಆರಾಧಿಸಿದನು.

೧೩. ಭಕ್ತಿಯೋಗವನ್ನು ಅವಲಂಬಿಸಿ ಯಥಾವಿಧಿಯಾಗಿ ರುದ್ರದೇವನನ್ನು ಪ್ರತಿಷ್ಠೆಮಾಡಿ ಆ ರುದ್ರದೇವನಲ್ಲಿ ಅರ್ಪಿಸಿದ ಇಂದ್ರಿಯ-ಮಾನಸಗಳುಳ್ಳವನಾಗಿ ಯಾವಾಗಲೂ ರುದ್ರಾಧ್ಯಾಯವನ್ನು ಜಪಿಸಿದನು.

೧೪. ಆಗ ಯಮಧರ್ಮರಾಜನು ಕಪ್ಪಾದ, ಕೃಷ್ಣಾಯಸದಿಂದ ಮಾಡಿದ, ಜ್ವಲಿಸುತ್ತಿದ್ದ ಶೂಲವನ್ನು ಧರಿಸಿ ಭೀಷಣನಾಗಿ ಆ ರಾಜನನ್ನು ಕರೆದುಕೊಂಡು ಹೋಗಲು ಆ ರಾಜರ್ಷಿಯಿರುವ ಸ್ಥಳಕ್ಕೆ ಬಂದನು.

ವೀಕ್ಷ್ಯ ರಾಜಾ ಭಯಾವಿಷ್ಟಃ ಶೂಲಹಸ್ತಂ ಸಮಾಗತಮ್ ।
ಕಾಲಂ ಕಾಲಹರಂ ಘೋರಂ ಭೀಷಣಂ ಚಂಡದೀಪಿತಮ್ ॥ ೧೫ ॥

ಉಭಾಭ್ಯಾಮಥ ಹಸ್ತಾಭ್ಯಾಂ ಸ್ಪೃಷ್ಟ್ವಾ ಸೌ ಲಿಂಗಮುತ್ತಮಮ್ ।
ನನಾಮ ಶಿರಸಾ ರುದ್ರಂ ಜಜಾಪ ಶತರುದ್ರಿಯಮ್ ॥ ೧೬ ॥

ಜಪಂತಮಾಹ ರಾಜಾನಂ ನಮಂತಂ ಮನಸಾ ಭವಮ್ ।
ಏಹ್ಯೇಹೀತಿ ಪುರಃ ಸ್ಥಿತ್ವಾ ಕೃತಾಂತಃ ಪ್ರಹಸನ್ನಿವ ॥ ೧೭ ॥

ತಮುವಾಚ ಭಯಾವಿಷ್ಟೋ ರಾಜಾ ರುದ್ರಪರಾಯಣಃ ।
ಏಕಮೀಶಾರ್ಚನರತಂ ವಿಹಾಯಾನ್ಯಾನ್ ನಿಷೂದಯ ॥ ೧೮ ॥

---

೧೫. ಆಗ ರಾಜರ್ಷಿಯು ಸರ್ವಾಂತಕನೂ, ಕಾಲವನ್ನು ನಿಗ್ರಹಿಸಿದವನೂ ಘೋರರೂಪಿಯೂ, ಭಯಂಕರನೂ, ಮತ್ತು ಉಗ್ರರೂಪದಿಂದ ಜ್ವಲಿಸುವವನೂ, ಆದ ಶೂಲಧರಪುರುಷನು ಬಂದಿರುವುದನ್ನು ನೋಡಿ, ಭಯಚಕಿತನಾದನು.

೧೬. ಮತ್ತು ರಾಜರ್ಷಿಯು ತನ್ನ ಎರಡು ಕೈಗಳಿಂದ ಶ್ರೇಷ್ಠವಾದ ಶಿವನ ಲಿಂಗವನ್ನು ಸ್ಪರ್ಶಿಸಿ ತಲೆಬಾಗಿಸಿ ಶಿವನನ್ನು ವಂದಿಸಿದನು. ಹಾಗು ಶತರುದ್ರಿಯವೆಂಬ ಸೂಕ್ತವನ್ನು ಜಪಮಾಡಿದನು.

೧೭. ಶತರುದ್ರಿಯವನ್ನು ಜಪಿಸುತ್ತಿದ್ದ ಮತ್ತು ಈಶ್ವರನನ್ನು ಮನಸ್ಸಿನಲ್ಲಿ ವಂದಿಸುತ್ತಿದ್ದ ರಾಜನ ಎದುರಿಗೆ ನಿಂತು "ಬಾ, ಬಾ" ಎಂದು ನಗುಮುಖದಿಂದ ಕೂಡಿ ಯಮಧರ್ಮರಾಜನು ಭೀಷಣವಾಗಿ ಕರೆದನು.

೧೮. ರುದ್ರನಲ್ಲಿ ಪರಮಭಕ್ತಿಯಿಂದ ಕೂಡಿದ ಆ ರಾಜರ್ಷಿಯು ಭಯದಿಂದ ಕೂಡಿದವನಾಗಿ ಯಮನಿಗೆ ಈ ರೀತಿಯಾಗಿ ಹೇಳಿದನು:— ಈಶ್ವರನ ಅರ್ಚನೆಯಲ್ಲಿ ನಿರತನಾದವನೊಬ್ಬನನ್ನು ಬಿಟ್ಟು ಇತರರನ್ನು ಸಂಹರಿಸು.

ಇತ್ಯುಕ್ತ್ವಾಂತಂ ಭಗವಾನಬ್ರವೀದ್ಭೀತಮಾನಸಮ್ ।
ರುದ್ರಾರ್ಚನರತೋ ವಾನ್ಯೋ ಮದ್ವಶೇ ಕೋ ನ ತಿಷ್ಠತಿ ॥ ೧೯ ॥

ಏವಮುಕ್ತ್ವಾ ಸ ರಾಜಾನಂ ಕಾಲೋ ಲೋಕಪ್ರಕಾಲನಃ ।
ಬಬಂಧ ಪಾಶೈ ರಾಜಾಪಿ ಜಜಾಪ ಶತರುದ್ರಿಯಮ್ ॥ ೨೦ ॥

ಅಥಾಂತರಿಕ್ಷೇ ವಿಪುಲಂ ದೀಪ್ಯಮಾನಂ
ತೇಜೋರಾಶಿಂ ಭೂತಭರ್ತುಃ ಪುರಾಣಮ್ ।
ಜ್ವಾಲಾಮಾಲಾಸಂವೃತಂ ವ್ಯಾಪ್ಯ ವಿಶ್ವಂ
ಪ್ರಾದುರ್ಭೂತಂ ಸಂಸ್ಥಿತಂ ಸಂದದರ್ಶ ॥ ೨೧ ॥

ತನ್ಮಧ್ಯೇಽಸೌ ಪುರುಷಂ ರುಕ್ಮವರ್ಣಂ
ದೇವ್ಯಾ ದೇವಂ ಚಂದ್ರಲೇಖೋಜ್ಜ್ವಲಾಂಗಮ್ ।

---

೧೯. ಪೂಜ್ಯನಾದ ಯಮಧರ್ಮರಾಜನು ಹೀಗೆ ಹೇಳಿದ, ಭಯಗೊಂಡ ಚಿತ್ತವುಳ್ಳ ರಾಜನಿಗೆ ಪ್ರತ್ಯುತ್ತರವಿತ್ತನು:— ರುದ್ರನ ಅರ್ಚನೆಯಲ್ಲಿ ನಿರತನಾಗಲಿ, ಆಗದಿರಲಿ, ನನ್ನ ಅಧೀನದಲ್ಲಿ ಯಾರುತಾನೆ ಸಿಕ್ಕಲಾರರು.

೨೦. ಹೀಗೆಂದು ಹೇಳಿ ಲೋಕಗಳನ್ನು ಸೆಳೆದೊಯ್ಯುವ ಕಾಲಮೂರ್ತಿಯು ತನ್ನ ಪಾಶಗಳಿಂದ ರಾಜನನ್ನು ಬಿಗಿದನು. ಆದರೆ ರಾಜರ್ಷಿಯು ಆಗ ಶತರುದ್ರಿಯ ಸೂಕ್ತವನ್ನು ಬಿಡದೆ ಜಪಿಸಲಾರಂಭಿಸಿದನು.

೨೧. ತರುವಾಯ ರಾಜನು ವಿಸ್ತಾರವಾಗಿರುವುದೂ, ಜ್ವಲಿಸುತ್ತಿರುವುದೂ, ಜ್ವಾಲೆಗಳ ಮಾಲೆಯಿಂದ ಸುತ್ತಲ್ಪಟ್ಟಿರುವುದೂ, ಮತ್ತು ಸಮಸ್ತ ವಿಶ್ವವನ್ನು ವ್ಯಾಪಿಸಿ ಆವಿರ್ಭವಿಸಿರುವುದೂ ಆದ ಅಂತರಿಕ್ಷದಲ್ಲಿ ಉದಯಿಸಿದ ಭೂತಾಧಿಪತಿಯಾದ ಈಶ್ವರನ ಪುರಾಣ ತೇಜೋರಾಶಿಯನ್ನು ಕಂಡನು.

೨೨. ಮತ್ತು ಈ ರಾಜರ್ಷಿಯು ಆ ಜ್ಯೋತಿರ್ಮಂಡಲದ ಮಧ್ಯದಲ್ಲಿ ಹಿರಣ್ಯದಂತೆ ಉಜ್ವಲರೂಪವುಳ್ಳವನೂ, ಚಂದ್ರಕಲೆಯಿಂದ ಪ್ರಕಾಶಿಸುವ ದೇಹವುಳ್ಳವನೂ,

ತೇಜೋರೂಪಂ ಪಶ್ಯತಿ ಸ್ವಾತಿಹೃಷ್ಟೋ
ಮೇನೇ ಚಾತ್ಮಾನಮಪ್ಯಾಗಚ್ಛತೀತಿ ॥ ೨೨ ॥

ಆಗಚ್ಛಂತಂ ನಾತಿದೂರೇತಿ ದೃಷ್ಟ್ವಾ
ಕಾಲೋ ರುದ್ರಂ ದೇವದೇವ್ಯಾ ಮಹೇಶಮ್ ।
ವ್ಯಪೇತಭೀರಖಿಲೇಶೈಕನಾಥಂ
ರಾಜರ್ಷಿಂ ತಂ ನೇತುಮಭ್ಯಾಜಗಾಮ ॥ ೨೩ ॥

ಆಲೋಕ್ಯಾಸೌ ಭಗವಾನುಗ್ರಕರ್ಮಾ ।
ದೇವೋ ರುದ್ರೋ ಭೂತಭರ್ತಾ ಪುರಾಣಃ
ಏವಂ ಭಕ್ತಂ ಸತ್ವರಂ ಮಾಂ ಸ್ಮರಂತಂ
ದೇಹೀತೀಮಂ ಕಾಲರೂಪಂ ಮಮೇತಿ ॥ ೨೪ ॥

---

ತೇಜೋಮಯನೂ ಮತ್ತು ಪುರುಷಾಕಾರನೂ ಆದ ಪರಮೇಶ್ವರನು ದೇವಿಯೊಡನೆ ಇರುವುದನ್ನು ಕಂಡನು. ಮತ್ತು ಅತಿಸಂತುಷ್ಟಚಿತ್ತನಾಗಿ ತನ್ನನ್ನು ರಕ್ಷಿಸಲು ಸ್ವಾಮಿಯು ಬರುತ್ತಿರುವನೆಂದು ತಿಳಿದನು.

೨೩. ಕಾಲಮೂರ್ತಿಯು ಆಗ ಸಮಸ್ತ ಪ್ರಭುಗಳಿಗೂ ಕೂಡ ಪ್ರಭುವರ್ಯನೂ, ಮಹೇಶ್ವರನೂ ಆದ ರುದ್ರದೇವನು ದೇವಿಯೊಡನೆ ಸಮೀಪದಲ್ಲಿ ಬರುತ್ತಿದ್ದುದನ್ನು ನೋಡಿದರೂ ಕೂಡ ನಿರ್ಭಯನಾಗಿ ಆ ರಾಜರ್ಷಿಯನ್ನು ತನ್ನ ಲೋಕಕ್ಕೆ ಕರೆದುಕೊಂಡುಹೋಗಲು ಸಮೀಪಕ್ಕೆ ಬಂದನು.

೨೪. ಆಗ ಭೂತಗಳನ್ನು ರಕ್ಷಿಸುವವನೂ, ಅನಾದಿಯೂ, ಘೋರವಾದ ವ್ಯಾಪಾರವುಳ್ಳವನೂ ಮತ್ತು ಷಡ್ಗುಣಸಂಪತ್ತಿಯಿಂದ ಕೂಡಿದವನೂ ಆದ ರುದ್ರದೇವನು ಕಾಲಮೂರ್ತಿಯನ್ನು ನೋಡಿ ಹೀಗೆ ನನ್ನಲ್ಲಿ ಪರಮಭಕ್ತನೂ ನನ್ನನ್ನು ಸಂತತವಾಗಿ ಚಿಂತಿಸುತ್ತಿರುವವನೂ ಆದ ಆ ರಾಜರ್ಷಿಯನ್ನು ಬೇಗ ನನಗೆ ಕೊಡು ಎಂದು ಹೇಳಿದನು.

ಶ್ರುತ್ವಾ ವಾಕ್ಯಂ ಗೋಪತೇರುಗ್ರಭಾವಃ
ಕಾಲಾತ್ಮಾಸೌ ಮನ್ಯಮಾನಃ ಸ್ವಭಾವಮ್ ।
ಬದ್ಧ್ವಾ ಭಕ್ತಂ ಪುನರೇವಾಥ ಪಾಶೈ
ರುದ್ರೋ ರೌದ್ರಂ ಚಾಭಿದುದ್ರಾವ ವೇಗಾತ್ ॥ ೨೫ ॥

ಪ್ರೇಕ್ಷ್ಯಾಯಾಂತಂ ಶೈಲಪುತ್ರೀಮಥೇಶಃ
ಸೋಽನ್ವೀಕ್ಷ್ಯಾಂತೇ ವಿಶ್ವಮಾಯಾವಿಧಿಜ್ಞಃ ।
ಸಾವಜ್ಞಂ ವೈ ವಾಮಪಾದೇನ ಕಾಲಂ
ಶ್ವೇತಸ್ಯೈನಂ ಪಶ್ಯತೋ ವ್ಯಾಜಘಾನ ॥ ೨೬ ॥

ಮಮಾರ ಸೋಽತಿಭೀಷಣೋ ಮಹೇಶಪಾದಘಾತಿತಃ ।
ವಿರಾಜತೇ ಸಹೋಮಯಾ ಮಹೇಶ್ವರಃ ಪಿನಾಕಧೃಕ್ ॥ ೨೭ ॥

---

೨೫. ಹೀಗೆಂಬ ರುದ್ರದೇವನ ವಚನವನ್ನು ಕೇಳಿದರೂ ಉಗ್ರವಾದ ಭಾವನೆಯುಳ್ಳ ಕಾಲಮೂರ್ತಿಯು ಸಂಹಾರಶಕ್ತಿಯು ತನ್ನ ಸ್ವಭಾವವೆಂದೂ ಬೇರೊಬ್ಬನಿಯಾಮಕನು ತನಗೆ ಇಲ್ಲವೆಂದೂ ತಿಳಿದು ಮತ್ತೆ ಆ ರುದ್ರಭಕ್ತನನ್ನು ಪಾಶಗಳಿಂದ ಬಂಧಿಸಲಾರಂಭಿಸಿದನು. ಆಗ ರುದ್ರನು ರೌದ್ರಸ್ವರೂಪದಿಂದ ವೇಗವಾಗಿ ಅಲ್ಲಿಗೆ ಓಡಿಬಂದನು.

೨೬. ವಿಶ್ವದ ಮಾಯಾರಚನೆಯನ್ನು ತಿಳಿದಿರುವ ಪರಮೇಶ್ವರನು ತರುವಾಯ ತನ್ನ ಪಾರ್ಶ್ವದಲ್ಲಿದ್ದ ಪರ್ವತಪುತ್ರಿಯಾದ ಗೌರಿಯನ್ನು ನೋಡುತ್ತಾ ಸಮೀಪದಲ್ಲಿ ಬರುತ್ತಿದ್ದ ಕಾಲಮೂರ್ತಿಯನ್ನು ನೋಡಿ ಅತಿ ತುಚ್ಛಭಾವನೆಯಿಂದ ವಾಮಪಾದದಿಂದ ಭಕ್ತನಾದ ರಾಜರ್ಷಿಯು ನೋಡುತ್ತಿರುವಂತೆ ಅವನ ಎದುರಿನಲ್ಲಿ ಒದ್ದನು.

೨೭. ಅತ್ಯಂತ ಭೀಷಣಮೂರ್ತಿಯಾದ ಯಮಧರ್ಮರಾಜನು ಮಹೇಶ್ವರನ ವಾಮಪಾದದಿಂದ ಹೊಡೆಯಲ್ಪಟ್ಟವನಾಗಿ ಸತ್ತುಬಿದ್ದನು. ಆ ಸಮಯದಲ್ಲಿ ಪಿನಾಕಧಾರಿಯಾದ ಮಹೇಶ್ವರನು ಪಾರ್ವತೀದೇವಿಯೊಡನೆ ಭಕ್ತನ ಉದ್ಧಾರದಿಂದ ಉಲ್ಲಾಸದಿಂದ ಪ್ರಕಾಶಿಸಿದನು.

ನಿರೀಕ್ಷ್ಯ ದೇವಮೀಶ್ವರಂ ಪ್ರಹೃಷ್ಟಮಾನಸೋ ಹರಮ್ ।
ನನಾಮ ವೈ ತಮವ್ಯಯಂ ಸ ರಾಜಪುಂಗವಸ್ತದಾ ॥ ೨೮ ॥

ನಮೋ ಭವಾಯ ಹೇತವೇ ಹರಾಯ ವಿಶ್ವಶಂಭವೇ ।
ನಮಃ ಶಿವಾಯ ಧೀಮತೇ ನಮೋಽಪವರ್ಗದಾಯಿನೇ ॥ ೨೯ ॥

ನಮೋ ನಮೋ ನಮೋ ನಮೋ ಮಹಾವಿಭೂತಯೇ ನಮಃ ।
ವಿಭಾಗಹೀನರೂಪಿಣೇ ನಮೋ ನರಾಧಿಪಾಯ ತೇ ॥ ೩೦ ॥

ನಮೋಽಸ್ತು ತೇ ಗಣೇಶ್ವರ ಪ್ರಪನ್ನದುಃಖಶಾಸನ ।
ಅನಾದಿನಿತ್ಯಭೂತಯೇ ವರಾಹಶೃಂಗಧಾರಿಣೇ ॥ ೩೧ ॥

---

೨೮. ಆಗ ಆ ರಾಜರ್ಷಿಪ್ರವರನು ಸರ್ವೇಶ್ವರನೂ, ಸರ್ವ ಸಂಹಾರಕನೂ ಆದ ರುದ್ರನನ್ನು ನೋಡಿ ಸಂತುಷ್ಟಾಂತರಂಗವುಳ್ಳವನಾಗಿ ನಾಶರಹಿತನಾದ ಆ ಸ್ವಾಮಿಯನ್ನು ನಮಸ್ಕರಿಸಿದನು.

೨೯. ಪ್ರಪಂಚೋತ್ಪತ್ತಿಗೆ ಕಾರಣನಾದುದರಿಂದ ಭವಮೂರ್ತಿಯೆಂದೆನಿಸಿದ ಈಶ್ವರನಿಗೆ ನಮಸ್ಕಾರವು. ಪ್ರಪಂಚಕ್ಕೆ ಕ್ಷೇಮವನ್ನು ಕೊಡುವ ಶಂಕರನಿಗೆ ನಮಸ್ಕಾರವು. ಸರ್ವಜ್ಞನಾದ ಮಂಗಳಮೂರ್ತಿಗೆ ನಮಸ್ಕಾರವು. ಮತ್ತು ಕೈವಲ್ಯ ದಾಯಕನಾದ ಸ್ವಾಮಿಗೆ ನಮಸ್ಕಾರವು.

೩೦. ವಿಶ್ವವ್ಯಾಪಕವಾದ ಅನಂತ ಮಹಾ ವಿಭೂತಿಸ್ವರೂಪನಾದ ನಿನಗೆ ನಮಸ್ಕಾರವು. ವಿಭಾಗಶೂನ್ಯನೂ ಅದ್ವಿತೀಯನೂ ಆದ ದೇವನಿಗೆ ನಮಸ್ಕಾರವು. ಮತ್ತು ಸಮಸ್ತ ಜಗತ್ತಿಗೆ ಅಧಿಪತಿಯಾದ ನಿನಗೆ ನಮಸ್ಕಾರವು. ನಿನಗೆ ನಮಸ್ಕಾರವು.

೩೧. ಪ್ರಮಥ ಗಣಾಧಿಪತಿಯೆ ! ಭಕ್ತರ ದುಃಖವನ್ನು ದೂರಮಾಡುವವನೆ! ಆದಿ-ಅಂತಗಳಿಲ್ಲದೆ ನಿತ್ಯಭೂತಿಸ್ವರೂಪನೂ ವರಾಹದ ಶೃಂಗಾಯುಧವನ್ನು ಧರಿಸಿದವನೂ ಆದ ನಿನಗೆ ಪುನಃ ಪುನಃ ನಮಸ್ಕಾರವು.

ನಮೋ ವೃಷಧ್ವಜಾಯ ತೇ ಕಪಾಲಮಾಲಿನೇ ನಮಃ ।
ನಮೋ ಮಹಾನಗಾಯ ತೇ ಶಿವಾಯ ಶಂಕರಾಯ ತೇ ॥ ೩೨ ॥

ಅಥಾನುಗೃಹ್ಯ ಶಂಕರಃ ಪ್ರಣಾಮತತ್ಪರಂ ನೃಪಮ್ ।
ಸ್ವಗಾಣಪತ್ಯಮವ್ಯಯಂ ಸ್ವರೂಪತಾಮಥೋ ದದೌ ॥ ೩೩ ॥

ಸಹೋಮಯಾ ಸಪಾರ್ಷದಃ ಸರಾಜಪುಂಗವೋ ಹರಃ ।
ಮುನೀಶಸಿದ್ಧವಂದಿತಃ ಕ್ಷಣಾದದೃಶ್ಯತಾಮಗಾತ್ ॥ ೩೪ ॥

ಕಾಲೇ ಮಹೇಶನಿಹತೇ ಲೋಕನಾಥಃ ಪಿತಾಮಹಃ ।
ಅಯಾಚತ ವರಂ ರುದ್ರಂ ಸಜೀವೋಽಯಂ ಭವತ್ವಿತಿ ॥ ೩೫ ॥

---

೩೨. ವೃಷಭಚಿಹ್ನದಿಂದ ಅಂಕಿತವಾದ ಧ್ವಜವುಳ್ಳ ನಿನಗೆ ವಂದನೆಯು. ಕಪಾಲಮಾಲೆಯನ್ನು ಧರಿಸಿದ ನಿನಗೆ ವಂದನೆಯು. ಮಹತ್ತಾದ ಕೈಲಾಸಗಿರಿಗೆ ಅಧಿಪತಿಯಾದ ನಿನಗೆ ವಂದನೆಯು. ಮತ್ತು ಶಿವಸ್ವರೂಪನೂ ಸುಖಕರನೂ ಆದ ನಿನಗೆ ವಂದನೆಯು.

೩೩. ತರುವಾಯ ಶಂಕರನು ತನ್ನ ನಮಸ್ಕಾರ ವಿಧಾನದಲ್ಲಿ ತತ್ಪರನಾದ ಆ ರಾಜರ್ಷಿಯನ್ನು ಅನುಗ್ರಹಿಸಿ ಶಾಶ್ವತವಾದ ಗಣಾಧಿಪತ್ಯವನ್ನೂ ತನ್ನ ಸಾರೂಪ್ಯ ವನ್ನೂ ಅವನಿಗೆ ಕೊಟ್ಟನು.

೩೪. ಅನಂತರದಲ್ಲಿ ಪಾರ್ವತೀದೇವಿ, ತನ್ನ ಗಣಗಳ ಪರಿವಾರ ಮತ್ತು ರಾಜರ್ಷಿಪುಂಗವರೊಡನೆ ಪರಮೇಶ್ವರನು ಅನೇಕಮಂದಿ ಮುನೀಶ್ವರರಿಂದಲೂ, ಸಿದ್ಧಜನರಿಂದಲೂ ವಂದಿಸಲ್ಪಡುತ್ತ ಕ್ಷಣಮಾತ್ರದಲ್ಲಿ ಅಂತರ್ಧಾನಹೊಂದಿದನು.

೩೫. ಹೀಗೆ ಯಮರಾಜನು ಈಶ್ವರನಿಂದ ಸಂಹರಿಸಲ್ಪಡಲಾಗಿ ಲೋಕಗಳಿ ಗೆಲ್ಲಾ ಪ್ರಭುವಾದ ಬ್ರಹ್ಮದೇವನು ರುದ್ರದೇವನ ಬಳಿಗೆಬಂದು “ ಇವನು ಜೀವಂತ ನಾಗಲಿ ” ಎಂದು ವರವನ್ನು ಕೇಳಿದನು.

ನಾಸ್ತಿ ಕಶ್ಚಿದಪೀಶಾನ ದೋಷಲೇಶೋ ವೃಷಧ್ವಜ ।
ಕೃತಾಂತಸ್ಸೈವ ಭವಿತಾ ತತ್ಕಾರ್ಯೇ ವಿನಿಯೋಜಿತಃ ॥ ೩೬ ॥

ಸ ದೇವದೇವವಚನಾದ್ದೇವದೇವೇಶ್ವರೋ ಹರಃ ।
ತಥಾಸ್ತ್ವಿತ್ಯಾಹ ವಿಶ್ವಾತ್ಮಾ ಸೋಽಪಿ ತಾದೃಗ್ವಿಧೋಽಭವತ್ ॥ ೩೭ ॥

ಇತ್ಯೇತತ್ಪರಮಂ ತೀರ್ಥಂ ಕಾಲಂಜರಮಿತಿ ಶ್ರುತಮ್ ।
ಗತ್ವಾಭ್ಯರ್ಚ್ಯ ಮಹಾದೇವಂ ಗಾಣಪತ್ಯಂ ಸ ವಿಂದತಿ ॥ ೩೮ ॥

ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇ
ಏಕೋನನವತಿತಮೋಽಧ್ಯಾಯಃ.

---

೩೬. ವೃಷಭಾಂಕಿತ ಧ್ವಜವುಳ್ಳ ಶಂಕರನೆ! ಈಶ್ವರನೆ! ಇವನಲ್ಲಿ ಅಲ್ಪ ಮಾತ್ರವೂ ದೋಷವಿರುವುದಿಲ್ಲ. ಇವನು ಅಂತಕನ ಕಾರ್ಯದಲ್ಲಿ ನಿಯಮಿಸಲ್ಪಟ್ಟಿರುವನು. ಆದುದರಿಂದ ಮುಂದೆಯೂ ಅವನು ಹಾಗೆಯೇ ಇರಲಿ.

೩೭. ದೇವತೆಗಳಿಗೆಲ್ಲ ದೇವತೆಯೂ ಸರ್ವೇಶ್ವರನೂ ಆದ ಶಂಕರನು ದೇವ ಮಾನ್ಯನಾದ ಬ್ರಹ್ಮನ ವಚನದಂತೆ "ಹಾಗೆ ಆಗಲಿ" ಎಂದು ಅಂಗೀಕರಿಸಿದನು. ಆಗ ವಿಶ್ವರೂಪಿಯಾದ ಕಾಲಮೂರ್ತಿಯು ಮೊದಲಿನಂತೆ ಸಜೀವನಾಗಿ ಬಂದನು.

೩೮. ಆದುದರಿಂದ ಉತ್ತಮವಾದ ಈ ತೀರ್ಥವು ಕಾಲಂಜರತೀರ್ಥವೆಂದು ಪ್ರಸಿದ್ಧಿಯನ್ನು ಹೊಂದಿರುವುದು. ಆ ತೀರ್ಥಕ್ಕೆ ಹೋಗಿ ಮಹಾದೇವನನ್ನು ಪೂಜಿಸಿದ ಮಾನವನು ಗಣಾಧಿಪತ್ಯವನ್ನು ಹೊಂದುತ್ತಾನೆ.

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ಎಂಭತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

# ಕೂರ್ಮಪುರಾಣಂ



## ನವತಿತಮೋಽಧ್ಯಾಯಃ.

**ಸೂತ ಉವಾಚ :—**

**ಇದಮನ್ಯತ್ ಪರಂ ಸ್ಥಾನಂ ಗುಹ್ಯಾದ್ಗುಹ್ಯತರಂ ಮಹತ್ ।**
**ಮಹಾದೇವಸ್ಯ ದೇವಸ್ಯ ಮಹಾಲಯ ಇತಿ ಶ್ರುತಮ್ ॥ ೧ ॥**

**ತತ್ರ ದೇವಾದಿದೇವೇನ ರುದ್ರೇಣ ತ್ರಿಪುರಾರಿಣಾ ।**
**ಶಿಲಾತಲೇ ಪದಂ ನ್ಯಸ್ತಂ ನಾಸ್ತಿಕಾನಾಂ ನಿದರ್ಶನಮ್ ॥ ೨ ॥**

---

## ತೊಂಭತ್ತನೆಯ ಅಧ್ಯಾಯವು

೧. ಸೂತಮುನಿಯು ಇಂತೆಂದನು:— ದೇವೋತ್ತಮನಾದ ಪರಮೇಶ್ವರನ ಸಾನ್ನಿಧ್ಯವುಳ್ಳ, ಮಹಾಲಯ ಎಂಬ-ನಾಮಾಂಕನದಿಂದ ಪ್ರಸಿದ್ಧವಾದ, ಗೋಪ್ಯವಾದ ವಸ್ತುಗಳೆಲ್ಲಕ್ಕಿಂತಲೂ ಗೋಪ್ಯವಾದ, ಮಹತ್ತಾದ, ಮತ್ತು ಸರ್ವೋತ್ಕೃಷ್ಟವಾದ ಮತ್ತೊಂದು ಕ್ಷೇತ್ರವಿರುವುದು.

೨. ಆ ಸ್ಥಾನದಲ್ಲಿ ತ್ರಿಪುರಾಸುರವಿಜಯಿಯಾದ ಮತ್ತು ದೇವತೆಗಳಿಗೆ ಆದಿದೇವನಾದ ರುದ್ರನಿಂದ ನಾಸ್ತಿಕರಿಗೆ ಆಸ್ತಿಕ್ಯಬೋಧನೆಗೆ ನಿದರ್ಶನವಾಗುವಂತೆ ಶಿಲಾತಲದಲ್ಲಿ ತನ್ನ ಪದಚಿಹ್ನವು ಇರಿಸಲ್ಪಟ್ಟಿದೆ.

ತತ್ರ ಪಾಶುಪತಾಃ ಶಾಂತಾ ಭಸ್ಮೋದ್ಧೂಲಿತವಿಗ್ರಹಾಃ ।
ಉಪಾಸತೇ ಮಹಾದೇವಂ ವೇದಾಧ್ಯಯನತತ್ಪರಾಃ ॥ ೩ ॥

ಸ್ನಾತ್ವಾ ತತ್ರ ಪದಂ ಶಾರ್ವಂ ದೃಷ್ಟ್ವಾ ಭಕ್ತಿಪುರಃಸರಮ್ ।
ನಮಸ್ಕೃತ್ವಾಥ ಶಿರಸಾ ರುದ್ರಸಾಮೀಪ್ಯಮಾಪ್ನುಯಾತ್ ॥ ೪ ॥

ಅನ್ಯಚ್ಚ ದೇವದೇವಸ್ಯ ಸ್ಥಾನಂ ಶಂಭೋರ್ಮಹಾತ್ಮನಃ ।
ಕೇದಾರಮಿತಿ ವಿಖ್ಯಾತಂ ಸಿದ್ಧಾನಾಮಾಲಯಂ ಶುಭಮ್ ॥ ೫ ॥

ತತ್ರ ಸ್ನಾತ್ವಾ ಮಹಾದೇವಮಭ್ಯರ್ಚ್ಯ ವೃಷಕೇತನಮ್ ।
ಪೀತ್ವಾ ಚೈವೋದಕಂ ಶುದ್ಧಂ ಗಾಣಪತ್ಯಮವಾಪ್ನುಯಾತ್ ॥ ೬ ॥

---

೩. ಆ ಶಿವ ಪಾದ ಸನ್ನಿಧಿಯಲ್ಲಿ ಶಾಂತಚಿತ್ತರೂ, ಭಸ್ಮೋದ್ಧೂಲನದಿಂದ ಶೋಭಿತವಾದ ದೇಹವುಳ್ಳವರೂ ಮತ್ತು ವೇದಾಧ್ಯಯನದಲ್ಲಿ ಆಸಕ್ತರೂ ಆದ ಪಶುಪತಿರೂಪನಾದ ಈಶ್ವರನಲ್ಲಿ ಭಕ್ತಿಯುಳ್ಳವರು ಮಹಾದೇವನನ್ನು ಉಪಾಸನ ಮಾಡುತ್ತಾರೆ.

೪. ಆ ಕ್ಷೇತ್ರದಲ್ಲಿ ಸ್ನಾನಮಾಡಿ ಭಕ್ತಿಪೂರ್ವಕವಾಗಿ ಶಿವನ ಪಾದವನ್ನು ದರ್ಶನಮಾಡಿ ಅದಕ್ಕೆ ತಲೆಬಾಗಿಸಿ ನಮಸ್ಕಾರ ಮಾಡಿದ ನರನು ರುದ್ರನ ಸಾಮೀಪ ವನ್ನು ಹೊಂದುವನು.

೫. ದೇವೋತ್ತಮನೂ ಮಹಾತ್ಮನೂ ಆದ ಶಂಕರನಿಗೆ ಪ್ರಿಯವಾದ ಮತ್ತೊಂದು ಪವಿತ್ರಸ್ಥಾನವಿರುವುದು. ಅದು ಸಿದ್ಧವೃಂದಕ್ಕೆ ಆವಾಸವಾಗಿಯೂ ಮಂಗಳಕರವೂ ಮತ್ತು ಕೇದಾರ ಎಂದು ನಾಮದಿಂದ ಅಂಕಿತವೂ ಆಗಿದೆ.

೬. ಆ ಕೇದಾರಕ್ಷೇತ್ರದಲ್ಲಿ ಸ್ನಾನಮಾಡಿ ವೃಷಭಾಂಕಿತವಾದ ಧ್ವಜವುಳ್ಳ ಮಹಾದೇವಸ್ವಾಮಿಯನ್ನು ಅರ್ಚಿಸಿ ಶುದ್ಧವಾದ ಆ ತೀರ್ಥೋದಕವನ್ನು ಪಾನ ಮಾಡಿದರೆ ಗಣಪರಿವಾರದ ಆಧಿಪತ್ಯವನ್ನು ಹೊಂದುವನು.

ಶ್ರಾದ್ಧದಾನಾದಿಕಂ ಕೃತ್ವಾ ಹ್ಯಕ್ಷಯಂ ಲಭತೇ ಫಲಮ್ ।
ದ್ವಿಜಾತಿಪ್ರವರೈರ್ಜುಷ್ಟಂ ಯೋಗಿಭಿರ್ಜಿತಮಾನಸೈಃ ॥ ೭ ॥

ತೀರ್ಥಂ ಪ್ಲಕ್ಷಾವತರಣಂ ಸರ್ವಪಾಪವಿನಾಶನಮ್ ।
ತತ್ರಾಭ್ಯರ್ಚ್ಯ ಶ್ರೀನಿವಾಸಂ ವಿಷ್ಣುಲೋಕೇ ಮಹೀಯತೇ ॥ ೮ ॥

ಅನ್ಯಚ್ಚ ಮಗಧಾರಣ್ಯಂ ಸರ್ವಲೋಕಗತಿಪ್ರದಮ್ ।
ಅಕ್ಷಯಂ ವಿಂದತೇ ಸ್ವರ್ಗಂ ತತ್ರ ಗತ್ವಾ ದ್ವಿಜೋತ್ತಮಃ ॥ ೯ ॥

ತೀರ್ಥಂ ಕನಖಲಂ ಪುಣ್ಯಂ ಮಹಾಪಾತಕನಾಶನಮ್ ।
ಯತ್ರ ದೇವೇನ ರುದ್ರೇಣ ಯಜ್ಞೋ ದಕ್ಷಸ್ಯ ನಾಶಿತಃ ॥ ೧೦ ॥

---

೭. ಮತ್ತು ಕೇದಾರಕ್ಷೇತ್ರದಲ್ಲಿ ಶ್ರಾದ್ಧ-ದಾನಾದಿ ಸತ್ಕರ್ಮಗಳನ್ನು ಮಾಡುವುದರಿಂದ ಅಕ್ಷಯವಾದ ಫಲವನ್ನು ಹೊಂದುತ್ತಾನೆ. ಯೋಗಾಭ್ಯಾಸಪರರೂ ಮನೋನಿಗ್ರಹವಂತರೂ ಆದ ಶ್ರೇಷ್ಠರಾದ ದ್ವಿಜರಿಂದ ಸೇವಿಸಲ್ಪಟ್ಟ ಮತ್ತೊಂದು ತೀರ್ಥವಿದೆ.

೮. ಸಮಸ್ತ ಪಾಪಗಳನ್ನು ನಿವಾರಣಮಾಡುವ ಆ ತೀರ್ಥವು ಪ್ಲಕ್ಷಾವತರಣ ತೀರ್ಥವೆಂದು ಪ್ರಸಿದ್ಧಿಹೊಂದಿದೆ. ಅಲ್ಲಿ ಲಕ್ಷ್ಮೀಪತಿಯಾದ ಮಹಾವಿಷ್ಣುವನ್ನು ಪೂಜಿಸಿದವನು ವಿಷ್ಣುಲೋಕದಲ್ಲಿ ಪೂಜ್ಯನಾಗುತ್ತಾನೆ.

೯. ಸರ್ವಲೋಕಗಳಿಗೆ ಸದ್ಗತಿಯನ್ನು ಕೊಡುವ ಮಗಧಾರಣ್ಯವೆಂಬುದು ಮತ್ತೊಂದು ಉತ್ತಮತೀರ್ಥವು, ದ್ವಿಜೋತ್ತಮನು ಆ ತೀರ್ಥಯಾತ್ರೆಯನ್ನು ಮಾಡಿದರೆ ಅಕ್ಷಯವಾದ ಸ್ವರ್ಗಸುಖವನ್ನು ಹೊಂದುತ್ತಾನೆ.

೧೦. ಕನಖಲವೆಂದು ಪ್ರಸಿದ್ಧವಾದ ಮತ್ತೊಂದು ಪವಿತ್ರ ತೀರ್ಥವು ಭಕ್ತರ ಸಮಸ್ತ ಮಹಾಪಾತಕಗಳನ್ನು ನಾಶಮಾಡುವುದು. ಆ ತೀರ್ಥದಲ್ಲಿ ರುದ್ರದೇವನಿಂದ ದಕ್ಷಪ್ರಜಾಪತಿಯ ಯಜ್ಞವು ನಾಶಮಾಡಲ್ಪಟ್ಟಿತು.

ತತ್ರ ಗಂಗಾಮುಪಸ್ಪೃಶ್ಯ ಶುಚಿರ್ಭಾವಸಮನ್ವಿತಃ ।
ಮುಚ್ಯತೇ ಸರ್ವಪಾಪೈಸ್ತು ಬ್ರಹ್ಮಲೋಕೇ ವಸೇನ್ನರಃ ॥ ೧೧ ॥

ಮಹಾತೀರ್ಥಮಿತಿ ಖ್ಯಾತಂ ಪುಣ್ಯಂ ನಾರಾಯಣಪ್ರಿಯಮ್ ।
ತತ್ರಾಭ್ಯರ್ಚ್ಯ ಹೃಷೀಕೇಶಂ ಶ್ವೇತದ್ವೀಪಂ ಸ ಗಚ್ಛತಿ ॥ ೧೨ ॥

ಅನ್ಯಚ್ಚ ತೀರ್ಥಪ್ರವರಂ ನಾಮ್ನಾ ಶ್ರೀಪರ್ವತಂ ಶುಭಮ್ ।
ಅತ್ರ ಪ್ರಾಣಾನ್ ಪರಿತ್ಯಜ್ಯ ರುದ್ರಸ್ಯ ದಯಿತೋ ಭವೇತ್ ॥ ೧೩ ॥

ತತ್ರ ಸನ್ನಿಹಿತೋ ರುದ್ರೋ ದೇವ್ಯಾ ಸಹ ಮಹೇಶ್ವರಃ ।
ಸ್ನಾನಪಿಂಡಾದಿಕಂ ತತ್ರ ದತ್ತಮಕ್ಷಯ್ಯಮುತ್ತಮಮ್ ॥ ೧೪ ॥

---

೧೧. ಆ ಪ್ರಸಿದ್ಧ ಕ್ಷೇತ್ರದಲ್ಲಿ ಗಂಗಾನದಿಯಲ್ಲಿ ಸ್ನಾನ-ಆಚಮನಗಳನ್ನು ಮಾಡಿ ಪವಿತ್ರನೂ ಪುಣ್ಯಭಾವನಾ-ಭಕ್ತಿಗಳಿಂದ ಕೂಡಿದವನೂ ಆದ ಮನುಜನು ಸಮಸ್ತ ಪಾತಕಗಳಿಂದ ಮುಕ್ತನಾಗಿ ಬ್ರಹ್ಮಲೋಕದಲ್ಲಿ ವಾಸಮಾಡುತ್ತಾನೆ.

೧೨. ಮಹಾತೀರ್ಥವೆಂದು ಲೋಕವಿಖ್ಯಾತವಾದ ಮತ್ತೊಂದು ತೀರ್ಥವು ಶ್ರೀಮನ್ನಾರಾಯಣನಿಗೆ ಪ್ರಿಯವಾದ ಪುಣ್ಯತೀರ್ಥವಾಗಿದೆ. ಅಲ್ಲಿ ಸರ್ವೇಂದ್ರಿಯ ಪ್ರೇರಕನಾದ ವಿಷ್ಣುವನ್ನು ಪೂಜಿಸಿದರೆ ಶ್ವೇತದ್ವೀಪವನ್ನು ಹೊಂದುವನು.

೧೩. ಮಂಗಳಕರವೂ "ಶ್ರೀಪರ್ವತತೀರ್ಥ" ವೆಂಬ ನಾಮಾಂಕನವುಳ್ಳದ್ದೂ ಆದ ಮತ್ತೊಂದು ಪ್ರಶಸ್ತವಾದ ತೀರ್ಥವು ಇದೆ. ಆ ತೀರ್ಥದಲ್ಲಿ ಪ್ರಾಣಗಳನ್ನು ತ್ಯಜಿಸಿದವನು ರುದ್ರನಿಗೆ ಪ್ರಿಯನಾಗುವನು.

೧೪. ಸರ್ವನಿಯಾಮಕನಾದ ರುದ್ರದೇವನು ಆ ತೀರ್ಥದಲ್ಲಿ ಪಾರ್ವತೀದೇವಿಯೊಡನೆ ಸನ್ನಿಹಿತನಾಗಿರುವನು. ಅಲ್ಲಿ ಸ್ನಾನಮಾಡಿ ಆಚರಿಸಿದ ಪಿಂಡಾದಿದಾನವು ಉತ್ತಮವೂ ಅಕ್ಷಯವೂ ಆದ ಫಲದಾಯಕವಾಗುವುದು.

ಗೋದಾವರೀ ನದೀ ಪುಣ್ಯಾ ಸರ್ವಪಾಪಪ್ರಣಾಶಿನೀ ।
ತತ್ರ ಸ್ನಾತ್ವಾ ಪಿತೄನ್ ದೇವಾಂಸ್ತರ್ಪಯಿತ್ವಾ ಯಥಾವಿಧಿ ॥ ೧೫ ॥

ಸರ್ವಪಾಪವಿಶುದ್ಧಾತ್ಮಾ ಗೋಸಹಸ್ರಫಲಂ ಲಭೇತ್ ॥ ೧೬ ॥

ಪವಿತ್ರಸಲಿಲಾ ಪುಣ್ಯಾ ಕಾವೇರೀ ವಿಪುಲಾ ನದೀ ।
ತಸ್ಯಾಂ ಸ್ನಾತ್ವೋದಕಂ ಕೃತ್ವಾ ಮುಚ್ಯತೇ ಸರ್ವಪಾತಕೈಃ ॥ ೧೭ ॥

ತ್ರಿರಾತ್ರೋಪೋಷಿತೇನಾಥ ಏಕರಾತ್ರೋಷಿತೇನ ವಾ ।
ದ್ವಿಜಾತೀನಾಂ ತು ಕಥಿತಂ ತೀರ್ಥಾನಾಮಿಹ ಸೇವನಮ್ ॥ ೧೮ ॥

---

೧೫. ನದಿಗಳಲ್ಲಿ ಅತ್ಯಂತ ಪವಿತ್ರವಾದ ಗೋದಾವರೀ ಎಂಬ ನದಿಯು ಸಮಸ್ತ ಪಾತಕಗಳನ್ನು ಧ್ವಂಸಮಾಡುವುದು. ಆ ನದಿಯಲ್ಲಿ ಸ್ನಾನಮಾಡಿ ಯಥಾವಿಧಿಯಾಗಿ ಪಿತೃ-ದೇವತೆಗಳಿಗೆ ತರ್ಪಣಾಂಜಲಿಯನ್ನು ಕೊಡಬೇಕು.

೧೬. ಹಾಗೆ ತರ್ಪಣಾಂಜಲಿದಾನದಿಂದ ಸರ್ವಪಾತಕ ಸಂಪರ್ಕದಿಂದ ಶುದ್ಧವಾದ ಆತ್ಮವುಳ್ಳವನಾಗಿ ಸಹಸ್ರ ಗೋದಾನಗಳನ್ನು ಮಾಡಿದ ಫಲಕ್ಕೆ ಭಾಗಿಯಾಗುವನು.

೧೭. ಕಾವೇರೀ ಎಂಬ ವಿಸ್ತಾರವುಳ್ಳದ್ದೂ, ಪವಿತ್ರವೂ ಆದ ನದಿಯು ಪಾವನಕರವಾದ ತೀರ್ಥವುಳ್ಳದ್ದಾಗಿದೆ. ಆ ನದಿಯಲ್ಲಿ ಸ್ನಾನಮಾಡಿ ತರ್ಪಣಾಂಜಲಿಯನ್ನು ಕೊಟ್ಟರೆ ಸರ್ವ ಪಾಪಗಳಿಂದ ಮುಕ್ತನಾಗುತ್ತಾನೆ.

೧೮. ದ್ವಿಜರಿಗೆ ತೀರ್ಥಸೇವನ ವಿಧಾನವು ಮೂರು ದಿನಗಳಲ್ಲಿ ಉಪವಾಸ ಅಥವಾ ಒಂದು ದಿನದಲ್ಲಿ ಮಾತ್ರ ಉಪವಾಸವ್ರತದಿಂದ ಕೂಡಿ ಕರ್ತವ್ಯವಾದುದೆಂದು ಪ್ರಾಜ್ಞರಿಂದ ಹೇಳಲ್ಪಟ್ಟಿದೆ.

ಯಸ್ಯ ವಾಙ್ಮನಸೀ ಶುದ್ಧೇ ಹಸ್ತಪಾದೌ ಚ ಸಂಸ್ಥಿತೌ ।
ಅಲೋಲುಪೋ ಬ್ರಹ್ಮಚಾರೀ ತೀರ್ಥಾನಾಂ ಫಲಮಾಪ್ನುಯಾತ್ ॥

ಸ್ವಾಮಿತೀರ್ಥಂ ಮಹಾತೀರ್ಥಂ ತ್ರಿಷು ಲೋಕೇಷು ವಿಶ್ರುತಮ್ ।
ತತ್ರ ಸನ್ನಿಹಿತೋ ನಿತ್ಯಂ ಸ್ಕಂದೋಽಮರನಮಸ್ಕೃತಃ ॥ ೨೦ ॥

ಸ್ನಾತ್ವಾ ಕುಮಾರಧಾರಾಯಾಂ ಕೃತ್ವಾ ದೇವಾದಿತರ್ಪಣಮ್ ।
ಆರಾಧ್ಯ ಷಣ್ಮುಖಂ ದೇವಂ ಸ್ಕಂದೇನ ಸಹ ಮೋದತೇ ॥ ೨೧ ॥

ನದೀ ತ್ರೈಲೋಕ್ಯವಿಖ್ಯಾತಾ ತಾಮ್ರಪರ್ಣೀತಿ ನಾಮತಃ ।
ತತ್ರ ಸ್ನಾತ್ವಾ ಪಿತೄನ್ ಭಕ್ತ್ಯಾ ತರ್ಪಯಿತ್ವಾ ಯಥಾವಿಧಿ ॥ ೨೨ ॥

---

೧೯. ಯಾವ ಮಾನವನ ವಾಕ್ಕು ಮತ್ತು ಮಾನಸಗಳು ನಿಷ್ಕಪಟಗಳಾಗಿವೆಯೊ ; ಯಾವ ಮಾನವನ ಹಸ್ತ-ಪಾದಗಳು ಪರಿಶುದ್ಧವಾಗಿವೆಯೊ ; ಮತ್ತು ಯಾವ ಮಾನವನು ಲೋಭವನ್ನು ಬಿಟ್ಟು ಬ್ರಹ್ಮಚರ್ಯನಿಯಮವಂತನಾಗಿರುವನೊ ಅವನು ಸಮಸ್ತ ತೀರ್ಥಯಾತ್ರಾಫಲವನ್ನು ಹೊಂದುತ್ತಾನೆ.

೨೦. ಕುಮಾರಸ್ವಾಮಿಗೆ ಪ್ರಿಯವಾದ ಸ್ವಾಮಿ ತೀರ್ಥವೆಂಬ ಮಹಾತೀರ್ಥವು ಮೂರು ಲೋಕಗಳಲ್ಲಿ ಪ್ರಖ್ಯಾತವಾಗಿದೆ. ಅಲ್ಲಿ ದೇವತೆಗಳಿಂದ ವಂದಿಸಲ್ಪಟ್ಟ ಕುಮಾರಸ್ವಾಮಿಯು ಯಾವಾಗಲೂ ಸನ್ನಿಹಿತನಾಗಿರುವನು.

೨೧. ಆ ತೀರ್ಥದಲ್ಲಿ ಪ್ರವಹಿಸುವ ಕುಮಾರಧಾರೆಯಲ್ಲಿ ಸ್ನಾನಮಾಡಿ ದೇವ-ಪಿತೃಗಳಿಗೆ ಜಲಾಂಜಲಿಯನ್ನು ಕೊಟ್ಟು ಷಣ್ಮುಖಸ್ವಾಮಿಯನ್ನು ಪೂಜಿಸಿದ ಮಹಾತ್ಮನು ಕುಮಾರಸ್ವಾಮಿಯೊಡನೆ ಸುಖವನ್ನು ಅನುಭವಿಸುತ್ತಾನೆ.

೨೨. ತಾಮ್ರಪರ್ಣೀ ಎಂಬ ಹೆಸರಿನಿಂದ ಮೂರು ಲೋಕಗಳಲ್ಲಿ ಖ್ಯಾತಿ ಪಡೆದ ಒಂದು ಪುಣ್ಯನದಿಯು ಇರುವುದು. ಆ ನದಿಯಲ್ಲಿ ಸ್ನಾನಮಾಡಿ ಯಥಾಶಾಸ್ತ್ರೀಯವಾಗಿ ಭಕ್ತಿಯಿಂದ ಪಿತೃಗಳಿಗ ಜಲಾಂಜಲಿಯನ್ನು ಕೊಡಬೇಕು.

ಪಾಪಕರ್ತೄನಪಿ ಪಿತೄಂಸ್ತಾರಯೇನ್ನಾತ್ರ ಸಂಶಯಃ ॥ ೨೩ ॥

ಚಂದ್ರತೀರ್ಥಮಿತಿ ಖ್ಯಾತಂ ಕಾವೇರ್ಯಾಃ ಪ್ರಭವೇಽಕ್ಷಯಮ್ ।
ತೀರ್ಥೇ ತತ್ರ ಭವೇದ್ದತ್ತಂ ಮೃತಾನಾಂ ಸದ್ಗತಿಪ್ರದಮ್ ॥ ೨೪ ॥

ವಿಂಧ್ಯಪಾದೇ ಪ್ರಪಶ್ಯಂತಿ ದೇವದೇವಂ ಸದಾಶಿವಮ್ ।
ಭಕ್ತ್ಯಾ ಯೇ ತೇ ನ ಪಶ್ಯಂತಿ ಯಮಸ್ಯ ವದನಂ ದ್ವಿಜಾಃ ॥ ೨೫ ॥

ದೇವಿಕಾಯಾಂ ವೃಷೋ ನಾಮ ತೀರ್ಥಂ ಸಿದ್ಧನಿಷೇವಿತಮ್ ।
ತತ್ರ ಸ್ನಾತ್ವೋದಕಂ ಕೃತ್ವಾ ಯೋಗಸಿದ್ಧಿಂ ಚ ವಿಂದತಿ ॥ ೨೬ ॥

---

೨೩. ಹೀಗೆ ಆ ಪವಿತ್ರ ನದಿಯಲ್ಲಿ ತರ್ಪಣವನ್ನು ಕೊಡುವುದರಿಂದ ಪಾಪಗಳನ್ನು ಕೂಡ ಉದ್ಧರಿಸಿದಂತಾಗುವುದು. ಈ ವಿಷಯದಲ್ಲಿ ಸಂಶಯವಿಲ್ಲ.

೨೪. ಕಾವೇರೀನದಿಯು ಉತ್ಪತ್ತಿಸ್ಥಾನದಲ್ಲಿ ಚಂದ್ರತೀರ್ಥವೆಂದು ಪ್ರಸಿದ್ಧವಾದ ಒಂದು ಅಕ್ಷಯತೀರ್ಥವು ಇರುವುದು. ಮರಣಹೊಂದಿದವರಿಗೆ ಆ ತೀರ್ಥದಲ್ಲಿ ಕೊಟ್ಟಿರುವ ಕವ್ಯವು ಸದ್ಗತಿಯನ್ನು ಕೊಡುವುದು.

೨೫. ವಿಂಧ್ಯಪಾದವೆಂಬ ಕ್ಷೇತ್ರದಲ್ಲಿ ದೇವತೆಗಳಿಗೆ ದೇವನೂ ಯಾವಾಗಲೂ ಮಂಗಳಮೂರ್ತಿಯೂ ಆದ ಈಶ್ವರನನ್ನು ಯಾವ ದ್ವಿಜರು ಸಾಕ್ಷಾತ್ಕರಿಸುವರೋ ಅವರು ಮೃತ್ಯುವಿನ ಮುಖವನ್ನು ನೋಡುವುದಿಲ್ಲ.

೨೬. ದೇವಿಕಾನದೀತೀರದಲ್ಲಿ ವೃಷತೀರ್ಥವೆಂದು ಪ್ರಸಿದ್ಧವಾದ ಒಂದು ತೀರ್ಥವು ಸಿದ್ಧರ ಸಂಘದಿಂದ ಸೇವಿಸಲ್ಪಟ್ಟಿದೆ. ಆ ತೀರ್ಥದಲ್ಲಿ ಸ್ನಾನ-ತರ್ಪಣಗಳನ್ನು ಆಚರಿಸಿದವನು ಯೋಗಸಿದ್ಧಿಯನ್ನು ಹೊಂದುತ್ತಾನೆ.

ದಶಾಶ್ವಮೇಧಿಕಂ ತೀರ್ಥಂ ಸರ್ವಪಾಪವಿನಾಶಕಮ್ ।
ದಶಾನಾಮಶ್ವಮೇಧಾನಾಂ ತತ್ರಾಪ್ನೋತಿ ಫಲಂ ನರಃ ॥ ೨೭ ॥

ಪುಂಡರೀಕಂ ತಥಾ ತೀರ್ಥಂ ಬ್ರಾಹ್ಮಣೈರುಪಶೋಭಿತಮ್ ।
ತತ್ರಾಭಿಗಮ್ಯ ಯುಕ್ತಾತ್ಮಾ ಪುಂಡರೀಕಫಲಂ ಲಭೇತ್ ॥ ೨೮ ॥

ತೀರ್ಥೇಭ್ಯಃ ಪರಮಂ ತೀರ್ಥಂ ಬ್ರಹ್ಮತೀರ್ಥಮಿತಿ ಸ್ಮೃತಮ್ ।
ಬ್ರಹ್ಮಾಣಮರ್ಚಯಿತ್ವಾತ್ರ ಬ್ರಹ್ಮಲೋಕೇ ಮಹೀಯತೇ ॥ ೨೯ ॥

ಸರಸ್ವತ್ಯಾ ವಿನಶನಂ ಪ್ಲಕ್ಷಪ್ರಸ್ರವಣಂ ಶುಭಮ್ ।
ವ್ಯಾಸತೀರ್ಥಮಿತಿ ಖ್ಯಾತಂ ಮೈನಾಕಶ್ಚ ನಗೋತ್ತಮಃ ॥ ೩೦ ॥

---

೨೭. ದಶಾಶ್ವಮೇಧಿಕತೀರ್ಥ ಎಂಬುದೊಂದು ತೀರ್ಥವು ಸಮಸ್ತ ಪಾಪ ಭಂಜಕವಾದ ಉತ್ತಮತೀರ್ಥವಾಗಿದೆ. ಆ ತೀರ್ಥಯಾತ್ರೆಯನ್ನು ಮಾಡಿದ ನರನು ಹತ್ತು ಅಶ್ವಮೇಧಯಾಗಗಳ ಫಲವನ್ನು ಹೊಂದುತ್ತಾನೆ.

೨೮. ಅನೇಕ ಮಂದಿ ಬ್ರಾಹ್ಮಣರಿಂದ ಅಲಂಕರಿಸಲ್ಪಟ್ಟ ಪುಂಡರೀಕವೆಂಬ ಮತ್ತೊಂದು ಉತ್ತಮ ತೀರ್ಥವು ಪ್ರಸಿದ್ಧವಾಗಿದೆ. ಆ ತೀರ್ಥಕ್ಕೆ ಹೋಗಿ ಶರೀರ-ಇಂದ್ರಿಯಗಳನ್ನು ನಿಗ್ರಹಿಸಿ ಯಾತ್ರಾವಿಧಿಯನ್ನು ನೆರವೇರಿಸಿದವನು ಪುಂಡರೀಕ ಯಾಗದ ಫಲವನ್ನು ಹೊಂದುತ್ತಾನೆ.

೨೯. ಬ್ರಹ್ಮತೀರ್ಥವೆಂದು ಸ್ಮರಿಸಲ್ಪಟ್ಟಿರುವ ತೀರ್ಥವು ಎಲ್ಲ ತೀರ್ಥಗಳಿಗಿಂತಲೂ ಬಹುವಾಗಿ ಉತ್ತಮವಾದ ತೀರ್ಥವಾಗಿರುವುದು. ಈ ತೀರ್ಥ ಸನ್ನಿಧಿಯಲ್ಲಿ ಬ್ರಹ್ಮದೇವನನ್ನು ಪೂಜಿಸಿದವನು ಬ್ರಹ್ಮಲೋಕದಲ್ಲಿ ಮಾನ್ಯನಾಗುತ್ತಾನೆ.

೩೦. ಮತ್ತು ಸರಸ್ವತೀ ನದೀತೀರದಲ್ಲಿರುವ ವಿನಶನತೀರ್ಥ, ಪ್ಲಕ್ಷಪ್ರಸ್ರವಣ ತೀರ್ಥ ಮತ್ತು ಪ್ರಸಿದ್ಧಿಹೊಂದಿರುವ ವ್ಯಾಸತೀರ್ಥ ಹಾಗು ಮೈನಾಕವೆಂಬ ಉತ್ತಮ ಗಿರಿ-ಇವುಗಳೆಲ್ಲವೂ ಪವಿತ್ರವಾದ ಸ್ಥಳಗಳಾಗಿವೆ.

ಯಮುನಾಪ್ರಭವಶ್ಚೈವ ಸರ್ವಪಾಪವಿನಾಶನಃ ॥ ೩೧ ॥

ಪಿತೄಣಾಂ ದುಹಿತಾ ದೇವೀ ಗಂಧಕಾಲೀತಿ ವಿಶ್ರುತಾ ।
ತಸ್ಯಾಂ ಸ್ನಾತ್ವಾ ದಿವಂ ಯಾತಿ ಮೃತೋ ಜಾತಿಸ್ಮರೋ ಭವೇತ್॥೩೨॥

ಕುಬೇರತುಂಗಂ ಪಾಪಘ್ನಂ ಸಿದ್ಧಚಾರಣಸೇವಿತಮ್ ।
ಪ್ರಾಣಾಂಸ್ತತ್ರ ಪರಿತ್ಯಜ್ಯ ಕುಬೇರಾನುಚರೋ ಭವೇತ್ ॥ ೩೩ ॥

ಉಮಾತುಂಗಮಿತಿ ಖ್ಯಾತಂ ಯತ್ರ ಸಾ ರುದ್ರವಲ್ಲಭಾ ।
ತತ್ರಾಭ್ಯರ್ಚ್ಯ ಮಹಾದೇವಂ ಗೋಸಹಸ್ರಫಲಂ ಲಭೇತ್ ॥ ೩೪ ॥

---

೩೧. ಯಮುನಾ ನದಿಯ ಉತ್ಪತ್ತಿಗೆ ಕಾರಣವಾದ ನದಿಯ ಮೂಲಸ್ಥಾನವು ಪವಿತ್ರತೀರ್ಥವೂ ಸಮಸ್ತ ಪಾತಕಗಳನ್ನು ಧ್ವಂಸಮಾಡುವುದೂ ಆಗಿದೆ.

೩೨. ಪಿತೃದೇವತೆಗಳ ಮಾನಸಪುತ್ರಿಯಾದ ದೇವಿಯು ಗಂಧಕಾಲೀನದಿ ಎಂದು ಪ್ರಖ್ಯಾತಳಾಗಿರುವಳು. ಆ ಗಂಧಕಾಳೀ ನದಿಯಲ್ಲಿ ಸ್ನಾನಮಾಡಿ ಸ್ವರ್ಗವನ್ನು ಹೊಂದುತ್ತಾನೆ. ಆ ನದಿಯಲ್ಲಿ ಮರಣಹೊಂದಿದವನು ಪೂರ್ವ ಜನ್ಮಸ್ಮರಣವುಳ್ಳವನು ಆಗುತ್ತಾನೆ.

೩೩. ಸಿದ್ಧವೃಂದದಿಂದಲೂ ಚಾರಣರಿಂದಲೂ ಸೇವಿಸಲ್ಪಟ್ಟ ಕುಬೇರ ತುಂಗವೆಂಬ ತೀರ್ಥವು ಸರ್ವಪಾಪಭಂಜಕವಾಗಿದೆ. ಆ ಸ್ಥಳದಲ್ಲಿ ಪ್ರಾಣತ್ಯಾಗಮಾಡಿದವನು ಕುಬೇರನಿಗೆ ಅನುಚರನಾಗಿ ಸುಖವನ್ನು ಹೊಂದುವನು.

೩೪. ರುದ್ರದೇವನಿಗೆ ಪ್ರಿಯತಮೆಯಾದ ಪಾರ್ವತೀದೇವಿಯು ಸನ್ನಿಧಾನದಿಂದ ಕೂಡಿದ ಉಮಾತುಂಗವೆಂಬ ಮತ್ತೊಂದು ತೀರ್ಥವು ಪ್ರಸಿದ್ಧವಾಗಿದೆ. ಅಲ್ಲಿ ಮಹೇಶ್ವರನನ್ನು ಆರಾಧಿಸಿದರೆ ಸಹಸ್ರ ಗೋದಾನ ಮಾಡಿದ ಫಲವನ್ನು ಹೊಂದುವನು.

ಭೃಗುತುಂಗೇ ತಪಸ್ತಪ್ತಂ ಶ್ರಾದ್ಧಂ ದಾನಂ ತಥಾಕೃತಮ್ ।
ಕುಲಾನ್ಯುಭಯತಃ ಸಪ್ತ ಪುನಾತೀತಿ ಮತಿರ್ಮಮ ॥ ೩೫ ॥

ಕಾಶ್ಯಪಸ್ಯ ಮಹಾತೀರ್ಥಂ ಕಾಲಸರ್ಪಿರಿತಿ ಶ್ರುತಮ್ ।
ತತ್ರ ಶ್ರಾದ್ಧಾನಿ ದೇಯಾನಿ ನಿತ್ಯಂ ಪಾಪಕ್ಷಯೇಚ್ಛಯಾ ॥ ೩೬ ॥

ದಶಾರ್ಣಾಯಾಂ ತಥಾ ದಾನಂ ಶ್ರಾದ್ಧಂ ಹೋಮಂ ತಪೋ ಜಪಃ ।
ಅಕ್ಷಯಂ ಚಾವ್ಯಯಂ ಚೈವ ಕೃತಂ ಭವತಿ ಸರ್ವದಾ ॥ ೩೭ ॥

ತೀರ್ಥಂ ದ್ವಿಜಾತಿಭಿರ್ಜುಷ್ಟಂ ನಾಮ್ನಾ ವೈ ಕುರುಜಾಂಗಲಮ್ ।
ದತ್ವಾ ತು ದಾನಂ ವಿಧಿವದ್ಬ್ರಹ್ಮಲೋಕೇ ಮಹೀಯತೇ ॥ ೩೮ ॥

---

೩೫. ಭೃಗುತುಂಗವೆಂಬ ಪುಣ್ಯಕ್ಷೇತ್ರದಲ್ಲಿ ಆಚರಿಸಿದ ತಪಸ್ಸು, ಶ್ರಾದ್ಧ, ದಾನ-ಮುಂತಾದ ಸತ್ಕರ್ಮಗಳು ಮಾತಾ-ಪಿತೃಗಳ ಎರಡು ವಂಶಗಳಲ್ಲಿ ಸಪ್ತಪುರುಷರನ್ನು ಉದ್ಧಾರಮಾಡುವುವು. ಎಂದು ನನ್ನ ಭಾವವು.

೩೬. ಕಾಲಸರ್ಪಿ ತೀರ್ಥವೆಂದು ಲೋಕದಲ್ಲಿ ಪ್ರಸಿದ್ಧವಾದ ಕಾಶ್ಯಪಮುನಿಯ ತೀರ್ಥವು ಒಂದು ಉತ್ತಮತೀರ್ಥವಾಗಿದೆ. ಪಾಪಗಳು ನಿವಾರಣೆಯಾಗಬೇಕೆಂಬ ಇಚ್ಛೆಯಿಂದ ಆ ಕಾಲಸರ್ಪಿತೀರ್ಥದಲ್ಲಿ ನಿತ್ಯದಲ್ಲಿಯೂ ಶ್ರಾದ್ಧದಾನವನ್ನು ಮಾಡಬೇಕು.

೩೭. ದಶಾರ್ಣನದಿ ಎಂಬ ಪ್ರಶಸ್ತತೀರ್ಥದಲ್ಲಿ ಮಾಡಿದ ದಾನ-ಶ್ರಾದ್ಧ-ಹೋಮ-ತಪಸ್ಸು ಮತ್ತು ಜಪ ಮುಂತಾದ ಸತ್ಕರ್ಮಾನುಷ್ಠಾನವು ಅಕ್ಷಯವೂ ಶಾಶ್ವತವೂ ಆದ ಫಲದಾಯಕವಾಗುವುದು.

೩೮. ಕುರುಜಾಂಗಲ ತೀರ್ಥವೆಂದು ನಾಮಾಂಕನದಿಂದ ಪ್ರಸಿದ್ಧವಾದ ತೀರ್ಥವು ಅನೇಕ ದ್ವಿಜರಿಂದ ಸೇವಿಸಲ್ಪಟ್ಟಿದೆ. ಆ ತೀರ್ಥಸನ್ನಿಧಿಯಲ್ಲಿ ವಿಧಿವತ್ತಾಗಿ ಮಾಡಿದ ದಾನದಿಂದ ಬ್ರಹ್ಮಲೋಕದಲ್ಲಿ ಮಾನ್ಯನಾಗುತ್ತಾನೆ.

ವೈತರಣ್ಯಾಂ ಮಹಾತೀರ್ಥೇ ಸ್ವರ್ಣವೇದ್ಯಾಂ ತಥೈವ ಚ ।
ಧರ್ಮಪೃಷ್ಠೇ ಚ ಶಿರಸಿ ಬ್ರಹ್ಮಣಃ ಪರಮೇ ಶುಭೇ ॥ ೩೯ ॥

ಭರತಸ್ಯಾಶ್ರಮೇ ಪುಣ್ಯೇ ಪುಣ್ಯೇ ಗೃಧ್ರವನೇ ಶುಭೇ ।
ಮಹಾಹ್ರದೇ ಚ ಕೌಶಿಕ್ಯಾಂ ದತ್ತಂ ಭವತಿ ಚಾಕ್ಷಯಮ್ ॥ ೪೦ ॥

ಮುಂಡಪೃಷ್ಠೇ ಪದಂ ನ್ಯಸ್ತಂ ಮಹಾದೇವೇನ ಧೀಮತಾ ।
ಹಿತಾಯ ಸರ್ವಭೂತಾನಾಂ ನಾಸ್ತಿಕಾನಾಂ ನಿದರ್ಶನಮ್ ॥ ೪೧ ॥

ಅಲ್ಪೇನಾಪಿ ತು ಕಾಲೇನ ನರೋ ಧರ್ಮಪರಾಯಣಃ ।
ಪಾಪ್ಮಾನಮುತ್ಸೃಜತ್ಯಾಶು ಜೀರ್ಣಾಂ ತ್ವಚಮಿವೋರಗಃ ॥ ೪೨ ॥

---

೩೯. ವೈತರಣಿ ಎಂಬ ಮಹಾತೀರ್ಥದಲ್ಲಿಯೂ, ಸ್ವರ್ಣದೇವಿ ಎಂಬ ಪವಿತ್ರ ತೀರ್ಥದಲ್ಲಿಯೂ, ಧರ್ಮಪೃಷ್ಠ ಎಂಬ ಉತ್ತಮಕ್ಷೇತ್ರದಲ್ಲಿಯೂ ಮತ್ತು ಶುಭಕರವೂ ಸರ್ವೋತ್ತಮವೂ ಆದ ಬ್ರಹ್ಮಕಪಾಲದಲ್ಲಿಯೂ ಮಾಡಿದ ಪುಣ್ಯಕರ್ಮವು ಅನಂತ ವಾಗುವುದು.

೪೦. ಹಾಗು ಪವಿತ್ರವಾದ ಭರತಮುನಿಯ ಆಶ್ರಮದಲ್ಲಿಯೂ ಪುಣ್ಯವಾದ ಗೃಧ್ರವನ ಕ್ಷೇತ್ರದಲ್ಲಿಯೂ, ಕೌಶಿಕೀನದಿಯ ಪಾವನವಾದ ಮಹಾಹ್ರದದಲ್ಲಿಯೂ ದತ್ತವಾದ ದಾನವು ಅಕ್ಷಯವಾದ ಫಲವನ್ನು ಕೊಡುವುದು.

೪೧. ಮುಂಡಮಯವಾದ ಶಿಲೆಯ ಪೃಷ್ಠಭಾಗದಲ್ಲಿ ಸರ್ವಜ್ಞನಾದ ಮಹೇಶ್ವರನಿಂದ ತನ್ನ ಪಾದವು ಇರಿಸಲ್ಪಟ್ಟಿದೆ. ಆ ಸ್ಥಳವು ಸರ್ವಪ್ರಾಣಿಗಳಿಗೆ ಹಿತಕರವೂ ಮತ್ತು ನಾಸ್ತಿಕರಿಗೆ ಆಸ್ತಿಕ್ಯವನ್ನು ಉಂಟುಮಾಡುವ ನಿದರ್ಶನವೂ ಆಗಿದೆ.

೪೨. ಮಾನವನು ಅತ್ಯಲ್ಪವಾದ ಕಾಲದಲ್ಲಿಯಾದರೂ ಧರ್ಮಾನುಷ್ಠಾನ ತತ್ಪರನಾದರೆ ತನ್ನ ಪಾಪಪುಂಜವನ್ನು ಸರ್ಪವು ತನ್ನ ಜೀರ್ಣವಾದ ಪರೆಯನ್ನು ಬಿಟ್ಟಂತೆ ಬಿಟ್ಟುಬಿಡುವನು.

ನಾಮ್ನಾ ಕನಕನಂದೇತಿ ತೀರ್ಥಂ ತ್ರೈಲೋಕ್ಯವಿಶ್ರುತಮ್ ।
ಉದೀಚ್ಯಾಂ ಬ್ರಹ್ಮಪೃಷ್ಠಸ್ಯ ಬ್ರಹ್ಮರ್ಷಿಗಣಸೇವಿತಮ್ ॥ ೪೩ ॥

ತತ್ರ ಸ್ನಾತ್ವಾ ದಿವಂ ಯಾಂತಿ ಸಶರೀರಾ ದ್ವಿಜಾತಯಃ ।
ದತ್ತಂ ಚಾಪಿ ಸದಾ ಶ್ರಾದ್ಧಮಕ್ಷಯಂ ಸಮುದಾಹೃತಮ್ ॥ ೪೪ ॥

ಋಣೈಸ್ತ್ರಿಭಿರ್ನರಃ ಸ್ನಾತ್ವಾ ಮುಚ್ಯತೇ ಕ್ಷೀಣಕಲ್ಮಷಃ ॥ ೪೫ ॥

ಮಾನಸೇ ಸರಸಿ ಸ್ನಾತ್ವಾ ಶಕ್ರಸ್ಯಾರ್ಧಾಸನಂ ಲಭೇತ್ ।
ಉತ್ತರಂ ಮಾನಸಂ ಗತ್ವಾ ಸಿದ್ಧಿಂ ಪ್ರಾಪ್ನೋತ್ಯನುತ್ತಮಾಮ್ ॥ ೪೬ ॥

---

೪೩. ಬ್ರಹ್ಮಪೃಷ್ಠಕ್ಷೇತ್ರದ ಉತ್ತರ ದಿಕ್ಕಿನಲ್ಲಿ ಅನೇಕ ಬ್ರಹ್ಮರ್ಷಿಗಳಿಂದ ಸೇವಿಸಲ್ಪಟ್ಟಿರುವುದೂ ಮತ್ತು ಮೂರು ಲೋಕಗಳಲ್ಲಿ ಪ್ರಖ್ಯಾತಿಹೊಂದಿರುವುದೂ ಆದ ಕನಕನಂದಾ ಎಂಬ ನಾಮಾಂಕಿತವಾದ ತೀರ್ಥವು ಇರುವುದು.

೪೪. ಕನಕನಂದಾ ತೀರ್ಥದಲ್ಲಿ ಸ್ನಾನಮಾಡಿ ದ್ವಿಜರು ಶರೀರಸಹಿತರಾಗಿ ಸ್ವರ್ಗ ಲೋಕಕ್ಕೆ ಹೋಗುವರು. ಮತ್ತು ಆ ತೀರ್ಥದಲ್ಲಿ ಪಿತೃಗಳಿಗೆ ಕೊಟ್ಟ ಶ್ರಾದ್ಧಕವ್ಯವು ಯಾವಾಗಲೂ ಅಕ್ಷಯವಾಗುವುದೆಂದು ಹೇಳಲ್ಪಟ್ಟಿದೆ.

೪೫. ಮತ್ತು ಕನಕನಂದಾ ತೀರ್ಥಸ್ನಾನದ ಪುಣ್ಯಪ್ರಭಾವದಿಂದ ಮೂರು ಋಣಗಳಿಂದಲೂ ಸಮಸ್ತ ಕಲ್ಮಷಗಳಿಂದಲೂ ಮುಕ್ತನಾಗುತ್ತಾನೆ.

೪೬. ಮಾನಸಸರೋವರವೆಂಬ ಪುಣ್ಯತೀರ್ಥದಲ್ಲಿ ಸ್ನಾನಮಾಡಿ ಇಂದ್ರನ ಅರ್ಧಾಸನವನ್ನು ಹೊಂದುತ್ತಾನೆ. ಉತ್ತರ ಮಾನಸ ತೀರ್ಥದಲ್ಲಿ ಯಾತ್ರಾ ವಿಧಿಯನ್ನು ನೆರವೇರಿಸಿದವನು. ಉತ್ತಮವಾದ ಸಿದ್ಧಿಯನ್ನು ಹೊಂದುವನು.

ತಸ್ಮಾನ್ನಿರ್ವರ್ತಯೇಚ್ಛ್ರಾದ್ಧಂ ಯಥಾಶಕ್ತಿ ಯಥಾಬಲಮ್ ।
ಸ ಕಾಮಾನ್ ಲಭತೇ ದಿವ್ಯಾನ್ ಮೋಕ್ಷೋಪಾಯಂ ಚ ವಿಂದತಿ ॥

ಪರ್ವತೋ ಹಿಮವಾನ್ ನಾಮ ನಾನಾಧಾತುವಿಭೂಷಿತಃ ।
ಯೋಜನಾನಾಂ ಸಹಸ್ರಾಣಿ ಸಾಶೀತಿಸ್ತ್ವಾಯತೋ ಗಿರಿಃ ॥ ೪೮ ॥

ಸಿದ್ಧಚಾರಣಸಂಕೀರ್ಣೋ ದೇವರ್ಷಿಗಣಸೇವಿತಃ ॥ ೪೯ ॥

ತತ್ರ ಪುಷ್ಕರಿಣೀ ರಮ್ಯಾ ಸುಷುಮ್ನಾ ನಾಮ ನಾಮತಃ ।
ತತ್ರ ಗತ್ವಾ ದ್ವಿಜೋ ವಿದ್ವಾನ್ ಬ್ರಹ್ಮಹತ್ಯಾಂ ವಿಮುಂಚತಿ ॥ ೫೦ ॥

---

೪೭. ಆದುದರಿಂದ ತನ್ನ ಶಕ್ತಿ ಮತ್ತು ದೇಹಬಲಗಳನ್ನು ಅನುಸರಿಸಿ ಶ್ರಾದ್ಧಾದಿಕರ್ಮಗಳನ್ನು ನೆರವೇರಿಸಬೇಕು. ಅದರಿಂದ ದಿವ್ಯವಾದ ಕಾಮಫಲವನ್ನು ಹೊಂದಿ ಮುಕ್ತಿಯ ಉಪಾಯವನ್ನು ಹೊಂದುವನು.

೪೮. ಅನೇಕ ಗೈರಿಕ ಮುಂತಾದ ಧಾತುಗಳಿಂದ ಶೋಭಿಸಲ್ಪಟ್ಟ ಹಿಮಾಲಯವೆಂಬ ಪರ್ವತವು ಪವಿತ್ರವಾದುದು. ಆ ಗಿರಿಯು ಸಹಸ್ರ ಅಶೀತಿ ಯೋಜನ ಪರಿಮಾಣದಷ್ಟು ದೀರ್ಘವಾಗಿರುವುದು.

೪೯. ಮತ್ತು ಆ ಪರ್ವತವು ಸಿದ್ಧರಿಂದಲೂ, ದೇವತೆಗಳಿಂದಲೂ ಹಾಗು ಋಷಿಗಳ ಸಂಘದಿಂದಲೂ ಆಶ್ರಯಿಸಲ್ಪಟ್ಟ ಪುಣ್ಯಭೂಮಿಯಾಗಿರುವುದು.

೫೦. ಅಲ್ಲಿ ಸುಷುಮ್ನಾ ಎಂಬ ನಾಮಾಂಕನವುಳ್ಳ ದಿವ್ಯವಾದ ಒಂದು ಪುಷ್ಕರಿಣೀ ತೀರ್ಥವು ಇರುವುದು. ಜ್ಞಾನಿಯಾದ ನರನು ಆ ತೀರ್ಥವನ್ನು ಸೇವಿಸಿ ಪುಣ್ಯ ಪ್ರಭಾವದಿಂದ ಬ್ರಹ್ಮಹತ್ಯಾಪಾತಕವನ್ನು ಕಳೆದುಕೊಳ್ಳುತ್ತಾನೆ.

ಶ್ರಾದ್ಧಂ ಭವತಿ ಚಾಕ್ಷಯ್ಯಂ ತತ್ರ ದತ್ತಂ ಮಹೋದಯಮ್ ।
ತಾರಯೇಚ್ಚ ಪಿತೄನ್ ಸಮ್ಯಗ್ದಶ ಪೂರ್ವಾನ್ ದಶಾಪರಾನ್ ॥ ೫೧ ॥

ಪರ್ವತ್ರ ಹಿಮವಾನ್ ಪುಣ್ಯೋ ಗಂಗಾ ಪುಣ್ಯಾ ಸಮಂತತಃ ।
ನದ್ಯಃ ಸಮುದ್ರಗಾಃ ಪುಣ್ಯಾಃ ಸಮುದ್ರಶ್ಚ ವಿಶೇಷತಃ ॥ ೫೨ ॥

ಬದರ್ಯಾಶ್ರಮಮಾಸಾದ್ಯ ಮುಚ್ಯತೇ ಸರ್ವಕಿಲ್ಬಿಷಾತ್ ।
ತತ್ರ ನಾರಾಯಣೋ ದೇವೋ ನರೇಣಾಸ್ತೇ ಸನಾತನಃ ॥ ೫೩ ॥

ಅಕ್ಷಯಂ ತತ್ರ ದಾನಂ ಸ್ಯಾಚ್ಛ್ರಾದ್ಧದಾನಾದಿಕಂ ಚ ಯತ್ ।
ಮಹಾದೇವಪ್ರಿಯಂ ತೀರ್ಥಂ ಪಾವನಂ ತದ್ವಿಶೇಷತಃ ॥ ೫೪ ॥

---

೫೧. ಆ ತೀರ್ಥಸನ್ನಿಧಿಯಲ್ಲಿ ಕೊಟ್ಟ ಶ್ರಾದ್ಧಕವ್ಯವು ಮಹತ್ತಾದ ಉದಯವುಳ್ಳದ್ದೂ ಮತ್ತು ಅಕ್ಷಯವೂ ಆಗುತ್ತದೆ. ಮತ್ತು ತನ್ನ ವಂಶದಲ್ಲಿ ಕಳೆದ ಹತ್ತು ಮಂದಿಯನ್ನೂ ಮುಂದಿನ ಹತ್ತುಮಂದಿಯನ್ನೂ ಉದ್ಧಾರಮಾಡುವುದು.

೫೨. ಹಿಮಾಲಯ ಪರ್ವತವು ತನ್ನ ಸಮಸ್ತಪ್ರದೇಶ ಭಾಗಗಳಲ್ಲಿಯೂ ಪವಿತ್ರವಾದುದು. ಗಂಗಾನದಿಯು ಎಲ್ಲೆಡೆಗಳಲ್ಲಿಯೂ ಪವಿತ್ರವಾದುದು. ಸಮುದ್ರದವರೆಗೆ ಪ್ರವಹಿಸುವ ನದಿಗಳು ಪವಿತ್ರವಾದುವು ಹಾಗೂ ಸಮುದ್ರವು ಅತಿಶಯವಾಗಿ ಪವಿತ್ರವಾಗಿರುವುದು.

೫೩. ಬದರೀ ಆಶ್ರಮವೆಂಬ ಪುಣ್ಯಕ್ಷೇತ್ರಾಟನೆಯಿಂದ ಸರ್ವಪಾಪ ಸಂಪರ್ಕದಿಂದ ಮುಕ್ತನಾಗುತ್ತಾನೆ. ಆ ಕ್ಷೇತ್ರದಲ್ಲಿ ಪುರಾಣಪುರುಷನಾದ ವಿಷ್ಣುವು ನಾರಾಯಣ ಮುನಿರೂಪದಿಂದ ನರ ಎಂಬ ಮುನಿಯೊಡನೆ ವಾಸಮಾಡಿದ್ದಾನೆ.

೫೪. ಅಲ್ಲಿ ನೆರವೇರಿಸಿದ ದಾನಧರ್ಮವು ಮತ್ತು ಶ್ರಾದ್ಧಕರ್ಮವು ಅಕ್ಷಯವಾದ ಫಲವನ್ನು ಕೊಡುವುದಾಗಿದೆ, ಮಹಾದೇವನಿಗೆ ಪ್ರೀತಿಯನ್ನುಂಟುಮಾಡುವ ತೀರ್ಥವು ವಿಶೇಷ ಪಾವನವಾಗಿದೆ.

ತಾರಯೇಚ್ಚ ಪಿತೄನ್ ಸರ್ವಾನ್ ದತ್ವಾ ಶ್ರಾದ್ಧಂ ಸಮಾಹಿತಃ ॥೫೫॥

ದೇವದಾರುವನಂ ಪುಣ್ಯಂ ಸಿದ್ಧಗಂಧರ್ವಸೇವಿತಮ್ ।
ಮಹತಾ ದೇವದೇವೇನ ತತ್ರ ದತ್ತಂ ಮಹೇಶ್ವರಮ್ ॥ ೫೬ ॥

ಮೋಹಯಿತ್ವಾ ಮುನೀನ್ ಸರ್ವಾನ್ ಸಮಸ್ತೈಃ ಸಂಪ್ರಪೂಜಿತಃ ।
ಪ್ರಸನ್ನೋ ಭಗವಾನೀಶೋ ಮುನೀಂದ್ರಾನ್ ಪ್ರಾಹ ಭಾವಿತಾನ್॥೫೭॥

ಇಹಾಶ್ರಮವರೇ ರಮ್ಯೇ ನಿವಸಿಷ್ಯಥ ಸರ್ವದಾ ।
ಮದ್ಭಾವನಾಸಮಾಯುಕ್ತಾಸ್ತತಃ ಸಿದ್ಧಿಮವಾಪ್ಸ್ಯಥ ॥ ೫೮ ॥

---

೫೫. ಅಲ್ಲಿ ಚಿತ್ತ ಸಮಾಧಾನದಿಂದ ಕೂಡಿ ಪಿತೃಗಳ ಉದ್ದೇಶದಿಂದ ಶ್ರಾದ್ಧವನ್ನು ಮಾಡಿ ತನ್ನ ಸಮಸ್ತ ಪಿತೃಗಳನ್ನು ತಾರಣ ಮಾಡುವನು.

೫೬. ಮತ್ತೊಂದು ದೇವದಾರು ವನವೆಂಬ ಪ್ರಸಿದ್ಧಕ್ಷೇತ್ರವಿದೆ. ಅದು ಸಿದ್ಧ-ಗಂಧರ್ವರಿಂದ ಸೇವಿಸಲ್ಪಟ್ಟಿದೆ, ಅಲ್ಲಿ ಮಹಾತ್ಮನೂ, ದೇವೋತ್ತಮನೂ ಆದ ಈಶ್ವರನಿಂದ ಮಹೇಶ್ವರ ತೀರ್ಥವು ನಿರ್ಮಿತವಾಗಿದೆ.

೫೭. ಅಲ್ಲಿ ಈಶ್ವರನು ಸಮಸ್ತ ಮುನಿಜನರನ್ನು ಮೋಹಗೊಳಿಸಿ ಅವರೆಲ್ಲರಿಂದಲೂ ಪೂಜಿಸಲ್ಪಟ್ಟಿರುವನು, ಮಹೇಶ್ವರನಲ್ಲಿ ಭಕ್ತಿಭಾವನೆಯಿಂದ ಕೂಡಿದ ಮುನೀಂದ್ರರಲ್ಲಿ ಪ್ರಸನ್ನನಾಗಿರುವ ಪೂಜ್ಯನಾದ ಶಿವನು ಈ ವಚನವನ್ನು ಹೇಳಿದನು

೫೮. ಈ ದೇವದಾರು ವನದಲ್ಲಿರುವ ರಮ್ಯವಾದ ಉತ್ತಮಾಶ್ರಮದಲ್ಲಿ ಯಾವಾಗಲೂ ನೀವು ವಾಸಮಾಡಿರಿ, ಅದರಿಂದ ನನ್ನಲ್ಲಿ ಭಕ್ತಿ ಭಾವನೆಯಿಂದ ಕೂಡಿದವರಾಗಿ ನೀವು ಸಿದ್ಧಿಯನ್ನು ಹೊಂದುತ್ತೀರಿ.

ಯತ್ರ ಮಾಮರ್ಚಯಂತೀಹ ಲೋಕೇ ಧರ್ಮಪರಾಯಣಾಃ ।
ತೇಷಾಂ ದದಾಮಿ ಪರಮಂ ಗಾಣಪತ್ಯಂ ಹಿ ಶಾಶ್ವತಮ್ ॥ ೫೯ ॥

ಅತ್ರ ನಿತ್ಯಂ ವಸಿಷ್ಯಾಮಿ ಸಹ ನಾರಾಯಣೇನ ತು ।
ಪ್ರಾಣಾನಿಹ ನರಸ್ತ್ಯಕ್ತ್ವಾ ನ ಭೂಯೋ ಜನ್ಮ ಚಾಪ್ನುಯಾತ್ ॥ ೬೦॥

ಸಂಸ್ಮರಂತಿ ಚ ಯೇ ತೀರ್ಥಂ ದೇಶಾಂತರಗತಾ ಜನಾಃ ।
ತೇಷಾಂ ಚ ಸರ್ವಪಾಪಾನಿ ನಾಶಯಾಮಿ ದ್ವಿಜೋತ್ತಮಾಃ ॥ ೬೧ ॥

ಶ್ರಾದ್ಧಂ ದಾನಂ ತಪೋ ಹೋಮಃ ಪಿಂಡನಿರ್ವಪಣಂ ತಥಾ ।
ಧ್ಯಾನಂ ಜಪಶ್ಚ ನಿಯಮಃ ಸರ್ವಮತ್ರಾಕ್ಷಯಂ ಕೃತಮ್ ॥ ೬೨ ॥

---

೫೯. ಪ್ರಪಂಚದಲ್ಲಿ ಧರ್ಮಪರಾಯಣರು ಯಾವ ಕ್ಷೇತ್ರದಲ್ಲಿ ನನ್ನನ್ನು ಅರ್ಚಿಸಿದರೂ ಅವರಿಗೆ ಪ್ರಸನ್ನನಾದ ನಾನು ಶಾಶ್ವತವಾದ ಗಣಾಧಿಪತ್ಯ ಫಲವನ್ನು ಅನುಗ್ರಹಿಸುತ್ತೇನೆ.

೬೦. ಈ ಪವಿತ್ರವನದಲ್ಲಿ ಶ್ರೀಮನ್ನಾರಾಯಣನೊಂದಿಗೆ ನಾನು ನಿತ್ಯದಲ್ಲಿ ವಾಸಮಾಡುತ್ತೇನೆ. ಇಲ್ಲಿ ಪ್ರಾಣಗಳನ್ನು ಪರಿತ್ಯಾಗಮಾಡಿದ ನರನು ಮತ್ತೆ ಜನ್ಮ ದುಃಖವನ್ನು ಹೊಂದುವುದಿಲ್ಲ.

೬೧. ದ್ವಿಜಶ್ರೇಷ್ಠರೆ! ದೇಶಾಂತರದಲ್ಲಿ ವಾಸಮಾಡುವ ಯಾವ ಜನರು ಈ ತೀರ್ಥವನ್ನು ಸ್ಮರಿಸುವರೋ ; ಅವರ ಸಮಸ್ತ ವಿಧವಾದ ಪಾತಕಗಳನ್ನು ನಾಶ ಮಾಡುತ್ತೇನೆ.

೬೨. ಈ ತೀರ್ಥದಲ್ಲಿ ಮಾಡಿದ ಸ್ನಾನ, ಶ್ರಾದ್ಧ, ದಾನ, ತಪಸ್ಸು, ಹೋಮ ಪಿಂಡನಿರ್ವಾಪ, ಧ್ಯಾನ, ಜಪ ಮತ್ತು ನಿಯಮಗಳೆಂಬ ಸಮಸ್ತ ಸತ್ಕರ್ಮಗಳು ಅಕ್ಷಯ ಫಲವನ್ನು ಕೊಡುವುವು.

ತಸ್ಮಾತ್ ಸರ್ವಪ್ರಯತ್ನೇನ ದ್ರಷ್ಟವ್ಯಂ ಹಿ ದ್ವಿಜಾತಿಭಿಃ ।
ದೇವದಾರುವನಂ ಪುಣ್ಯಂ ಮಹಾದೇವನಿಷೇವಿತಮ್ ॥ ೬೩ ॥

ಯತ್ರೇಶ್ವರೋ ಮಹಾದೇವೋ ವಿಷ್ಣುರ್ವಾ ಪುರುಷೋತ್ತಮಃ ।
ತತ್ರ ಸನ್ನಿಹಿತಾ ಗಂಗಾ ತೀರ್ಥಾನ್ಯಾಯತನಾನಿ ಚ ॥ ೬೪ ॥

ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇ ನವತಿತಮೋಽಧ್ಯಾಯಃ.

---

೬೩. ಆದುದರಿಂದ ದ್ವಿಜಾತಿಗಳಾದವರಿಂದ ಮಹಾದೇವನಿಂದ ಸೇವಿಸಲ್ಪಟ್ಟಿರುವ ಪವಿತ್ರಕ್ಷೇತ್ರವಾದ ಈ ದೇವದಾರುವನವು ಸರ್ವವಿಧ ಪ್ರಯತ್ನಗಳನ್ನಾದರೂ ಮಾಡಿ ಸೇವಿಸಲ್ಪಡಬೇಕು.

೬೪. ಸಾಮಾನ್ಯವಾಗಿ ಯಾವ ಪ್ರದೇಶದಲ್ಲಿ ದೇವೋತ್ತಮನಾದ ಪರಮೇಶ್ವರನೂ ಪುರುಷೋತ್ತಮನಾದ ವಿಷ್ಣುವೂ ವಾಸಮಾಡುವರೋ ಅಲ್ಲಿ ಪವಿತ್ರವಾದ ಗಂಗಾ ನದಿಯೂ ಪುಣ್ಯತೀರ್ಥಗಳೂ ಮತ್ತು ಪವಿತ್ರ ದೇವಾಲಯಗಳೂ ಸನ್ನಿಹಿತವಾಗಿರುವಂತೆ ಭಾವಿಸಬೇಕು.

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ತೊಂಭತ್ತನೆಯ ಅಧ್ಯಾಯವು
ಮುಗಿದುದು

---

॥ ಶ್ರೀಃ ॥

# ಕೂರ್ಮಪುರಾಣಂ

---

## ಏಕನವತಿತಮೋಽಧ್ಯಾಯಃ.

**ಋಷಯ ಊಚುಃ :—**

**ಕಥಂ ದಾರುವನಂ ಪ್ರಾಪ್ತೋ ಭಗವಾನ್ ಗೋವೃಷಧ್ವಜಃ ।**
**ಮೋಹಯಾಮಾಸ ವಿಪ್ರೇಂದ್ರಾನ್ ಸೂತ ತದ್ವಕ್ತುಮರ್ಹಸಿ ॥ ೧ ॥**

**ಸೂತ ಉವಾಚ :—**

**ಪುರಾ ದಾರುವನೇ ರಮ್ಯೇ ದೇವಸಿದ್ಧನಿಷೇವಿತೇ ।**
**ಸಪುತ್ರದಾರತನಯಾಸ್ತಪಶ್ಚೇರುಃ ಸಹಸ್ರಶಃ ॥ ೨ ॥**

---

## ತೊಂಭತ್ತೊಂದನೆಯ ಅಧ್ಯಾಯವು

೧. ಮಹರ್ಷಿಗಳು ಇಂತೆಂದರು:— ಸೂತಮುನಿಯೆ ! ಷಡ್ಗುಣೈಶ್ವರ್ಯಸಂಪನ್ನನೂ, ವೃಷಭಚಿಹ್ನದಿಂದ ಅಲಂಕರಿಸಲ್ಪಟ್ಟ ಧ್ವಜವುಳ್ಳವನೂ ಆದ ಈಶ್ವರನು ದೇವದಾರುವನಕ್ಕೆ ಬಂದು ಮುನಿಜನರನ್ನು ಹೇಗೆ ಮೋಹಗೊಳಿಸಿದನೊ; ಅದನ್ನು ಹೇಳಲು ಅರ್ಹನಾಗಿದ್ದೀಯೆ.

೨. ಸೂತಮುನಿಯು ಹೀಗೆಂದನು:— ಪೂರ್ವಕಾಲದಲ್ಲಿ ದೇವತೆಗಳಿಂದಲೂ ಸಿದ್ಧರಿಂದಲೂ ಸೇವಿಸಲ್ಪಟ್ಟ ರಮಣೀಯವಾದ ದೇವದಾರುವನದಲ್ಲಿ ಪುತ್ರಕಳತ್ರಗಳಿಂದ ಕೂಡಿ ಸಾವಿರಾರುಮಂದಿ ತಪಸ್ವಿಗಳು ತಪವನ್ನು ಆಚರಿಸಿದರು.

ಪ್ರವೃತ್ತಂ ವಿವಿಧಂ ಕರ್ಮ ಪ್ರಕುರ್ವಾಣಾ ಯಥಾವಿಧಿ ।
ಯಜಂತಿ ವಿವಿಧೈರ್ಯಜ್ಞೈಸ್ತಪಂತಿ ಚ ಮಹರ್ಷಯಃ ॥ ೩ ॥

ತೇಷಾಂ ಪ್ರವೃತ್ತಿವಿನ್ಯಸ್ತಚೇತಸಾಮಥ ಶೂಲಭೃತ್ ।
ವ್ಯಾಖ್ಯಾಪಯನ್ ಸದಾ ದೋಷಂ ಯಯೌ ದಾರುವನಂ ಹರಃ ॥ ೪ ॥

ಕೃತ್ವಾ ವಿಶ್ವಗುರುಂ ವಿಷ್ಣುಂ ಪಾರ್ಶ್ವೇ ದೇವೋ ಮಹೇಶ್ವರಃ ।
ಯಯೌ ನಿವೃತ್ತವಿಜ್ಞಾನಸ್ಥಾಪನಾರ್ಥಂ ಚ ಶಂಕರಃ ॥ ೫ ॥

ಆಸ್ಥಾಯ ವಿಪುಲಂ ವೇಷಂ ಜನಂ ವಿಂಶತಿವತ್ಸರಮ್ ।
ಲೀಲಾಲಸೋ ಮಹಾಬಾಹುಃ ಪೀನಾಂಗಶ್ಚಾರುಲೋಚನಃ ॥ ೬ ॥

---

೩. ಮಹರ್ಷಿಗಳು ಅನೇಕವಿಧವಾದ ಪ್ರವೃತ್ತಿಮಾರ್ಗದ ಕರ್ಮವನ್ನು ಯಥಾವಿಧಿಯಾಗಿ ಮಾಡುತ್ತ ನಾನಾವಿಧವಾದ ಯಜ್ಞಗಳನ್ನೂ ತಪಶ್ಚರ್ಯೆಯನ್ನೂ ಮಾಡುತ್ತಿರುವರು.

೪. ತರುವಾಯ ತ್ರಿಶೂಲಧರನಾದ ಮಹೇಶ್ವರನು ಪ್ರವೃತ್ತಿಮಾರ್ಗದಲ್ಲಿ ಆಸಕ್ತವಾದ ಮಾನಸವುಳ್ಳ ಆ ಮಹರ್ಷಿಗಳಿಗೆ ನಿರಂತರವಾದ ದೋಷವನ್ನು ತೋರ್ಪಡಿಸಲೋಸ್ಕರ ದಾರುವನವನ್ನು ಪ್ರವೇಶಮಾಡಿದನು.

೫. ಮಹೇಶ್ವರನೂ, ಲೋಕಕ್ಕೆ ಸುಖಕರನೂ ಆದ ಪರಮೇಶ್ವರನು ಜಗತ್ತಿಗೆ ಗುರುವಾದ ವಿಷ್ಣುವನ್ನು ತನ್ನ ಪಾರ್ಶ್ವದಲ್ಲಿ ಕರೆದುಕೊಂಡು ನಿವೃತ್ತಿಧರ್ಮವಾದ ವಿಜ್ಞಾನವನ್ನು ಸ್ಥಾಪನಮಾಡುವುದಕ್ಕೋಸ್ಕರ ಪ್ರವೇಶಮಾಡಿದನು.

೬. ಆಗ ಬಹಳ ವಿಸ್ತಾರವೂ ಸುಮಾರು ಇಪ್ಪತ್ತು ವರ್ಷಗಳಿಂದ ಕೂಡಿರುವುದೂ ಆದ ಸುಂದರವೇಶವನ್ನು ಸ್ವೀಕರಿಸಿ ಬಂದನು. ಆಸಮಯದಲ್ಲಿ ಈಶ್ವರನು ವಿಲಾಸಚೇಷ್ಟೆಗಳಿಂದ ಅಲಸನೂ, ಮಹತ್ತಾದ ಬಾಹುವುಳ್ಳವನೂ ಸ್ಥೂಲವಾದ ದೇಹವುಳ್ಳವನೂ ಮತ್ತು ಸುಂದರವಾದ ನೇತ್ರಗಳುಳ್ಳವನೂಆಗಿ ಕಾಣಿಸಿಕೊಂಡನು.

ಚಾಮೀಕರವಪುಃ ಶ್ರೀಮಾನ್ ಪೂರ್ಣಚಂದ್ರನಿಭಾನನಃ ।
ಮತ್ತಮಾತಂಗಗಮನೋ ದಿಗ್ವಾಸಾ ಜಗದೀಶ್ವರಃ ॥ ೭ ॥

ಜಾತರೂಪಮಯೀಂ ಮಾಲಾಂ ಸರ್ವರತ್ನೈರಲಂಕೃತಾಮ್ ।
ದಧಾನೋ ಭಗವಾನೀಶಃ ಸಮಾಗಚ್ಛತಿ ಸಸ್ಮಿತಃ ॥ ೮ ॥

ಯೋಽನಂತಃ ಪುರುಷೋ ಯೋನಿರ್ಲೋಕಾನಾಮವ್ಯಯೋ ಹರಿಃ ।
ಸ್ತ್ರೀವೇಷಂ ವಿಷ್ಣುರಾಸ್ಥಾಯ ಸೋಽನುಗಚ್ಛತಿ ಶೋಭನಮ್ ॥ ೯ ॥

ಸಂಪೂರ್ಣಚಂದ್ರವದನಂ ಪೀನೋನ್ನತ ಪಯೋಧರಮ್ ।
ಶುಚಿಸ್ಮಿತಂ ಸುಪ್ರಸನ್ನಂ ರಣನ್ನೂಪುರಕದ್ವಯಮ್ ॥ ೧೦ ॥

---

೭. ಮತ್ತು ಜಗದೀಶ್ವರನಾದ ಶಂಕರನು ಸುವರ್ಣದಂತೆ ಹೊಳೆಯುವ ದೇಹವುಳ್ಳವನೂ, ಕಾಂತಿಯುಕ್ತನೂ ಪೂರ್ಣಚಂದ್ರನಂತೊಪ್ಪುವ ಮುಖವುಳ್ಳವನೂ, ಮದಿಸಿದ ಆನೆಯಂತೆ ಮಂದಗಮನವುಳ್ಳವನೂ ಮತ್ತು ದಿಗಂಬರನೂ ಆಗಿದ್ದನು.

೮. ಷಡ್ಗುಣೈಶ್ವರ್ಯಸಂಪನ್ನನಾದ ಶಿವನು ಸರ್ವವಿಧರತ್ನಗಳಿಂದ ಅಲಂಕರಿಸಲ್ಪಟ್ಟ ಸುವರ್ಣಮಯವಾದ ಹಾರವನ್ನು ಧರಿಸಿಕೊಂಡು ಹಸನ್ಮುಖನಾಗಿ ಬರುತ್ತಲಿರುವನು.

೯. ಯಾವ ಹರಿಯು ಅಂತಶೂನ್ಯನೂ, ಪೂರ್ಣಾಕಾರನೂ, ಲೋಕಗಳಿಗೆ ಕಾರಣನೂ ಮತ್ತು ನಾಶರಹಿತನೂ ಆಗಿರುವನೋ; ಅಂತಹ ವಿಷ್ಣುವು ಸ್ತ್ರೀ ವೇಷವನ್ನು ಧರಿಸಿಕೊಂಡು ಮಂಗಳವಾಗಿ ಶಂಕರನನ್ನು ಹಿಂಬಾಲಿಸಿ ಬಂದನು.

೧೦. ಅಂತಹ ಸುಂದರವಾದ ಸ್ತ್ರೀರೂಪವು ಪೂರ್ಣಚಂದ್ರನಂತೆ ಶೋಭಿಸುವ ಮುಖವುಳ್ಳದ್ದೂ, ಸ್ಥೂಲ ಮತ್ತು ಉನ್ನತವಾದ ಸ್ತನಗಳುಳ್ಳದ್ದೂ ಶುಭ್ರವಾದ ಮಂದಹಾಸವುಳ್ಳದ್ದೂ, ಪ್ರಸನ್ನವಾದುದೂ ಮತ್ತು ಧ್ವನಿಮಾಡುವ ಗೆಜ್ಜೆಗಳನ್ನು ಧರಿಸಿರುವುದೂ ಆಗಿತ್ತು.

ಸುಪೀತವಸನಂ ದಿವ್ಯಂ ಶ್ಯಾಮಲಂ ಚಾರುಲೋಚನಮ್ ।
ಉದಾರಹಂಸಗಮನಂ ವಿಲಾಸಿ ಸುಮನೋಹರಮ್ ॥ ೧೧ ॥

ಏವಂ ಸ ಭಗವಾನೀಶೋ ದೇವದಾರುವನಂ ಹರಃ ।
ಚಚಾರ ಹರಿಣಾ ಸಾರ್ಧಂ ಮಾಯಯಾ ಮೋಹಯನ್ ಜಗತ್ ॥೧೨॥

ದೃಷ್ಟ್ವಾ ಚರಂತಂ ವಿಶ್ವೇಶಂ ತತ್ರ ತತ್ರ ಪಿನಾಕಿನಮ್ ।
ಮಾಯಯಾ ಮೋಹಿತಾ ನಾರ್ಯೋ ದೇವದೇವಂ ಸಮನ್ವಯುಃ॥೧೩॥

ವಿಸ್ರಸ್ತಾಭರಣಾಃ ಸರ್ವಾಸ್ತ್ಯಕ್ತ್ವಾ ಲಜ್ಜಾಂ ಪತಿವ್ರತಾಃ ।
ಸಹೈವ ತೇನ ಕಾಮಾರ್ತಾ ವಿಲಾಸಿನ್ಯಶ್ಚರಂತಿ ಹಿ ॥ ೧೪ ॥

---

೧೧. ಸುಂದರವಾದ ಪೀತಾಂಬರವನ್ನು ಧರಿಸಿದ, ದಿವ್ಯವಾದ, ಶ್ಯಾಮಲ ವರ್ಣವುಳ್ಳ, ಸುಂದರವಾದ ನೇತ್ರಗಳಿಂದ ಕೂಡಿದ, ಶ್ರೇಷ್ಠವಾದ ಹಂಸ ಪಕ್ಷಿಯಂತೆ ಗಮನವುಳ್ಳ, ವಿಲಾಸಗಳಿಂದ ತುಂಬಿದ ಮತ್ತು ಸುಂದರವಾದ ಸ್ತ್ರೀರೂಪವನ್ನು ವಿಷ್ಣುವು ಧರಿಸಿದ್ದನು.

೧೨. ಭಗವಂತನೂ, ಸರ್ವನಿಯಾಮಕನೂ ಆದ ಈಶ್ವರನು, ಮಾಯೆಯಿಂದ ಜಗತ್ತನ್ನು ಮೋಹಗೊಳಿಸುತ್ತ ಸ್ತ್ರೀ ರೂಪಧರನಾದ ವಿಷ್ಣುವಿನೊಡನೆ ದೇವದಾರು ವನದಲ್ಲಿ ಸಂಚಾರಮಾಡಿದನು.

೧೩. ದೇವಾಧಿದೇವನೂ, ಪಿನಾಕಾಯುಧವುಳ್ಳವನೂ ಮತ್ತು ಜಗತ್ತಿಗೆ ನಿಯಾಮಕನೂ ಆದ ಈಶ್ವರನು ಅಲ್ಲಲ್ಲಿ ಸಂಚರಿಸುತ್ತಿರುವುದನ್ನು ನೋಡಿ, ಮಾಯೆಯಿಂದ ಮುಗ್ಧರಾದ ಮುನಿಸ್ತ್ರೀಯರು ಅವನನ್ನು ಹಿಂಬಾಲಿಸಿದರು.

೧೪. ಸಮಸ್ತ ಪತಿವ್ರತಾಸ್ತ್ರೀಯರು ಕಾಮಪೀಡಿತರಾಗಿ ಲಜ್ಜೆಯನ್ನು ಬಿಟ್ಟು ಜಾರಿಹೋದ ಆಭರಣವುಳ್ಳವರೂ ಮತ್ತು ವಿಲಾಸವತಿಯರೂ ಆಗಿ ಈಶ್ವರನೊಡನೆ ಸಂಚರಿಸಲು ಆರಂಭಮಾಡಿದರು.

ಋಷೀಣಾಂ ಪುತ್ರಕಾ ಯೇ ಸ್ಯುರ್ಯುವಾನೋ ಜಿತಮಾನಸಾಃ ।
ಅನ್ವಾಗಮನ್ ಹೃಷೀಕೇಶಂ ಸರ್ವೇ ಕಾಮಪ್ರಪೀಡಿತಾಃ ॥ ೧೫ ॥

ಗಾಯಂತಿ ನೃತ್ಯಂತಿ ವಿಲಾಸಯುಕ್ತಾ
ನಾರೀಗಣಾ ನಾಯಕಮೇಕಮೀಶಮ್ ।
ದೃಷ್ಟ್ವಾ ಸಪತ್ನೀಕಮತೀವ ಕಾಂತ-
ಮಿಷ್ಟಂ ತಥಾಲಿಂಗಿತಮಾಚರಂತಿ ॥ ೧೬ ॥

ತೇ ಸನ್ನಿಪತ್ಯ ಸ್ಮಿತಮಾಚರಂತಿ
ಗಾಯಂತಿ ಗೀತಾನಿ ಮುನೀಶಪುತ್ರಾಃ ।
ಆಲೋಕ್ಯ ಪದ್ಮಾಪತಿಮಾದಿದೇವಂ
ಶುಭಾಂಗಮನ್ಯೇ ವಿಚರಂತಿ ತೇನ ॥ ೧೭ ॥

---

೧೫. ಯಾವ ಋಷಿಕುಮಾರರು ತರುಣರೂ, ನಿಗ್ರಹಿಸಿದ ಮಾನಸವುಳ್ಳವರೂ ಆಗಿದ್ದರೋ; ಅವರೆಲ್ಲರೂ ಕಾಮವಿಕಾರಪೀಡಿತರಾಗಿ ಸ್ತ್ರೀ ರೂಪಿಯಾದ ವಿಷ್ಣುವನ್ನು ಹಿಂಬಾಲಿಸಿದರು.

೧೬. ವಿಲಾಸವತಿಯರಾದ ಅನೇಕ ಮುನಿಪತ್ನಿಯರು ಬಹಳ ಸುಂದರನಾಗಿರುವ, ಸಪತ್ನೀಕನಾಗಿ ಸಂಚರಿಸುತ್ತಿದ್ದ ಈಶ್ವರನನ್ನು ನಾಯಕನಂತೆ ಭಾವಿಸಿ ಗಾಯನ, ನರ್ತನ ಮುಂತಾದ ಚೇಷ್ಟೆಗಳನ್ನಾರಂಭಿಸಿದರು.

೧೭. ಆ ತರುಣಮುನಿಕುಮಾರರು ಆದಿದೇವನೂ, ಸುಂದರವಾದ ನಾರೀವಿಗ್ರಹವುಳ್ಳವನೂ ಮತ್ತು ಲಕ್ಷ್ಮೀಪತಿಯೂ ಆದ ವಿಷ್ಣುವನ್ನು ನೋಡಿ ಸಮೀಪಕ್ಕೆ ಬಂದು ಮಂದಹಾಸಮಾಡುತ್ತಲೂ ಮತ್ತೆ ಕೆಲವರು ಅವನೊಡನೆ ಸಂಚಾರಮಾಡುತ್ತಲೂ ಇದ್ದರು.

ಆಶಾಮುಖ್ಯೈಕಾಮುಪಿ ವಾಸುದೇವೋ
ಮಾಯೀ ಮುರಾರಿರ್ಮನಸಿ ಪ್ರವಿಷ್ಟಃ ।
ಕರೋತಿ ಭೋಗಾನ್ ಮನಸಿ ಪ್ರವೃತ್ತಿಂ
ಮಾಯಾನುಭೂಯಂತ ಇತೀವ ಸಮ್ಯಕ್ ॥ ೧೮ ॥

ವಿಭಾತಿ ವಿಶ್ವಾಮರವಿಶ್ವನಾಥಃ
ಸಮಾಧವಸ್ತ್ರೀಗಣಸನ್ನಿವಿಷ್ಟಃ ।
ಅಶೇಷಶಕ್ತ್ಯಾ ಸಮಯಂ ನಿವಿಷ್ಟೋ
ಯಥೈಕಶಕ್ತ್ಯಾ ಸಹ ದೇವದೇವಃ ॥ ೧೯ ॥

ಕರೋತಿ ನಿತ್ಯಂ ಪರಮಂ ಪ್ರಧಾನಂ
ತದಾ ವಿರೂಢಃ ಪುನರೇವ ಭೂಯಃ ।
ಯಯೌ ಸಮಾರುಹ್ಯ ಹರಿಃ ಸ್ವಭಾವಂ
ತಮೀಡ್ಯಶಂ ನಾಮ ತಮಾದಿದೇವಮ್ ॥ ೨೦ ॥

---

೧೮. ಸರ್ವಭೂತಾವಾಸನೂ, ದೀಪ್ಯಮಾನನೂ, ಮಾಯಾವಂತನೂ ಮತ್ತು ಮುರಾಸುರ ಶತ್ರುವೂ ಆದ ವಿಷ್ಣುಪರಮಾತ್ಮನು ಮಾನವಹೃದಯದಲ್ಲಿ ಪ್ರವೇಶಿಸಿ ಮಾಯಾವೃತ್ತಿಯಿಂದ ಆಶಾಪರಂಪರೆಗಳನ್ನು ಉಂಟುಮಾಡುವನು. ಅದರಿಂದ ಪ್ರವೃತ್ತಿಧರ್ಮವೂ ಅದರಿಂದ ಅನೇಕ ಭೋಗಗಳೂ ಉಂಟಾಗುವುವು. ಹೀಗೆ ಜಗಚ್ಚಕ್ರವು ನಿರಪಾಯವಾಗಿ ಮಾಯೆಯಿಂದ ನಡೆಯುವುದು.

೧೯. ಪ್ರಕೃತದಲ್ಲಿ ಸಮಸ್ತ ದೇವವೃಂದಕ್ಕೆ ಅಧಿಪತಿಯಾದ ಈಶ್ವರನು ವಿಷ್ಣುವಿನಿಂದ ಕೂಡಿ ಮುನಿಪತ್ನೀ ಸಂಘವನ್ನು ಪ್ರವೇಶಿಸಿ ಪ್ರಕಾಶಿಸಿದನು. ಮತ್ತು ದೇವತೆಗಳಿಗೆ ಪ್ರಭುವಾದ ಈಶ್ವರನು ಏಕಶಕ್ತಿರೂಪಳಾದ ದೇವಿಯೊಡನೆ ಹೇಗೋ ಹಾಗೆ ಅಶೇಷಶಕ್ತಿಸಂಭೂತರಾದ ನಾರಿಯರೊಡನೆ ಸಮಯವನ್ನು ಕಳೆದನು.

೨೦. ಸರ್ವಜ್ಞನಾದ ಶಂಕರನು ಸೃಷ್ಟಿರಚನೆಯಲ್ಲಿ ಉನ್ಮುಖನಾಗಿ ಪುನಃ ಪುನಃ ಮುಖ್ಯವಾದ ಮತ್ತು ಉದ್ರಿಕ್ತರಜೋಗುಣವುಳ್ಳ ಪ್ರಧಾನವನ್ನು ಪ್ರೇರೇಪಿಸುವನು. ಹರಿಯು ತನ್ನ ಸತ್ತ್ವಗುಣಸ್ವಭಾವವನ್ನು ಹೊಂದಿ ಪಾಲಿಸಲು ಉದ್ಯುಕ್ತನಾಗುವನು. ಹೀಗೆ ಆದಿದೇವನಾದ ಶಂಕರನು ಸರ್ವಕಾಲಗಳಲ್ಲಿಯೂ ವಿಹರಿಸುತ್ತಿದ್ದನು.

ದೃಷ್ಟ್ವಾ ನಾರೀಕುಲಂ ರುದ್ರಂ ಪುತ್ರಾನಪಿ ಚ ಕೇಶವಮ್ ।
ಮೋಹಯಂತಂ ಮುನಿಶ್ರೇಷ್ಠಾಃ ಕೋಪಂ ಸಂದಧಿರೇ ಭೃಶಮ್॥೨೧॥

ಅತೀವ ಪರುಷಂ ವಾಕ್ಯಂ ಪ್ರೋಚುರ್ದೇವಂ ಕಪರ್ದಿನಮ್ ।
ಶೇಪುಶ್ಚ ವಿವಿಧೈರ್ವಾಕ್ಯೈರ್ಮಾಯಯಾ ತಸ್ಯ ಮೋಹಿತಾಃ ॥ ೨೨ ॥

ತಪಾಂಸಿ ತೇಷಾಂ ಸರ್ವೇಷಾಂ ಪ್ರತ್ಯಾಹನ್ಯಂತ ಶಂಕರೇ ।
ಯಥಾದಿತ್ಯಪ್ರಕಾಶೇನ ತಾರಕಾ ನಭಸಿ ಸ್ಥಿತಾಃ ॥ ೨೩ ॥

ತಂ ಭರ್ತ್ಸ್ಯ ತಾಪಸಾ ವಿಪ್ರಾಃ ಸಮೇತ್ಯ ವೃಷಭಧ್ವಜಮ್ ।
ಕೋ ಭವಾನಿತಿ ದೇವೇಶಂ ಪೃಚ್ಛಂತಿ ಸ್ಮ ವಿಮೋಹಿತಾಃ ॥ ೨೪ ॥

---

೨೧. ಆಗ ಅಲ್ಲಿದ್ದ ಮುನಿಜನರು ತಮ್ಮ ಭಾರ್ಯೆಯರನ್ನು ಮೋಹಗೊಳಿಸುತ್ತಿದ್ದ ರುದ್ರನನ್ನೂ, ತಮ್ಮ ಕುಮಾರರನ್ನು ಮೋಹಗೊಳಿಸುತ್ತಿದ್ದ ವಿಷ್ಣುವನ್ನೂ ನೋಡಿ ಅತಿಶಯವಾದ ಕೋಪವನ್ನು ಹೊಂದಿದರು.

೨೨. ಆಗ ಪರಮೇಶ್ವರನ ಮಾಯೆಯಿಂದ ಮೋಹಗೊಳಿಸಲ್ಪಟ್ಟವರಾಗಿ ಜಟಾಜೂಟಧರನಾದ ಪರಮೇಶ್ವರಸ್ವಾಮಿಯನ್ನು ಕುರಿತು ಕ್ರೂರವಚನಗಳನ್ನು ಆಡಿದರು. ಮತ್ತು ನಾನಾ ವಿಧವಾದ ದುಷ್ಟವಾಕ್ಯಗಳಿಂದ ಶಿವನನ್ನು ನಿಂದಿಸಿದರು.

೨೩. ಆಕಾಶದಲ್ಲಿ ಹೊಳೆಯುತ್ತಿದ್ದ ತಾರಕೆಗಳು ಸೂರ್ಯಬಿಂಬದ ಪ್ರಕಾಶದಲ್ಲಿ ಅಡಗಿಹೋಗುವಂತೆ ಸಮಸ್ತ ಮುನಿಜನರು ಮಾಡುತ್ತಿದ್ದ ತಪೋಬಲವು ಶಂಕರನಲ್ಲಿ ಪ್ರತಿಬಂಧಹೊಂದಿತು.

೨೪. ಆಗ ತಪಸ್ವಿಗಳಾದ ವಿಪ್ರರು ಮಾಯಾಮೋಹಿತರಾಗಿ ವೃಷಭಾಂಕಿತ ಧ್ವಜವುಳ್ಳವನೂ, ದೇವಾಧಿಪತಿಯೂ ಆದ ಈಶ್ವರನನ್ನು ಭಯಪಡಿಸಿ " ನೀನು ಯಾರು ? " ಎಂದು ಗರ್ಜಿಸಿ ಕೇಳಿದರು.

ಸೋಽಬ್ರವೀದ್ಭಗವಾನೀಶಸ್ತಪಶ್ಚರ್ತುಮಿಹಾಗತಃ ।
ಇದಾನೀಂ ಭಾರ್ಯಯಾ ದೇಶಂ ಭವದ್ಭಿರಿಹ ಸುವ್ರತಾಃ ॥ ೨೫ ॥

ತಸ್ಯ ತೇ ವಾಕ್ಯಮಾಕರ್ಣ್ಯ ಭೃಗ್ವಾದ್ಯಾ ಮುನಿಪುಂಗವಾಃ ।
ಊಚುರ್ಗೃಹೀತ್ವಾ ವಸನಂ ತ್ಯಕ್ತ್ವಾ ಭಾರ್ಯಾಂ ತಪಶ್ಚರ ॥ ೨೬ ॥

ಅಥೋವಾಚ ವಿಹಸ್ಯೇಶಃ ಪಿನಾಕೀ ನೀಲಲೋಹಿತಃ ।
ಸಂಪ್ರೇಕ್ಷ್ಯ ಜಗತಾಂ ಯೋನಿಂ ಪಾರ್ಶ್ವಸ್ಥಂ ಚ ಜನಾರ್ದನಮ್ ॥೨೭॥

ಕಥಂ ಭವದ್ಭಿರುದಿತಂ ಸ್ವಭಾರ್ಯಾಪೋಷಣೋತ್ಸುಕೈಃ ।
ತ್ಯಕ್ತವ್ಯಾ ಮಮ ಭಾರ್ಯೇತಿ ಧರ್ಮಜ್ಞೈಃ ಶಾಂತಮಾನಸೈಃ ॥ ೨೮ ॥

---

೨೫ ಆಗ ಷಡ್ಗುಣೈಶ್ವರ್ಯಸಂಪನ್ನನೂ, ಮಹೇಶ್ವರನೂ ಆದ ಶಂಕರನು ಪ್ರತ್ಯುತ್ತರ ಹೇಳಿದನು:—ತಪಸ್ವಿಗಳೆ! ನಾನು ಈಗ ತಪವನ್ನು ಆಚರಿಸಲು ನನ್ನ ಭಾರ್ಯೆಯೊಡನೆ ನಿಮ್ಮ ಸ್ಥಳಕ್ಕೆ ಬಂದು ನಿಮ್ಮೊಡನೆ ಸೇರಿರುವೆನು.

೨೬. ಭೃಗುಮುನಿಯೇ ಆದಿಯಾದ ಋಷೀಶ್ವರರು ಶಂಕರನ ಆ ವಚನವನ್ನು ಕೇಳಿ ಅವನ ವಸ್ತ್ರವನ್ನು ಎಳೆದು ನಿಲ್ಲಿಸಿ ಹೀಗೆಂದು ಹೇಳಿದರು:— ನೀನು ಈ ಭಾರ್ಯೆಯನ್ನು ಬಿಟ್ಟು ಏಕಾಕಿಯಾಗಿ ತಪವನ್ನು ಆಚರಿಸು.

೨೭. ತರುವಾಯ ನೀಲ-ಲೋಹಿತವರ್ಣಗಳಿಂದ ಕೂಡಿದ, ಪಿನಾಕಾಯುಧವುಳ್ಳ ಮತ್ತು ಸರ್ವೇಶ್ವರನಾದ ರುದ್ರನು ನಗುತ್ತ ಜಗತ್ತಿಗೆ ಕಾರಣನೂ ತನ್ನ ಪಾರ್ಶ್ವದಲ್ಲಿರುವವನೂ ಆದ ನಾರಾಯಣನನ್ನು ನೋಡುತ್ತ ಮುನಿಜನರಿಗೆ ಹೇಳಿದನು.

೨೮. ಧರ್ಮವನ್ನು ಅರಿತವರೂ, ನಿರ್ವಿಕಾರವಾದ ಮಾನಸವುಳ್ಳವರೂ ಆದ ನೀವು ನಿಮ್ಮ ಭಾರ್ಯೆಗಳ ಪೋಷಣದಲ್ಲಿ ನಿರತರಾಗಿದ್ದು ನನಗೆ ಮಾತ್ರ ಭಾರ್ಯೆಯನ್ನು ಬಿಡು ಹೀಗೆಂದು ಹೇಗೆ ಹೇಳಿದಿರಿ ?

ಋಷಯ ಊಚುಃ :—

ವ್ಯಭಿಚಾರರತಾ ಭಾರ್ಯಾಃ ಸಂತ್ಯಾಜ್ಯಾಃ ಪತಿನೇರಿತಾಃ ।
ಅಸ್ಮಾಭಿರ್ಭಕ್ತಾಃ ಸುಭಗಾ ನೇದೃಶಾಸ್ತ್ಯಾಗಮರ್ಹತಿ　　॥ ೨೯ ॥

ಮಹಾದೇವ ಉವಾಚ :—

ನ ಕದಾಚಿದಿಯಂ ವಿಪ್ರಾ ಮನಸಾಪ್ಯನ್ಯಮಿಚ್ಛತಿ ।
ನಾಹಮೇನಾಮಪಿ ತಥಾ ವಿಮುಂಚಾಮಿ ಕದಾಚನ　　॥ ೩೦ ॥

ಋಷಯ ಊಚುಃ :—

ದೃಷ್ಟ್ವಾ ವ್ಯಭಿಚರಂತೀಹ ಹ್ಯಸ್ಮಾಭಿಃ ಪುರುಷಾಧಮ ।
ಉಕ್ತಂ ಹ್ಯಸತ್ಯಂ ಭವತಾ ಗಮ್ಯತಾಂ ಕ್ಷಿಪ್ರಮೇವ ಹಿ　　॥ ೩೧ ॥

ಏವಮುಕ್ತೇ ಮಹಾದೇವಃ ಸತ್ಯಮೇವ ಮಯೇರಿತಮ್ ।
ಭವತಾಂ ಪ್ರತಿಭಾ ಹ್ಯೇಷಾ ತ್ಯಕ್ತ್ವಾಸೌ ವಿಚಚಾರ ಹ　　॥ ೩೨ ॥

---

೨೯. ಮುನಿಗಳು ಹೀಗೆಂದರು:—ವ್ಯಭಿಚಾರಶೀಲರಾಗಿರುವ ಭಾರ್ಯೆಯರು ಪತಿಯಿಂದ ತ್ಯಜಿಸಲ್ಪಡಬೇಕೆಂದು ಹೇಳಿರುತ್ತದೆ. ನಮ್ಮಲ್ಲಿ ಅತಿಪ್ರೇಮಾನುರಾಗವನ್ನಿಟ್ಟಿರುವ ಸುಂದರಿಯರನ್ನು ನಾವು ತ್ಯಾಗಮಾಡುವುದು ಉಚಿತವಲ್ಲ.

೩೦. ಈಶ್ವರನು ಹೀಗೆಂದು ಹೇಳಿದನು: — ವಿಪ್ರರೆ ! ನನ್ನ ಈ ಭಾರ್ಯೆಯು ಯಾವಾಗಲೂ ಮನಸ್ಸಿನಲ್ಲಿ ಕೂಡ ಪರಪುರುಷನನ್ನು ಚಿಂತಿಸುವುದಿಲ್ಲ. ನಾನು ಇವಳನ್ನು ಕೂಡ ಹಾಗೆಯೆ ಯಾವಾಗಲೂ ಬಿಟ್ಟಿರುವುದಿಲ್ಲ.

೩೧. ಋಷಿಗಳು ಮತ್ತೆ ಹೀಗೆಂದರು :—ಪುರುಷಾಧಮನೆ ! ವ್ಯಭಿಚಾರಶೀಲದಿಂದಿರುವ ಈಕೆಯು ನಮ್ಮಿಂದ ಇಲ್ಲಿ ನೋಡಲ್ಪಟ್ಟಿರುವಳು. ನಿನ್ನಿಂದ ಅನೃತವು ಹೇಳಲ್ಪಟ್ಟಿದೆ. ಆದುದರಿಂದ ನೀನು ಇಲ್ಲಿಂದ ಕ್ಷಿಪ್ರದಲ್ಲಿ ಹೊರಡು.

೩೨. ಮುನಿಗಳು ಹೀಗೆಂದು ಹೇಳಲು ಮಹಾದೇವನು ಹೀಗೆಂದು ಉತ್ತರ ಹೇಳಿದನು :— ನನ್ನಿಂದ ಪರಮಾರ್ಥವು ಹೇಳಲ್ಪಟ್ಟಿದೆ. ನನ್ನ ಭಾರ್ಯೆಯಾದ ಈಕೆಯು ನನ್ನನ್ನು ಬಿಟ್ಟು ವ್ಯಭಿಚರಿಸಿದಳೆಂಬುದು ನಿಮ್ಮ ಪ್ರತಿಭೆಯು ಕಲ್ಪನೆಯಾಗಿದೆ.

ಸೋಽಗಚ್ಛದ್ಧರಿಣಾ ಸಾರ್ಧಂ ಮುನೀಂದ್ರಸ್ಯ ಮಹಾತ್ಮನಃ ।
ವಸಿಷ್ಠಸ್ಯಾಶ್ರಮಂ ಪುಣ್ಯಂ ಭಿಕ್ಷಾರ್ಥೀ ಪರಮೇಶ್ವರಃ ॥ ೩೩ ॥

ದೃಷ್ಟ್ವಾ ಸಮಾಗತಂ ದೇವಂ ಭಿಕ್ಷಮಾಣಮರುಂಧತೀ ।
ವಸಿಷ್ಠಸ್ಯ ಪ್ರಿಯಾ ಭಕ್ತ್ಯಾ ಪ್ರತ್ಯುದ್ಗಮ್ಯ ನನಾಮ ತಮ್ ॥ ೩೪ ॥

ಪ್ರಕ್ಷಾಲ್ಯ ಪಾದೌ ವಿಮಲಂ ದತ್ತ್ವಾ ಚಾಸನಮುತ್ತಮಮ್ ।
ಸಂಪ್ರೇಕ್ಷ್ಯ ಶಿಥಿಲಂ ಗಾತ್ರಮಭಿಘಾತಹತಂ ದ್ವಿಜೈಃ ॥ ೩೫ ॥

ಸಂಧಯಾಮಾಸ ಭೈಷಜ್ಯೈರ್ವಿಷಣ್ಣವದನಾ ಸತೀ ।
ಚಕಾರ ಮಹತೀಂ ಪೂಜಾಂ ಪ್ರಾರ್ಥಯಾಮಾಸ ಭಾರ್ಯಯಾ॥ ೩೬ ॥

---

೩೩. ತರುವಾಯ ಆ ಪರಮೇಶ್ವರನು ಭಿಕ್ಷಾರ್ಥಿಯಾಗಿ ಮುನಿಶ್ರೇಷ್ಠನೂ ಮಹಾತ್ಮನೂ ಆದ ವಸಿಷ್ಠನೆಂಬ ಮುನಿಯ ಆಶ್ರಮಕ್ಕೆ ವಿಷ್ಣುವಿನೊಡನೆ ಬಂದನು.

೩೪. ವಸಿಷ್ಠಮುನಿಯ ಪತ್ನಿಯಾದ ಅರುಂಧತೀದೇವಿಯು ಭಿಕ್ಷಾರ್ಥಿಯಾಗಿ ಬಂದಿದ್ದ ಸ್ವಾಮಿಯನ್ನು ಕಂಡು ಭಕ್ತಿಪೂರ್ವಕವಾಗಿ ಎದುರುಗೊಂಡು ಅವನಿಗೆ ನಮಸ್ಕರಿಸಿದಳು.

೩೫. ಹಾಗೆ ಅತಿಥಿಸತ್ಕಾರ ಸಮಯದಲ್ಲಿ ಪಾದಗಳನ್ನು ತೊಳೆದು ನಿರ್ಮಲವೂ, ಉತ್ತಮವೂ ಆದ ಆಸನವನ್ನು ಕೊಟ್ಟು ಸಮೀಪಕ್ಕೆ ಬಂದು ದ್ವಿಜರು ಹೊಡೆದು ವ್ರಣಮಾಡಿ ಬಹಳ ಶಿಥಿಲಾವಸ್ಥೆಗೆ ಬಂದಿರುವ ಅವನ ಗಾತ್ರವನ್ನು ನೋಡಿದಳು.

೩೬. ಅದನ್ನು ನೋಡಿ ಅರುಂಧತಿಯು ವಿಷಾದದಿಂದ ಕೂಡಿದ ಮುಖವುಳ್ಳವಳಾಗಿ ಔಷಧಗಳಿಂದ ಗುಣಪಡಿಸಿದಳು. ಮತ್ತು ಮಹತ್ತಾದ ಪೂಜಾಸಮಾರಂಭವನ್ನು ಮಾಡಿದಳು. ಮತ್ತು ಅವನ ಭಾರ್ಯೆಯ ಮೂಲಕ ಪ್ರಾರ್ಥಿಸಿಕೊಂಡಳು.

ಕೋ ಭವಾನ್ ಕುತ ಆಯಾತಃ ಕಿಮಾಚಾರೋ ಭವಾನಿತಿ ।
ಉಚ್ಯತಾಮಾಹ ಭಗವಾನ್ ಸಿದ್ಧಾನಾಂ ಪ್ರವರೋ ಹ್ಯಹಮ್ ॥ ೩೭ ॥

ಯದೇತನ್ಮಂಡಲಂ ಶುಭ್ರಂ ಭಾತಿ ಬ್ರಹ್ಮಮಯಂ ಸದಾ ।
ಏಷೈವ ದೇವತಾ ಮಹ್ಯಂ ಧಾರಯಾಮಿ ಸದೈವ ತು ॥ ೩೮ ॥

ಇತ್ಯುಕ್ತ್ವಾ ಪ್ರಯಯೌ ಶ್ರೀಮಾನನುಗೃಹ್ಯ ಪತಿವ್ರತಾಮ್ ।
ತಾಡಯಾಂಚಕ್ರಿರೇ ದಂಡೈರ್ಲೋಷ್ಟಿಭಿರ್ಮುಷ್ಟಿಭಿರ್ದ್ವಿಜಾಃ ॥ ೩೯ ॥

ದೃಷ್ಟ್ವಾ ಚರಂತಂ ಗಿರಿಶಂ ನಗ್ನಂ ವಿಕೃತಿಲಕ್ಷಣಮ್ ।
ಪ್ರೋಚುರೇತದ್ಭವಲ್ಲಿಂಗಮುತ್ಪಾಟಯ ಸುದುರ್ಮತೇಃ ॥ ೪೦ ॥

---

೩೭. ನೀನು ಯಾರು ? ನೀನು ಎಲ್ಲಿಂದ ಬಂದಿರುವೆ ? ನಿನ್ನ ಕಾರ್ಯೋದ್ದೇಶವಾವುದು ? ಮತ್ತು ನಿನ್ನ ಆಚಾರವೇನು ? ಇದೆಲ್ಲವೂ ಹೇಳಲ್ಪಡಲಿ. ಆಗ ಪೂಜ್ಯನಾದ ಈಶ್ವರನು ಹೀಗೆಂದು ಹೇಳಿದನು :—ನಾನು ಸಿದ್ಧರಲ್ಲಿ ಉತ್ತಮನಾಗಿರುತ್ತೇನೆ.

೩೮. ಬ್ರಹ್ಮಮಯವಾದ ಯಾವ ಈ ಶುಭಮಂಡಲವು ಆದಿತ್ಯರೂಪದಿಂದ ಸರ್ವ ಕಾಲದಲ್ಲಿಯೂ ಪ್ರಕಾಶಿಸುತ್ತಿರುವುದೊ ; ಅದೇ ನನಗೆ ಪೂಜ್ಯದೇವತೆಯು, ಅದನ್ನು ನಾನು ಯಾವಾಗಲೂ ಧಾರಣಮಾಡಿಕೊಂಡಿರುವೆನು.

೩೯. ಹೀಗೆಂದು ಹೇಳಿ ಪತಿವ್ರತೆಯಾದ ಅರುಂಧತೀದೇವಿಯನ್ನು ಅನುಗ್ರಹಿಸಿ ಕಾಂತಿಯುಕ್ತನಾದ ಈಶ್ವರನು ಅಲ್ಲಿಂದ ಹೊರಟನು. ಆಗ ಅಲ್ಲಿರುವ ದ್ವಿಜರು, ಕಲ್ಲು, ಮಣ್ಣು ಹೆಂಟೆ ಮತ್ತು ಕೋಲುಗಳನ್ನು ತೆಗೆದುಕೊಂಡು ಅವನನ್ನು ಹೊಡೆದರು.

೪೦. ಕಾಮವಿಕಾರಕರವಾದ ಲಕ್ಷಣಗಳಿಂದ ಕೂಡಿ ದಿಗಂಬರನಾಗಿ ಸಂಚರಿಸುತ್ತಿದ್ದ ಪರಮೇಶ್ವರನನ್ನು ನೋಡಿ ದ್ವಿಜರು ಹೀಗೆಂದು ಹೇಳಿದರು. ದುರ್ಬುದ್ಧಿಯುಳ್ಳ ನಿನ್ನ ಈ ಲಿಂಗವನ್ನು ಕಿತ್ತುಹಾಕು.

ತಾನಬ್ರವೀನ್ಮಹಾಯೋಗೀ ಕರಿಷ್ಯಾಮೀತಿ ಶಂಕರಃ ।
ಯುಷ್ಮಾಕಂ ಮಾಮಕೇ ಲಿಂಗೇ ಯದಿ ದ್ವೇಷೋಽಭಿಜಾಯತೇ ॥೪೧॥

ಉಕ್ತ್ವಾ ತೂತ್ಪಾಟಯಾಮಾಸ ಭಗವಾನ್ ಭಗನೇತ್ರ ಹಾ ॥ ೪೨ ॥

ನಾಪಶ್ಯಂಸ್ತತ್ಕ್ಷಣಾದೀಶಂ ಕೇಶವಂ ಲಿಂಗಮೇವ ಚ ।
ತದೋತ್ಪಾತಾ ಬಭೂವುರ್ಹಿ ಲೋಕಾನಾಂ ಭಯಶಂಸಿನಃ ॥ ೪೩ ॥

ನ ರಾಜತೇ ಸಹಸ್ರಾಂಶುಶ್ಚಚಾಲ ಪೃಥಿವೀ ಪುನಃ ।
ನಿಷ್ಪ್ರಭಾಶ್ಚ ಗ್ರಹಾಃ ಸರ್ವೇ ಚುಕ್ಷುಭೇ ಚ ಮಹೋದಧಿಃ ॥ ೪೪ ॥

---

೪೧. ಮಹಾ ಯೋಗೀಶ್ವರನಾದ ಶಂಕರನು “ ನಿಮಗೆ ನನ್ನ ಈ ಲಿಂಗದಲ್ಲಿ ಪರಮ ದ್ವೇಷವು ಉಂಟಾಗುವುದಾದರೆ ಅದನ್ನು ಛೇದಿಸಬೇಕೆಂಬ ನಿಮ್ಮ ವಚನ ವನ್ನು ನಾನು ನಡೆಸುತ್ತೇನೆ ” ಎಂದು ಹೇಳಿದನು.

೪೨. ಭಗಾಸುರನ ನೇತ್ರಗಳನ್ನು ಕಿತ್ತುಹಾಕಿರುವ, ಷಡ್ಗುಣೈಶ್ವರ್ಯಸಂಪ ನ್ನನಾದ ಈಶ್ವರನು ಕೂಡಲೆ ತನ್ನ ಲಿಂಗವನ್ನು ಕಿತ್ತುಹಾಕಿದನು.

೪೩. ಆಗ ಆ ಕ್ಷಣದಲ್ಲಿ ಈಶ್ವರನನ್ನೂ, ಲಿಂಗವನ್ನೂ ಮತ್ತು ವಿಷ್ಣುವನ್ನೂ ಆ ವಿಪ್ರರು ಕಾಣಲಿಲ್ಲ. ಆಗ ಲೋಕಗಳಿಗೆ ಭಯವನ್ನು ಸೂಚಿಸುವ ಅನೇಕ ವಿಧ ವಾದ ಉತ್ಪಾತಗಳು ಉಂಟಾದುವು.

೪೪. ಸೂರ್ಯನ ಮಂಡಲವು ಹೆಚ್ಚು ಪ್ರಕಾಶಿಸಲಿಲ್ಲ. ಪೃಥಿವಿಯು ಮತ್ತೆ ಮತ್ತೆ ಕಂಪಿಸಿತು. ಸಮಸ್ತ ಗ್ರಹಗಳು ನಿಸ್ತೇಜಸ್ಸುಗಳಾದುವು. ಹಾಗು ಮಹೋ ದಧಿಯು ಕ್ಷೋಭೆಗೊಂಡಿತು.

ಅಪಶ್ಯಚ್ಚಾನುಸೂಯಾತ್ರೇಃ ಸ್ವಪ್ನಂ ಭಾರ್ಯಾ ಪತಿವ್ರತಾ ।
ಕಥಯಾಮಾಸ ವಿಪ್ರಾಣಾಂ ಭಯಾದಾಕುಲಿತೇಂದ್ರಿಯಾ　　॥ ೪೫ ॥

ತೇಜಸಾ ಭಾಸಯನ್ ಕೃತ್ಸ್ನಂ ನಾರಾಯಣಸಹಾಯವಾನ್ ।
ಭಿಕ್ಷಮಾಣಃ ಶಿವೋ ನೂನಂ ದೃಷ್ಟೋಽಸ್ಮಾಕಂ ಗೃಹೇಷ್ವಿತಿ　　॥ ೪೬ ॥

ತಸ್ಯಾ ವಚನಮಾಕರ್ಣ್ಯ ಶಂಕಮಾನಾ ಮಹರ್ಷಯಃ ।
ಸರ್ವೇ ಜಗ್ಮುರ್ಮಹಾಯೋಗಂ ಬ್ರಹ್ಮಾಣಂ ವಿಶ್ವಸಂಭವಮ್ ॥ ೪೭ ॥

ಉಪಾಸ್ಯಮಾನಮಮಲೈರ್ಯೋಗಿಭಿರ್ಬ್ರಹ್ಮವಿತ್ತಮೈಃ ।
ಚತುರ್ವೇದೈರ್ಮೂರ್ತಿಮದ್ಭಿಃ ಸಾವಿತ್ರ್ಯಾ ಸಹಿತಂ ಪ್ರಭುಮ್ ॥ ೪೮ ॥

---

೪೫. ಆಗ ಪತಿವ್ರತೆಯೂ, ಅತ್ರಿಮಹರ್ಷಿಯ ಪತ್ನಿಯೂ ಆದ ಅನಸೂಯೆಯು ಒಂದು ಸ್ವಪ್ನವನ್ನು ಕಂಡಳು. ಮತ್ತು ಭಯದಿಂದ ವ್ಯಾಪ್ತವಾದ ಇಂದ್ರಿಯಗಳುಳ್ಳವಳಾಗಿ ಅವಳು ವಿಪ್ರರಿಗೆ ಆ ಸ್ವಪ್ನವೃತ್ತಾಂತವನ್ನು ಈ ರೀತಿಯಾಗಿ ಹೇಳಿದಳು.

೪೬. ಶಂಕರನು ತನ್ನ ತೇಜಸ್ಸಿನಿಂದ ಸಮಸ್ತ ವಸ್ತುಜಾಲವನ್ನು ಪ್ರಕಾಶಗೊಳಿಸುತ್ತ ನಾರಾಯಣನ ಸಹಾಯದೊಡನೆ ಬಂದು ನಮ್ಮ ಆಶ್ರಮಗೃಹದಲ್ಲಿ ಭಿಕ್ಷೆಯೆತ್ತುತ್ತಿರುವ ಹಾಗೆ ನಿಜವಾಗಿ ಕಾಣಿಸಿಕೊಂಡನು.

೪೭. ಅನಸೂಯಾದೇವಿಯ ವಚನವನ್ನು ಕೇಳಿ ಭಯಗೊಂಡಿರುವವರೂ ಮತ್ತು ಸಂಶಯಗೊಂಡವರೂ ಆದ ಎಲ್ಲ ಮಹರ್ಷಿಗಳು ವಿಶ್ವದ ಸೃಷ್ಟಿಕರ್ತನೂ, ಮಹಾ ಯೋಗೇಶ್ವರನೂ ಆದ ಬ್ರಹ್ಮದೇವನ ಬಳಿಗೆ ಹೋದರು.

೪೮. ನಿಷ್ಕಳಂಕರಾದ ಯೋಗಿಗಳಿಂದಲೂ ಶ್ರೇಷ್ಠರಾದ ಬ್ರಹ್ಮಜ್ಞಾನಿಗಳಿಂದಲೂ ಮೂರ್ತಿಯನ್ನು ಧರಿಸಿಬಂದಿರುವ ಚತುರ್ವೇದಗಳಿಂದಲೂ ಮತ್ತು ಸಾವಿತ್ರೀದೇವಿಯಿಂದಲೂ ಕೂಡಿರುವ ಪ್ರಭುದೇವನನ್ನು ಹೊಂದಿದರು.

ಆಸೀನಮಾಸನೇ ರಮ್ಯೇ ನಾನಾಶ್ಚರ್ಯಸಮನ್ವಿತೇ ।
ಪ್ರಭಾಸಹಸ್ರಕಲಿಲೇ ಜ್ಞಾನೈಶ್ವರ್ಯಾದಿಸಂಯುತೇ ॥ ೪೯ ॥

ವಿಭ್ರಾಜಮಾನಂ ವಪುಷಾ ಸಸ್ಮಿತಂ ಶುಭ್ರಲೋಚನಮ್ ।
ಚತುರ್ಮುಖಂ ಮಹಾಬಾಹುಂ ಛಂದೋಮಯಮಜಂ ಪರಮ್ ॥ ೫೦॥

ವಿಲೋಕ್ಯ ದೇವಪುರುಷಂ ಪ್ರಸನ್ನವದನಂ ಶುಚಿಮ್ ।
ಶಿರೋಭಿರ್ಧರಣೀಂ ಗತ್ವಾ ತೋಷಯಾಮಾಸುರೀಶ್ವರಮ್ ॥ ೫೧ ॥

ತಾನ್ ಪ್ರಸನ್ನಮನಾ ದೇವಶ್ಚತುರ್ಮೂರ್ತಿಶ್ಚತುರ್ಮುಖಃ ।
ವ್ಯಾಜಹಾರ ಮುನಿಶ್ರೇಷ್ಠಾಃ ಕಿಮಾಗಮನಕಾರಣಮ್ ॥ ೫೨

---

೪೯. ಮತ್ತು ಅನೇಕವಿಧ ಆಶ್ಚರ್ಯಗಳಿಂದ ಕೂಡಿದ, ಸಹಸ್ರಾರು ಪ್ರಭೆಗಳುಳ್ಳ ಜ್ಞಾನ ಐಶ್ವರ್ಯ ಮುಂತಾದ ಗುಣಗಳಿಂದ ಕೂಡಿರುವ ಮತ್ತು ರಮ್ಯವಾದ ಆಸನದಲ್ಲಿ ಕುಳಿತುಕೊಂಡಿದ್ದ ಬ್ರಹ್ಮದೇವನ ಬಳಿಗೆ ಹೋದರು.

೫೦. ಮತ್ತು ದೇಹದಿಂದ ವಿರಾಜಿಸುತ್ತಿರುವವನೂ, ನಗುಮುಖದಿಂದ ಕೂಡಿದನನೂ, ಶುಭ್ರವಾದ ನೇತ್ರಗಳುಳ್ಳವನೂ, ನಾಲ್ಕು ಮುಖಗಳುಳ್ಳವನೂ, ದೀರ್ಘವಾದ ಬಾಹುಗಳಿಂದ ಕೂಡಿದನನೂ, ಛಂದೋಮಯನೂ, ಜನ್ಮರಹಿತನೂ ಮತ್ತು ಸರ್ವೋತ್ತಮನೂ ಆದ ಬ್ರಹ್ಮನ ಸನ್ನಿಧಿಯನ್ನು ಹೊಂದಿದರು.

೫೧. ಆಗ ಆ ತಪಸ್ವಿಗಳು ದೇವತೆಯಂತೆ ದೀಪ್ಯಮಾನವಾದ ದೇಹವುಳ್ಳವನೂ, ಪ್ರಸನ್ನವಾದ ಮುಖವುಳ್ಳವನೂ, ಶುದ್ಧನೂ ಮತ್ತು ನಿಯಾಮಕನೂ ಆದ ಬ್ರಹ್ಮದೇವನಿಗೆ ತಲೆಯನ್ನು ನೆಲಕ್ಕೆ ಬಾಗಿಸಿ ನಮಸ್ಕಾರಮಾಡಿ ಸಂತೋಷಪಡಿಸಿದನು.

೫೨. ಆಗ ನಾಲ್ಕುದಿಕ್ಕುಗಳಲ್ಲಿ ನಾಲ್ಕು ಮೂರ್ತಿ ಮತ್ತು ನಾಲ್ಕು ಮುಖಗಳುಳ್ಳ ಬ್ರಹ್ಮದೇವನು ಪ್ರಸನ್ನವಾದ ಮುಖವುಳ್ಳವನಾಗಿ ಆ ತಪಸ್ವಿಗಳನ್ನು ಕುರಿತು ಮುನಿಶ್ರೇಷ್ಠರೇ ! ನೀವು ಇಲ್ಲಿಗೆ ಬರಲು ಕಾರಣವೇನು ? ಎಂದು ಕೇಳಿದನು.

ತತ್ರಾಸ್ಯ ವೃತ್ತಮಖಿಲಂ ಬ್ರಹ್ಮಣಃ ಪರಮಾತ್ಮನಃ ।
ಜ್ಞಾಪಯಾಂಚಕ್ರಿರೇ ಸರ್ವೇ ಕೃತ್ವಾ ಶಿರಸಿ ಚಾಂಜಲಿಮ್ ॥ ೫೩ ॥

ಋಷಯ ಊಚುಃ :—

ಕಶ್ಚಿದ್ದಾರುವನಂ ಪುಣ್ಯಂ ಪುರುಷೋಽತೀವ ಶೋಭನಃ ।
ಭಾರ್ಯಯಾ ಚಾರುಸರ್ವಾಂಗ್ಯಾ ಪ್ರವಿಷ್ಟೋ ನಗ್ನ ಏವ ಹಿ ॥ ೫೪ ॥

ಮೋಹಯಾಮಾಸ ವಪುಷಾ ನಾರೀಣಾಂ ಕುಲಮೀಶ್ವರಃ ।
ಕನ್ಯಕಾನಾಂ ಪ್ರಿಯೋ ಯಸ್ತು ದೂಷಯಾಮಾಸ ಪುತ್ರಕಾನ್ ॥ ೫೫ ॥

ಅಸ್ಮಾಭಿರ್ವಿವಿಧಾಃ ಶಾಪಾಃ ಪ್ರದತ್ತಾಸ್ತೇ ಪರಾಗತಾಃ ।
ತಾಡಿತೋಽಸ್ಮಾಭಿರತ್ಯರ್ಥಂ ಲಿಂಗಂ ತು ವಿನಿಪಾತಿತಮ್ ॥ ೫೬ ॥

---

೫೩. ಆಗ ಸಮಸ್ತ ಮುನಿಗಳು ಪರಮಾತ್ಮನಾದ ಆ ಬ್ರಹ್ಮದೇವನಿಗೆ ಹಿಂದೆ ನಡೆದ ಸಂಪೂರ್ಣ ವೃತ್ತಾಂತವನ್ನು ಶಿರದಲ್ಲಿ ನಮಸ್ಕಾರಾಂಜಲಿಯನ್ನು ಇಟ್ಟು ಕೊಂಡು ವಿನಯದಿಂದ ಹೇಳಿಕೊಂಡರು.

೫೪. ಋಷಿಗಳು ಹೀಗೆಂದು ಹೇಳಿದರು:—ಅತ್ಯಂತ ಸುಂದರಮೂರ್ತಿಯಾದ ಒಬ್ಬ ಪುರುಷನು ಸರ್ವಾಂಗಸುಂದರಿಯಾದ ತನ್ನ ಭಾರ್ಯೆಯೊಡನೆ ನಗ್ನಾವಸ್ಥೆ ಯಲ್ಲಿಯೆ ನಮ್ಮ ದಾರುವನವನ್ನು ಪ್ರವೇಶಿಸಿದನು.

೫೫. ಆಗ ಆ ಪುರುಷನು ಸಮರ್ಥನಾಗಿ ತನ್ನ ದೇಹಸೌಂದರ್ಯದಿಂದ ನಾರಿ ಯರ ಗುಂಪನ್ನು ಮೋಹಗೊಳಿಸಿದನು. ಮತ್ತು ಸುಂದರಕನ್ಯೆಯರಲ್ಲಿ ಪ್ರೇಮಾಂ ಕುರವನ್ನಿಟ್ಟಿರುವ ನಮ್ಮ ಕುಮಾರರನ್ನು ಕೂಡ ಅವನ ಭಾರ್ಯೆಯು ಮೋಹ ಗೊಳಿಸಿದಳು.

೫೬. ಅವನಿಗೆ ನಮ್ಮಿಂದ ಅನೇಕವಿಧವಾದ ಶಾಪಗಳು ಕೊಡಲ್ಪಟ್ಟವು. ಆದರೆ ಅವುಗಳೆಲ್ಲವೂ ಭಂಗಗೊಳಿಸಲ್ಪಟ್ಟವು. ಅನಂತರ ನಮ್ಮಿಂದ ಆ ಪುರುಷನು ಅತಿಶಯವಾಗಿ ಹೊಡೆಯಲ್ಪಟ್ಟನು. ಮತ್ತು ಅವನ ಲಿಂಗವು ಕೀಳಲ್ಪಟ್ಟಿತು.

ಅಂತರ್ಹಿತಶ್ಚ ಭಗವಾನ್ ಸಭಾರ್ಯೋ ಲಿಂಗಮೇವ ಚ ।
ಉತ್ಪಾತಾಶ್ಚಾಭವನ್ ಘೋರಾಃ ಸರ್ವಭೂತಭಯಂಕರಾಃ ॥ ೫೭ ॥

ಕ ಏಷ ಪುರುಷೋ ದೇವ ಭೀತಾಃ ಸ್ಮಃ ಪುರುಷೋತ್ತಮ ।
ಭವಂತಮೇವ ಶರಣಂ ಪ್ರಸನ್ನಾ ವಯಮಚ್ಯುತ ॥ ೫೮ ॥

ತ್ವಂ ಹಿ ವೇತ್ಸಿ ಜಗತ್ಯಸ್ಮಿನ್ ಯತ್ಕಿಂಚಿದಿಹ ಚೇಷ್ಟಿತಮ್ ।
ಅನುಗ್ರಹೇಣ ಯುಕ್ತೇನ ತದಸ್ಮಾನನುಪಾಲಯ ॥ ೫೯ ॥

ವಿಜ್ಞಾಪಿತೋ ಮುನಿಗಣೈರ್ವಿಶ್ವಾತ್ಮಾ ಕಮಲೋದ್ಭವಃ ।
ಧ್ಯಾತ್ವಾ ದೇವಂ ತ್ರಿಶೂಲಾಂಕಂ ಕೃತಾಂಜಲಿರಭಾಷತ ॥ ೬೦ ॥

---

೫೭. ಕೂಡಲೆ ಭಗವಂತನಾದ ಆ ಪುರುಷನು ಭಾರ್ಯಾಸಹಿತನಾಗಿ ಅಲ್ಲಿಂದ ಅಂತರ್ಧಾನ ಹೊಂದಿದನು. ಲಿಂಗವೂ ಅದೃಶ್ಯವಾಯಿತು. ಕೂಡಲೆ ಸರ್ವ ಪ್ರಾಣಿಗಳಿಗೆ ಭಯವನ್ನು ಉಂಟುಮಾಡುವ ಘೋರವಾದ ಉತ್ಪಾತಗಳು ಕಂಡುಬಂದುವು.

೫೮. ಸ್ವಾಮಿಯೆ! ಆ ಪುರುಷನು ಯಾರು? ಪುರುಷೋತ್ತಮನೇ! ನಾವೆಲ್ಲರೂ ಭಯಗೊಂಡಿರುತ್ತೇವೆ. ಚ್ಯುತಿರಹಿತನೆ! ನಾವೆಲ್ಲರೂ ನಿನ್ನನ್ನು ಒಬ್ಬನನ್ನೇ ಶರಣುಹೊಂದಿರುವೆವು.

೫೯. ನೀನು ಈ ಜಗತ್ತಿನಲ್ಲಿ ನಡೆಯುವ ಸರ್ವ ವಸ್ತುಗಳ ಚೇಷ್ಟಾವ್ಯಾಪಾರಗಳನ್ನು ತಿಳಿದಿರುತ್ತೀಯೆ. ಆದ್ದರಿಂದ ನಮ್ಮಲ್ಲಿ ಯೋಗ್ಯವಾದ ಅನುಗ್ರಹವನ್ನು ತೋರಿಸಿ ನಮ್ಮನ್ನು ರಕ್ಷಿಸು.

೬೦. ಈ ರೀತಿಯಾಗಿ ಮುನಿಗಳ ಸಂಘದಿಂದ ವಿಜ್ಞಾಪಿಸಲ್ಪಟ್ಟವನೂ, ವಿಶ್ವರೂಪಿಯೂ ಮತ್ತು ಕಮಲಪುಷ್ಪದಲ್ಲಿ ಸಂಭವಿಸಿದವನೂ ಆದ ಬ್ರಹ್ಮದೇವನು ತ್ರಿಶೂಲಚಿಹ್ನದಿಂದ ಅಂಕಿತನಾದ ಈಶ್ವರನನ್ನು ಧ್ಯಾನಿಸಿ ಅಂಜಲಿಯನ್ನು ಕಟ್ಟಿಕೊಂಡು ಹೇಳಲಾರಂಭಿಸಿದನು.

ಬ್ರಹ್ಮೋವಾಚ :—

ಹಾ ಕಷ್ಟಂ ಭವತಾಮದ್ಯ ಜಾತಂ ಸರ್ವಾರ್ಥನಾಶನಮ್ ।
ಧಿಗ್ಬಲಂ ಧಿಕ್ ತಪಶ್ಚರ್ಯಾಂ ಮಿಥ್ಯೈವ ಭವತಾಮಿಹ ॥ ೬೧ ॥

ಸಂಪ್ರಾಪ್ಯ ಪುಣ್ಯಸಂಸ್ಕಾರಾನ್ನಿಧೀನಾಂ ಪರಮಂ ನಿಧಿಮ್ ।
ಉಪೇಕ್ಷಿತಂ ವೃಥಾಚಾರೈರ್ಭವದ್ಭಿರಿಹ ಮೋಹಿತೈಃ ॥ ೬೨ ॥

ಕಾಂಕ್ಷಂತೇ ಯೋಗಿನೋ ನಿತ್ಯಂ ಯತಂತೋ ಯತಯೋ ನಿಧಿಮ್ ।
ಯಮೇವ ತಂ ಸಮಾಸಾದ್ಯ ಹಾ ಭವದ್ಭಿರುಪೇಕ್ಷಿತಮ್ ॥ ೬೩ ॥

ಯಜಂತಿ ವಿವಿಧೈರ್ಯಜ್ಞೈರ್ಯತ್ಪ್ರಾಪ್ತ್ಯೈ ವೇದವಾದಿನಃ ।
ಮಹಾನಿಧಿಂ ಸಮಾಸಾದ್ಯ ಹಾ ಭವದ್ಭಿರುಪೇಕ್ಷಿತಮ್ ॥ ೬೪ ॥

---

೬೧ ಬ್ರಹ್ಮದೇವನು ಇಂತೆಂದನು :—ಅಯ್ಯೋ, ನಿಮಗೆ ಈದಿನ ಸಮಸ್ತ ಪುರುಷಾರ್ಥಗಳನ್ನು ನಾಶಮಾಡುವ ಕಷ್ಟವು ಪ್ರಾಪ್ತವಾಯಿತು. ನಿಮ್ಮ ಬಲ, ನಿಮ್ಮ ತಪಶ್ಚರ್ಯೆಗಳಿಗೆ ಧಿಕ್ಕಾರವಿರಲಿ. ನಿಮ್ಮ ಈ ಉದ್ಯಮವು ವ್ಯರ್ಥವಾಯಿತು.

೬೨. ಪೂರ್ವಜನ್ಮದ ಪುಣ್ಯಗಳ ಸಂಸ್ಕಾರದಿಂದ ಪ್ರಾಪ್ತವಾದ, ನಿಧಿಗಳಲ್ಲೆಲ್ಲಾ ಉತ್ತಮವಾದ ಒಂದು ನಿಧಿಯು ಕಪಟಸದಾಚಾರವುಳ್ಳ ನಿಮ್ಮಿಂದ ಭ್ರಾಂತಿಗೊಂಡವರಾಗಿ ಉಪೇಕ್ಷೆಮಾಡಲ್ಪಟ್ಟಿತು.

೬೩. ಯೋಗಾಭ್ಯಾಸತತ್ಪರರೂ ಮತ್ತು ಯತಿಗಳೂ ಯತ್ನಪೂರ್ವಕವಾಗಿ ಯಾವ ಪರಮಾರ್ಥ ತತ್ತ್ವವನ್ನು ತಿಳಿಯಲು ಕಾಂಕ್ಷಿಸುವರೊ ; ಅಂತಹ ಪರಮಾರ್ಥ ಸ್ವರೂಪವನ್ನು ಹೊಂದಿ ನಿಮ್ಮಿಂದ ಉಪೇಕ್ಷೆಮಾಡಲ್ಪಟ್ಟಿತು.

೬೪. ವೇದಾಧ್ಯಯನ ತತ್ಪರರು ಯಾವ ಪರಮಾತ್ಮನ ಪ್ರಾಪ್ತಿಗೋಸ್ಕರ ವಿವಿಧ ಯಜ್ಞಗಳನ್ನು ಆಚರಿಸುವರೊ ; ಅಂತಹ ಮಹತ್ತಾದ ನಿಧಿಯನ್ನು ಹೊಂದಿ ಆ ನಿಧಿಯು ನಿಮ್ಮಿಂದ ಉಪೇಕ್ಷೆಯಿಂದ ಬಿಡಲ್ಪಟ್ಟಿತು.

ಯಮರ್ಚಯಿತ್ವಾ ಸತತಂ ವಿಶ್ವೇಶತ್ವಮಿದಂ ಮಮ ।
ಸ ದೇವೋಪೇಕ್ಷಿತೋ ದೃಷ್ಟ್ವಾ ನಿಧಾನಂ ಭಾಗ್ಯವರ್ಜಿತಾಃ ॥ ೬೫ ॥

ಯಸ್ಮಿನ್ ಸಮಾಹಿತಂ ದಿವ್ಯಮೈಶ್ವರ್ಯಂ ಯತ್ತದವ್ಯಯಮ್ ।
ತಮಾಸಾದ್ಯ ನಿಧಿಂ ಬ್ರಹ್ಮ ಹಾ ಭವದ್ಭಿರ್ವೃಥಾ ಕೃತಮ್ ॥ ೬೬ ॥

ಏಷ ದೇವೋ ಮಹಾದೇವೋ ವಿಜ್ಞೇಯಸ್ತು ಮಹೇಶ್ವರಃ ।
ನ ತಸ್ಯ ಪರಮಂ ಕಿಂಚಿತ್ ಪದಂ ಸಮಭಿಗಮ್ಯತೇ ॥ ೬೭ ॥

ದೇವತಾನಾಮೃಷೀಣಾಂ ವಾ ಪಿತೄಣಾಂ ಚಾಪಿ ಶಾಶ್ವತಃ ॥ ೬೮ ॥

ಸಹಸ್ರಯುಗಪರ್ಯಂತೇ ಪ್ರಲಯೇ ಸರ್ವದೇಹಿನಾಮ್ ।
ಸಂಹರತ್ಯೇಷ ಭಗವಾನ್ ಕಾಲೋ ಭೂತ್ವಾ ಮಹೇಶ್ವರಃ ॥ ೬೯ ॥

---

೬೫. ಯಾವ ಪರಮಾತ್ಮನನ್ನು ಸಂತತವಾಗಿ ಅರ್ಚಿಸಿ ನಾನು ಈ ವಿಶ್ವನಿಯಾಮಕತ್ವವನ್ನು ಹೊಂದಿರುವೆನೊ; ಅಂತಹ ಸ್ವಾಮಿಯಾದ ಪರಮನಿಧಿಯನ್ನು ಹೊಂದಿ ಭಾಗ್ಯಹೀನರಾದ ನೀವು ಉಪೇಕ್ಷೆಮಾಡಿದಿರಿ.

೬೬. ಯಾವ ಐಶ್ವರ್ಯವು ದಿವ್ಯವಾಗಿದೆಯೊ; ಯಾವುದು ಅಕ್ಷಯವಾಗಿದೆಯೋ; ಅಂತಹ ಐಶ್ವರ್ಯಕ್ಕೆ ಪರಮಾಧಾರವಾದ ಮಹಾನಿಧಿರೂಪವಾದ ಬ್ರಹ್ಮವಸ್ತುವನ್ನು ಕಂಡು ಅದು ನಿಮ್ಮಿಂದ ವ್ಯರ್ಥವಾಗಿ ಕಳೆದುಕೊಳ್ಳಲ್ಪಟ್ಟಿತು.

೬೭. ಈ ಪುರುಷನು ದೇವೋತ್ತಮನಾದ ಸ್ವಾಮಿಯು. ಇವನನ್ನು ಮಹೇಶ್ವರನೆಂದು ತಿಳಿಯಬೇಕು. ಉತ್ತಮನಾದ ಆ ಮಹೇಶ್ವರನ ಯಾವುದೊಂದು ಪರಮಪದವೂ ಲಭ್ಯವಾಗುವುದಿಲ್ಲ.

೬೮. ಮಹೇಶ್ವರನ ಪದವು ದೇವತೆಗಳಿಗಾಗಲಿ, ಅಥವಾ ಮಹರ್ಷಿಗಳಿಗಾಗಲಿ ಹಾಗು ಪಿತೃಗಳಿಗೇ ಆಗಲಿ ಲಭ್ಯವಾಗುವುದಿಲ್ಲ.

೬೯. ಸಮಸ್ತ ಪ್ರಾಣಿಗಳಿಗೆ ಸಹಸ್ರ ಯುಗಗಳ ಅವಧಿಯಲ್ಲಿ ಪ್ರಲಯವು ಒದಗಿರಲು ಈ ಮಹೇಶ್ವರನು ಸಂಹಾರಕನಾದ ಕಾಲರೂಪಿಯಾಗಿ ಸರ್ವವಸ್ತುಗಳನು ಸಂಹಾರಮಾಡುವನು.

ಏಷ ಚೈವ ಪ್ರಜಾಃ ಸರ್ವಾಃ ಸೃಜತ್ಯೇಷ ಸ್ವತೇಜಸಾ ।
ಏಷ ಚಕ್ರೀ ಚಕ್ರವರ್ತೀ ಶ್ರೀವತ್ಸಕೃತಲಕ್ಷಣಃ ॥ ೭೦ ॥

ಯೋಗೀ ಕೃತಯುಗೇ ದೇವಸ್ತ್ರೇತಾಯಾಂ ಯಜ್ಞ ಏವ ಚ ।
ದ್ವಾಪರೇ ಭಗವಾನ್ ಕಾಲೋ ಧರ್ಮಕೇತುಃ ಕಲೌ ಯುಗೇ ॥ ೭೧ ॥

ರುದ್ರಸ್ಯ ಮೂರ್ತಯಸ್ತಿಸ್ರೋ ಯಾಭಿರ್ವಿಶ್ವಮಿದಂ ತತಮ್ ।
ತಮೋ ಹ್ಯಗ್ನೀ ರಜೋ ಬ್ರಹ್ಮಾ ಸತ್ತ್ವಂ ವಿಷ್ಣುರಿತಿ ಸ್ಮೃತಿಃ ॥ ೭೨ ॥

ಮೂರ್ತಿರನ್ಯಾ ಸ್ಮೃತಾ ಚಾಸ್ಯ ದಿಗ್ವಾಸಾಶ್ಶಿವಾ ಧ್ರುವಾ ।
ಯತ್ರ ತಿಷ್ಠತಿ ತದ್ಬ್ರಹ್ಮ ಯೋಗೇನ ತು ಸಮನ್ವಿತಮ್ ॥ ೭೩ ॥

---

೭೦. ಈ ಮಹೇಶ್ವರನೇ ತನ್ನ ತೇಜೋಮಹಿಮೆಯಿಂದ ಸಕಲ ಪ್ರಜೆಗಳನ್ನು ಸೃಷ್ಟಿಮಾಡುತ್ತಾನೆ. ಈ ಮಹೇಶ್ವರನೇ ಚಕ್ರಪಾಣಿಯೂ, ಶ್ರೀವತ್ಸಚಿಹ್ನದಿಂದ ಅಲಂಕರಿಸಲ್ಪಟ್ಟವನೂ ಆಗಿ ಚಕ್ರವರ್ತಿಯಂತೆ ರಾಜ್ಯವನ್ನು ಪಾಲಿಸುವನು.

೭೧. ಈ ಮಹೇಶ್ವರನು ಕೃತಯುಗದಲ್ಲಿ ಯೋಗಾಭ್ಯಾಸಾಭಿಮಾನಿಯಾದ ದೇವನೂ, ತ್ರೇತಾಯುಗದಲ್ಲಿ ಯಜ್ಞಪುರುಷನೂ, ದ್ವಾಪರಯುಗದಲ್ಲಿ ಭಗವಂತನಾದ ಕಾಲಾತ್ಮನೂ ಮತ್ತು ಕಲಿಯುಗದಲ್ಲಿ ಧರ್ಮಚಿಹ್ನಾಲಂಕೃತನಾದ ಧರ್ಮದೇವ ಸ್ವರೂಪನೂ ಆಗಿರುವನು.

೭೨. ರುದ್ರದೇವನಿಗೆ ಮೂರು ಮೂರ್ತಿಗಳು ಇರುತ್ತವೆ. ಆ ಮೂರ್ತಿ ತ್ರಯದಿಂದ ಈ ವಿಶ್ವವು ವ್ಯಾಪಿಸಲ್ಪಟ್ಟಿದೆ. ತಮೋಗುಣಮಯವಾದ ಅಗ್ನಿ ಮೂರ್ತಿ, ರಜೋಗುಣಮಯವಾದ ಬ್ರಹ್ಮಮೂರ್ತಿ ಮತ್ತು ಸತ್ತ್ವಗುಣಮಯವಾದ ವಿಷ್ಣು ಮೂರ್ತಿ–ಹೀಗೆ ಸ್ಮೃತಿಯು ಮೂರ್ತಿತ್ರಯವನ್ನು ಹೇಳುತ್ತದೆ.

೭೩. ಈ ತ್ರಿಮೂರ್ತಿಗಳಲ್ಲದೆ ಬೇರೊಂದು ಮೂರ್ತಿಯು ರುದ್ರನಿಗೆ ಇರುವು ದೆಂದು ಸ್ಮರಿಸಲ್ಪಟ್ಟಿದೆ. ಆ ಮೂರ್ತಿಯು ದಿಗಂಬರವೂ ಮಂಗಳಕರವೂ ಶಾಶ್ವತವೂ ಆದುದು. ಯೋಗ ಮಹಿಮೆಯಿಂದ ಕೂಡಿದ ಪರಬ್ರಹ್ಮವು ಆ ನಾಲ್ಕನೆಯ ರುದ್ರ ಮೂರ್ತಿಯಲ್ಲಿ ಅಡಗಿರುವುದು.

ಯಾ ಚಾಸ್ಯ ಪಾರ್ಶ್ವಗಾ ಭಾರ್ಯಾ ಭವದ್ಭಿರಭಿಭಾಷಿತಾ ।
ಸ ಹಿ ನಾರಾಯಣೋ ದೇವಃ ಪರಮಾತ್ಮಾ ಸನಾತನಃ ॥ ೭೪ ॥

ತಸ್ಮಾತ್ ಸರ್ವಮಿದಂ ಜಾತಂ ತತ್ರೈವ ಚ ಲಯಂ ವ್ರಜೇತ್ ।
ಸ ಏಷ ಮೋಚಯೇತ್ ಕೃತ್ಸ್ನಂ ಸ ಏಷ ಚ ಪರಾ ಗತಿಃ ॥ ೭೫ ॥

ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಏಕಶೃಂಗೋ ಮಹಾನಾತ್ಮಾ ನಾರಾಯಣ ಇತಿ ಶ್ರುತಿಃ ॥ ೭೬ ॥

ರೇತೋಽಸ್ಯ ಗರ್ಭೋ ಭಗವಾನಾಪೋ ಮಾಯಾ ತನುಃ ಪ್ರಭುಃ ।
ಸ್ತೂಯತೇ ವಿವಿಧೈರ್ಮಂತ್ರೈರ್ಬ್ರಾಹ್ಮಣೈರ್ಮೋಕ್ಷಕಾಂಕ್ಷಿಭಿಃ ॥ ೭೭ ॥

---

೭೪. ಆ ಪುರುಷನ ಪಾರ್ಶ್ವದಲ್ಲಿದ್ದ, ಅವನ ಭಾರ್ಯೆಯೆಂದು ನಿಮ್ಮಿಂದ ಹೇಳಲ್ಪಟ್ಟಿರುವ ನಾರಿಯು ಅನಾದಿಯೂ ಪರಮಾತ್ಮಸ್ವರೂಪನೂ ಆದ ಶ್ರೀಮನ್ ನಾರಾಯಣಸ್ವಾಮಿಯು ಆಗಿರುವನು.

೭೫. ಅಂತಹ ನಾರಾಯಣನಿಂದಲೆ ಈ ವಿಶ್ವವೆಲ್ಲವೂ ಹುಟ್ಟಿದೆ. ಅವನಲ್ಲಿಯೆ ಲಯವನ್ನು ಹೊಂದುತ್ತದೆ. ಆ ಸ್ವಾಮಿಯೆ ಎಲ್ಲರನ್ನೂ ಮುಕ್ತರನ್ನಾಗಿ ಮಾಡುವನು. ಮತ್ತು ಅವನೆ ಪರಮಗತಿರೂಪನಾಗಿರುವನು.

೭೬. ಅಂತಹ ನಾರಾಯಣಮೂರ್ತಿಯು ಸಹಸ್ರ ಶಿರಗಳಿಂದಲೂ ಸಹಸ್ರ ನೇತ್ರಗಳಿಂದಲೂ ಮತ್ತು ಸಹಸ್ರ ಪಾದಗಳಿಂದಲೂ ವಿಶ್ವವನ್ನು ವ್ಯಾಪಿಸಿರುವ ಪೂರ್ಣರೂಪನೂ ಅದ್ವಿತೀಯ ಮುಖ್ಯ ತತ್ತ್ವರೂಪನೂ ಮತ್ತು ಅನಂತಸ್ವರೂಪನೂ ಆಗಿರುವನು.

೭೭. ಈ ನಾರಾಯಣನು ಜಲದಲ್ಲಿ ವಿಸರ್ಜಿಸಿದ ರೇತಸ್ಸು ಭಗವಂತನೂ ಮಾಯಾವಶನೂ ಮತ್ತು ಸರ್ವನಿಯಾಮಕನೂ ಆದ ಬ್ರಹ್ಮದೇವನಾಗಿರುವನು. ಅಂತಹ ಪ್ರಭುವು ಮೋಕ್ಷವನ್ನು ಆಕಾಂಕ್ಷಿಸುವ ಬ್ರಾಹ್ಮಣೋತ್ತಮರಿಂದ ವಿವಿಧ ಮಂತ್ರಗಳಿಂದ ಸ್ತುತಿಸಲ್ಪಡುತ್ತಾನೆ.

ಸಂಹೃತ್ಯ ಸಕಲಂ ವಿಶ್ವಂ ಕಲ್ಪಾಂತೇ ಪುರುಷೋತ್ತಮಃ ।
ಶೇತೇ ಯೋಗಾಮೃತಂ ಪೀತ್ವಾ ಯತ್ರ ವಿಷ್ಣೋಃ ಪರಂ ಪದಮ್ ॥

ನ ಜಾಯತೇ ನ ಮ್ರಿಯತೇ ವರ್ಧತೇ ನ ಚ ವಿಶ್ವದೃಕ್ ।
ಮೂಲಪ್ರಕೃತಿರವ್ಯಕ್ತಾ ಗೀಯತೇ ವೈದಿಕೈರಜಃ ॥ ೭೯ ॥

ತತೋ ನಿಶಾಯಾಂ ವೃತ್ತಾಯಾಂ ಸಿಸೃಕ್ಷುರಖಿಲಂ ಜಗತ್ ।
ಅಜನಾಭೌ ತು ತದ್ಬೀಜಂ ಕ್ಷಿಪತ್ಯೇಷ ಮಹೇಶ್ವರಃ ॥ ೮೦ ॥

ತಂ ಮಾಂ ವಿತ್ತ ಮಹಾತ್ಮಾನಂ ಬ್ರಹ್ಮಾಣಂ ವಿಶ್ವತೋಮುಖಮ್ ।
ಮಹಾಂತಂ ಪುರುಷಂ ವಿಶ್ವಮಪಾಂ ಗರ್ಭಮನುತ್ತಮಮ್ ॥ ೮೧ ॥

---

೭೮. ಕಲ್ಪಕಾಲದ ಅವಸಾನದಲ್ಲಿ ಈ ಪುರುಷೋತ್ತಮನಾದ ಪರಮಾತ್ಮನು ಸಮಸ್ತ ವಿಶ್ವವನ್ನು ಸಂಹಾರಮಾಡಿ ವಿಷ್ಣುವಿನ ಮಹಿಮರೂಪವಾದ ಪರಮಪದದಲ್ಲಿ ಯೋಗಾಮೃತಾನಂದವನ್ನು ಪಾನಮಾಡುತ್ತ ಶಯನ ಮಾಡುವನು.

೭೯. ಅಂತಹ ಪುರುಷನು ಜನ್ಮಹೊಂದುವುದಿಲ್ಲ; ಮರಣಹೊಂದುವುದಿಲ್ಲ; ಮತ್ತು ವೃದ್ಧಿ-ಕ್ಷಯ ಮುಂತಾದ ಯಾವ ವಿಕಾರಗಳನ್ನೂ ಹೊಂದುವುದಿಲ್ಲ. ಸರ್ವಜ್ಞನಾದುದರಿಂದ ವಿಶ್ವವನ್ನು ಸಾಕ್ಷಾತ್ಕರಿಸುತ್ತಿರುವನು. ಅನಾದಿಯಾದ ಈ ಪುರುಷನು ಅವ್ಯಕ್ತವಾದ ಮೂಲಪ್ರಕೃತಿಯೆಂದು ವೈದಿಕರಿಂದ ಸ್ತುತಿಮಾಡಲ್ಪಡುತ್ತಾನೆ.

೮೦. ಈ ಪುರುಷೋತ್ತಮನು ಪ್ರಲಯಾವಸ್ಥೆಯಾದ ನಿಶೆಯು ಕಳೆದ ತರುವಾಯ ಅಶೇಷ ಜಗತ್ತನ್ನು ಸೃಷ್ಟಿಮಾಡಲು ಇಷ್ಟವುಳ್ಳವನಾಗಿ ಬ್ರಹ್ಮನ ನಾಭಿಯಲ್ಲಿ ಜಗತ್ಕಾರಣವಾದ ತನ್ನ ವೀರ್ಯವನ್ನು ಇರಿಸುವನು.

೮೧. ಮುನಿಗಳೆ! ಸರ್ವ ದಿಕ್ಕುಗಳಲ್ಲಿ ವದನವುಳ್ಳವನೂ, ಮಹಾತ್ಮನೂ, ಪುರುಷಾಕಾರನೂ ಮತ್ತು ನಿರುಪಮನೂ ಆದ ನನ್ನನ್ನು ಜಲಮಯಗರ್ಭಸಂಭೂತನಾದ ಬ್ರಹ್ಮದೇವನೆಂದು ತಿಳಿಯಿರಿ.

ನ ತಂ ಜಾನೀತ ಜನಕಂ ಮೋಹಿತಾಸ್ತಸ್ಯ ಮಾಯಯಾ ।
ದೇವದೇವಂ ಮಹಾದೇವಂ ಭೂತಾನಾಮೀಶ್ವರಂ ಹರಮ್ ॥ ೮೨ ॥

ಏಷ ದೇವೋ ಮಹಾದೇವೋ ಹ್ಯನಾದಿರ್ಭಗವಾನ್ ಹರಃ ।
ವಿಷ್ಣುನಾ ಸಹ ಸಂಯುಕ್ತಃ ಕರೋತಿ ವಿಕರೋತಿ ಚ ॥ ೮೩ ॥
ತಮೇವ ಮುಕ್ತಯೇ ಜ್ಞಾತ್ವಾ ವ್ರಜಧ್ವಂ ಶರಣಂ ಶಿವಮ್ ॥ ೮೪ ॥

ಇತೀರಿತಾ ಭಗವತಾ ಮರೀಚಿಪ್ರಮುಖಾ ವಿಭುಮ್ ।
ಪ್ರಣಮ್ಯ ದೇವಂ ಬ್ರಹ್ಮಾಣಂ ಪೃಚ್ಛಂತಿ ಸ್ಮ ಸಮಾಹಿತಾಃ ॥ ೮೫ ॥

ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇ
ಏಕನವತಿತಮೋಽಧ್ಯಾಯಃ.

---

೮೨. ಸರ್ವ ಪ್ರಾಣಿಗಳ ಜನಕನೂ ದೇವೋತ್ತಮನೂ ದೇವತೆಗಳಿಗೆ ದೇವತಾ ರೂಪಿಯೂ ಸರ್ವ ಭೂತಗಳಿಗೆ ಈಶ್ವರನೂ ಮತ್ತು ಸಂಹಾರಕನೂ ಆದ ಸರ್ವೇಶ್ವರ ನನ್ನು ಅವನ ಮಾಯೆಯಿಂದ ಮೋಹಗೊಂಡಿರುವ ನೀವು ತಿಳಿಯಲಾರಿರಿ.

೮೩. ಆದಿಯಿಲ್ಲದವನೂ, ಷಡ್ಗುಣೈಶ್ವರ್ಯಸಂಪನ್ನನೂ, ಮಹಾದೇವನೂ ಆದ ಈ ಸ್ವಾಮಿಯು ಶ್ರೀಮನ್ನಾರಾಯಣನಿಂದ ಕೂಡಿದವನಾಗಿ ಸರ್ವ ವಿಶ್ವವನ್ನು ಸೃಷ್ಟಿಮಾಡುತ್ತಾನೆ. ಹಾಗು ವಿಕಾರಹೊಂದಿಸುತ್ತಾನೆ.

೮೪. ಆದುದರಿಂದ ಅಜ್ಞರಾದ ನೀವು ಹಿಂದೆ ಹಸ್ತಗತವಾದ ಯಾವ ನಿಧಿಯನ್ನು ಕಳೆದುಕೊಂಡಿರುವಿರೊ, ಆ ಶಂಕರನನ್ನು ತಿಳಿದು ಕೈವಲ್ಯಪ್ರಾಪ್ತಿಗೆ ಅವನನ್ನು ಶರಣುಹೊಂದಿರಿ.

೮೫. ಪೂಜ್ಯನಾದ ಬ್ರಹ್ಮದೇವನಿಂದ ಈ ರೀತಿಯಾಗಿ ಹೇಳಲ್ಪಟ್ಟಿರುವ ಮರೀಚಿ ಮುಂತಾದ ಮಹರ್ಷಿಗಳು ಶಾಂತಚಿತ್ತರಾಗಿ ವಿಭುವಾದ ಬ್ರಹ್ಮದೇವನನ್ನು ನಮಸ್ಕಾರಮಾಡಿ ಮತ್ತೆ ಪ್ರಶ್ನಿಸಿದರು.

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ತೊಂಭತ್ತೊಂದನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

# ಕೂರ್ಮಪುರಾಣಂ

## ದ್ವಿನವತಿತಮೋಽಧ್ಯಾಯಃ.

ಮುನಯ ಊಚುಃ :—

ಕಥಂ ಪಶ್ಯೇಮ ತಂ ದೇವಂ ಪುನರೇವ ಪಿನಾಕಿನಮ್ ।
ಬ್ರೂಹಿ ವಿಶ್ವಾಮರೇಶಾನ ತ್ರಾತಾ ತ್ವಂ ಶರಣೈಷಿಣಾಮ್ ॥ ೧ ॥

ಬ್ರಹ್ಮೋವಾಚ :—

ಯದ್ದೃಷ್ಟಂ ಭವತಾ ತಸ್ಯ ಲಿಂಗಂ ಭುವಿ ನಿಪಾತಿತಮ್ ।
ತಲ್ಲಿಂಗಾನುಕೃತೀಶಸ್ಯ ಕೃತ್ವಾ ಲಿಂಗಮನುತ್ತಮಮ್ ॥ ೨ ॥

---

## ತೊಂಭತ್ತೆರಡನೆಯ ಅಧ್ಯಾಯವು

೧. ಮುನಿಜನರಿಂತೆಂದರು :—ಸಮಸ್ತ ದೇವತೆಗಳಿಗೆ ಪ್ರಭುವಾದ ಬ್ರಹ್ಮದೇವನೆ! ಪಿನಾಕಾಯುಧವನ್ನು ಹಿಡಿದಿರುವ, ಪ್ರಕಾಶಮಯನಾದ ಆ ಸ್ವಾಮಿಯನ್ನು ಮತ್ತೆ ನಾವು ಹೇಗೆ ನೋಡುವೆವು ? ಆ ಉಪಾಯವನ್ನು ಹೇಳು. ಶರಣಾಕಾಂಕ್ಷಿಗಳಾದ ನಮಗೆ ನೀನೇ ರಕ್ಷಕನಾಗಿದ್ದೀಯೆ.

೨. ಬ್ರಹ್ಮದೇವನು ಹೀಗೆಂದನು :—ನಿಮ್ಮಿಂದ ಭೂಮಿಯಲ್ಲಿ ಕೆಡವಿರುವ ಆ ಶಂಕರನ ಯಾವ ಲಿಂಗವು ನೋಡಲ್ಪಟ್ಟಿತೊ ; ಆ ಲಿಂಗಕ್ಕೆ ಸಮಾನವಾಗಿ ಸರ್ವೋತ್ತಮವಾದ ಈಶ್ವರನ ಲಿಂಗವನ್ನು ನಿರ್ಮಿಸಿರಿ.

ಪೂಜಯಧ್ವಂ ಸಪತ್ನೀಕಾಃ ಸಾದರಂ ಪುತ್ರಸಂಯುತಾಃ ।
ವೈದಿಕೈರೇವ ನಿಯಮೈರ್ವಿವಿಧೈರ್ಬ್ರಹ್ಮಚಾರಿಣಃ ॥ ೩ ॥

ಸಂಸ್ಥಾಪ್ಯ ಶಾಂಕರೈರ್ಮಂತ್ರೈರ್ಋಗ್ಯಜುಃಸಾಮಸಂಭವೈಃ ।
ತಪಃ ಪರಂ ಸಮಾಸ್ಥಾಯ ಗೃಣಂತಃ ಶತರುದ್ರಿಯಮ್ ॥ ೪ ॥

ಸಮಾಹಿತಾಃ ಪೂಜಯಧ್ವಂ ಸಪುತ್ರಾಃ ಸಹ ಬಂಧುಭಿಃ ।
ಸರ್ವೇ ಪ್ರಾಂಜಲಯೋ ಭೂತ್ವಾ ಶೂಲಪಾಣಿಂ ಪ್ರಪದ್ಯಥ ॥ ೫ ॥

ತತೋ ದ್ರಕ್ಷ್ಯಥ ದೇವೇಶಂ ದುರ್ದರ್ಶಮಕೃತಾತ್ಮಭಿಃ ।
ಯಂ ದೃಷ್ಟ್ವಾ ಸರ್ವಮಜ್ಞಾನಮಧರ್ಮಶ್ಚ ಪ್ರಣಶ್ಯತಿ ॥ ೬ ॥

---

೩. ಮತ್ತು ಬ್ರಹ್ಮಚರ್ಯ ನಿಯಮಗಳಿಂದ ಕೂಡಿದ ನೀವು ನಾನಾ ವಿಧವಾದ ವೈದಿಕನಿಯಮಾನುಷ್ಠಾನಪೂರ್ವಕವಾಗಿ ಪತ್ನೀ-ಪುತ್ರರಿಂದ ಸಮೇತರಾಗಿ ಆದರದಿಂದ ಆ ಲಿಂಗವನ್ನು ಆರಾಧಿಸಿರಿ.

೪. ಋಗ್ವೇದ–ಯಜುರ್ವೇದ-ಸಾಮವೇದಗಳಲ್ಲಿ ದೊರೆಯುವ, ಶಂಕರನನ್ನು ಸ್ತುತಿಸುವ ಮಂತ್ರಗಳಿಂದ ಲಿಂಗವನ್ನು ಸ್ಥಾಪನಮಾಡಿ ಉತ್ತಮವಾದ ತಪಸ್ಸನ್ನು ಕೈಗೊಂಡು ಶತರುದ್ರಿಯ ಸೂಕ್ತವನ್ನು ಜಪಿಸುತ್ತ ಆರಾಧಿಸಿರಿ.

೫. ಹೀಗೆ ಪರಮಭಕ್ತರಾದ ನೀವೆಲ್ಲರೂ ಅಂಜಲಿಯನ್ನು ರಚಿಸಿಕೊಂಡವರಾಗಿ ಪತ್ನಿ-ಪುತ್ರ ಮತ್ತು ಬಂಧು ಜನರೊಡನೆ ಪೂಜೆಮಾಡಿ ಪಾಣಿಯಲ್ಲಿ ಶೂಲವನ್ನು ಧರಿಸಿರುವ ಈಶ್ವರನಲ್ಲಿ ಶರಣಾಗತಿಯನ್ನು ಹೊಂದಿರಿ.

೬. ಹೀಗೆ ಆರಾಧಿಸಿದ್ದರಿಂದ ಸಂಸ್ಕಾರ ಶೂನ್ಯವಾದ ಆತ್ಮವುಳ್ಳದರಿಂದ ಕಾಣಲಾಗದ ಮತ್ತು ದೇವೋತ್ತಮನಾದ ಶಂಕರನನ್ನು ಸಾಕ್ಷಾತ್ಕರಿಸುತ್ತೀರಿ. ಆ ದೇವನನ್ನು ಸಾಕ್ಷಾತ್ಕರಿಸುವುದರಿಂದ ಅಜ್ಞಾನವೂ, ಅಧರ್ಮವೂ ಸಂಪೂರ್ಣವಾಗಿ ನಾಶವಾಗುವುವು.

ತತಃ ಪ್ರಣಮ್ಯ ವರದಂ ಬ್ರಹ್ಮಾಣಮಮಿತೌಜಸಮ್ ।
ಜಗ್ಮುಃ ಸಂಹೃಷ್ಟಮನಸೋ ದೇವದಾರುವನಂ ಪುನಃ ॥ ೭ ॥

ಆರಾಧಯಿತುಮಾರಬ್ಧಾ ಬ್ರಹ್ಮಣಾ ಕಥಿತಂ ಯಥಾ ।
ಅಜಾನಂತಃ ಪರಂ ಭಾವಂ ವೀತರಾಗಾ ವಿಮತ್ಸರಾಃ ॥ ೮ ॥

ಸ್ಥಂಡಿಲೇಷು ವಿಚಿತ್ರೇಷು ಪರ್ವತಾನಾಂ ಗುಹಾಸು ಚ ।
ನದೀನಾಂ ಚ ವಿವಿಕ್ತೇಷು ಪುಲಿನೇಷು ಶುಭೇಷು ಚ ॥ ೯ ॥

ಶೈವಾಲಭೋಜನಾಃ ಕೇಚಿತ್ ಕೇಚಿದಂತರ್ಜಲೇಶಯಾಃ ।
ಕೇಚಿದಭ್ರಾವಕಾಶಾಸ್ತು ಪಾದಾಂಗುಷ್ಠೇ ಹ್ಯಧಿಷ್ಠಿತಾಃ ॥ ೧೦ ॥

---

೭. ತರುವಾಯ ಅಪಾರವಾದ ತೇಜಸ್ಸುಳ್ಳವನೂ, ವರದಾಯಕನೂ ಆದ ಬ್ರಹ್ಮದೇವನನ್ನು ನಮಸ್ಕರಿಸಿ ಸಂತುಷ್ಟವಾದ ಮಾನಸವುಳ್ಳವರಾಗಿ ಮತ್ತೆ ತಮ್ಮ ದೇವದಾರು ವನವನ್ನು ಕುರಿತು ಹೊರಟುಹೋದರು.

೮. ತರುವಾಯ ಪರಮೇಶ್ವರನ ಪರಮಭಾವವನ್ನು ಅರಿಯದಿರುವ ಮಹರ್ಷಿಗಳು ರಾಗವರ್ಜಿತರೂ, ಮತ್ಸರಶೂನ್ಯರೂ ಆಗಿ ಬ್ರಹ್ಮನು ಹೇಳಿದ ವಿಧಾನದಂತೆ ಶಿವನನ್ನು ಆರಾಧಿಸಲು ಉಪಕ್ರಮಿಸಿದರು.

೯. ವಿವಿಧವಾದ ಸ್ಥಂಡಿಲ ಪ್ರದೇಶಗಳಲ್ಲಿಯೂ, ಪರ್ವತಗಳ ಗಹನಗುಹೆಗಳಲ್ಲಿಯೂ ಮತ್ತು ನಿರ್ಜನವೂ, ಮಂಗಳಕರವೂ ಆದ ಪುಣ್ಯನದೀ ತೀರಗಳಲ್ಲಿಯೂ ಶಂಕರವನ್ನು ಆರಾಧಿಸಿದರು.

೧೦. ಕೆಲವರು ತಪಸ್ವಿಗಳು ಪಾಚಿಯನ್ನು ಮಾತ್ರ ಭುಂಜಿಸಿ ನಿರಾಹಾರರಾಗಿಯೂ, ಮತ್ತೆ ಕೆಲವರು ಜಲಮಧ್ಯದಲ್ಲಿ ಇರುವವರಾಗಿಯೂ ಇನ್ನು ಕೆಲವರು ಪಾದಾಂಗುಷ್ಠದಿಂದ ಮಾತ್ರ ಭೂಮಿಯನ್ನು ಸ್ಪರ್ಶಿಸಿ ನಿಂತು ಆಕಾಶದ ಅವಕಾಶದಲ್ಲಿ ದೇಹವನ್ನು ಧರಿಸಿದವರಾಗಿಯೂ ಅನುಷ್ಠಾನವನ್ನು ಆರಂಭಿಸಿದರು.

ದಂತೋಲೂಖಲಿನಸ್ತ್ವನ್ಯೇ ಹ್ಯಶ್ಮಕುಟ್ಟಾಸ್ತಥಾ ಪರೇ ।
ಶಾಕಪರ್ಣಾಶನಾಃ ಕೇಚಿತ್ ಸಂಪ್ರಕ್ಷಾಲಾ ಮರೀಚಿಪಾಃ ॥ ೧೧ ॥

ವೃಕ್ಷಮೂಲನಿಕೇತಾಶ್ಚ ಶಿಲಾಶಯ್ಯಾಸ್ತಥಾ ಪರೇ ।
ಕಾಲಂ ನಯಂತಿ ತಪಸಾ ಪೂಜಯಂತೋ ಮಹೇಶ್ವರಮ್ ॥ ೧೨ ॥

ತತಸ್ತೇಷಾಂ ಪ್ರಸಾದಾರ್ಥೇ ಪ್ರಸನ್ನಾರ್ತಿಹರೋ ಹರಃ ।
ಚಕಾರ ಭಗವಾನ್ ಬುದ್ಧಿಂ ಬೋಧಯನ್ ವೃಷಭಧ್ವಜಃ ॥ ೧೩ ॥

ದೇವಃ ಕೃತಯುಗೇ ಹ್ಯಸ್ಮಿಙ್ಛೃಂಗೇ ಹಿಮವತಃ ಶುಭೇ ।
ದೇವದಾರುವನಂ ಪ್ರಾಪ್ತಃ ಪ್ರಸನ್ನಃ ಪರಮೇಶ್ವರಃ ॥ ೧೪ ॥

---

೧೧. ಕೆಲವರು ತಮ್ಮ ದಂತವೆಂಬ ಒರಳುಕಲ್ಲಿನಲ್ಲಿ ಸಂಸ್ಕೃತವಾದ ಆಹಾರ ವನ್ನು ಮಾತ್ರ ಭುಂಜಿಸುತ್ತಲೂ, ಇತರರು ಕೆಲವರು ಶಾಕ–ಪರ್ಣಗಳ ಆಹಾರವನ್ನು ಭುಂಜಿಸುತ್ತಲೂ ಹಾಗು ಇನ್ನು ಕೆಲವರು ಶುದ್ಧವಾದ ರಶ್ಮಿಗಳನ್ನು ಭುಂಜಿಸುತ್ತಲೂ ಇದ್ದರು.

೧೨. ಆ ತಪಸ್ವಿಗಳಲ್ಲಿ ಕೆಲವರು ವೃಕ್ಷಮೂಲಗಳಲ್ಲಿ ವಾಸಮಾಡುತ್ತ ಮತ್ತೆ ಕೆಲವರು ಶಿಲಾಮಯವಾದ ಶಯ್ಯೆಯಲ್ಲಿ ಶಯನಮಾಡುತ್ತ ಮಹೇಶ್ವರನನ್ನು ಅರ್ಚಿಸುತ್ತ ತಪೋನಿಷ್ಠೆಯಿಂದ ಕಾಲವನ್ನು ಕಳೆಯುತ್ತಿದ್ದರು.

೧೩. ಅನಂತರದಲ್ಲಿ ಶರಣಾಗತರ ಆರ್ತಿಯನ್ನು ಅಪಹರಿಸುವವನೂ, ಸರ್ವ ಸಂಹಾರಕನೂ, ಮತ್ತು ವೃಷಭಾಂಕಿತವಾದ ಧ್ವಜವುಳ್ಳವನೂ ಆದ ಭಗವಂತನು ತತ್ತ್ವಜ್ಞಾನವನ್ನು ಅವರಿಗೆ ಕೊಟ್ಟು ಅವರನ್ನು ಅನುಗ್ರಹಿಸುವ ಸಂಕಲ್ಪವುಳ್ಳವ ನಾದನು.

೧೪. ಆ ಮೇಲೆ ತಪಸ್ವಿಗಳಲ್ಲಿ ಅನುಗ್ರಹ ಬುದ್ಧಿಯುಳ್ಳ ಮಹೇಶ್ವರನು ಇದೇ ಕೃತಯುಗದಲ್ಲಿ ಮಂಗಳಕರವಾದ ಈ ಹಿಮಾಲಯಪರ್ವತದ ಶೃಂಗದಲ್ಲಿ ಮತ್ತೆ ದೇವದಾರು ವನಕ್ಕೆ ಬಂದನು.

ಭಸ್ಮಪಾಂಡುರದಿಗ್ಧಾಂಗೋ ನಗ್ನೋ ವಿಕೃತಲಕ್ಷಣಃ ।
ಉಲ್ಮೂಕವ್ಯಗ್ರಹಸ್ತಶ್ಚ ರಕ್ತಪಿಂಗಲಲೋಚನಃ ॥ ೧೫ ॥

ಕ್ವಚಿಚ್ಚ ಹಸತೇ ರೌದ್ರಂ ಕ್ವಚಿದ್ಗಾಯತಿ ವಿಸ್ಮಿತಃ ।
ಕ್ವಚಿನ್ನೃತ್ಯತಿ ಶೃಂಗಾರೀ ಕ್ವಚಿದ್ರೌತಿ ಮುಹುರ್ಮುಹುಃ ॥ ೧೬ ॥

ಆಶ್ರಮೇ ಹ್ಯಟತೇ ಭಿಕ್ಷುರ್ಯಾಚತೇ ಚ ಪುನಃ ಪುನಃ ।
ಮಾಯಾಂ ಕೃತ್ವಾತ್ಮನೋ ರೂಪಂ ದೇವಸ್ತದ್ವನಮಾಗತಃ ॥ ೧೭ ॥

ಕೃತ್ವಾ ಗಿರಿಸುತಾಂ ಗೌರೀಂ ಪಾರ್ಶ್ವೇ ದೇವಃ ಪಿನಾಕಧೃಕ್ ।
ಸಾ ಚ ಪೂರ್ವವದ್ದೇವೇಶೀ ದೇವದಾರುವನಂ ಗತಾ ॥ ೧೮ ॥

---

೧೫. ಭಸ್ಮಲೇಪನದಿಂದ ಶುಭ್ರವಾದ ದೇಹವುಳ್ಳವನೂ, ನಗ್ನಾವಸ್ಥೆಯುಳ್ಳವನೂ, ವಿಕಾರವಾದ ರೂಪವುಳ್ಳವನೂ, ಬೆಂಕಿಯ ಕೊಳ್ಳಿಯನ್ನು ಧರಿಸಿದ ಪಾಣಿಯುಳ್ಳವನೂ ಮತ್ತು ಕೆಂಪು-ಹೊಂಬಣ್ಣಗಳಿಂದ ಕೂಡಿದ ನೇತ್ರವುಳ್ಳವನೂ ಆಗಿ ದೇವದಾರು ವನಕ್ಕೆ ಬಂದನು.

೧೬. ಮತ್ತು ಮತ್ತೆ ಬಂದ ಪರಮೇಶ್ವರನನ್ನು ಆ ವನದಲ್ಲಿ ಕೆಲವುಕಡೆ ರುದ್ರಾಕಾರದಿಂದ ಹಾಸ್ಯಮಾಡುವನು. ಕೆಲವುಕಡೆ ಆಶ್ಚರ್ಯದಿಂದ ಗಾನಮಾಡುವನು. ಮತ್ತೆ ಕೆಲವುಕಡೆ ಶೃಂಗಾರಿಯಾಗಿ ನರ್ತನಮಾಡುವನು ಮತ್ತು ಇನ್ನು ಕೆಲವು ಕಡೆಗಳಲ್ಲಿ ಮತ್ತೆ ಮತ್ತೆ ಶಬ್ದಮಾಡುವನು.

೧೭. ಮಹೇಶ್ವರನು ಭಿಕ್ಷುವಾಗಿ ಅಲ್ಲಲ್ಲಿ ಆಶ್ರಮಗಳಲ್ಲಿ ಸಂಚರಿಸುತ್ತಾನೆ. ಮತ್ತೆ ಮತ್ತೆ ಆಶ್ರಮಗಳಲ್ಲಿ ಭಿಕ್ಷೆಬೇಡುವನು. ಹೀಗೆ ಮಾಯಿಕವಾದ ತನ್ನ ರೂಪವನ್ನು ಧರಿಸಿ ದಾರುವನಕ್ಕೆ ಬಂದನು.

೧೮. ಪಿನಾಕಾಯುಧಧಾರಿಯಾದ ಈಶ್ವರನು ಹಿಮಾಲಯನ ಮಗಳಾದ ಪಾರ್ವತೀದೇವಿಯನ್ನು ಪಾರ್ಶ್ವದಲ್ಲಿ ಕರೆದುಕೊಂಡು ಬಂದನು. ದೇವತೆಗಳಿಗೆ ಈಶ್ವರಿಯಾದ ಗೌರಿಯು ಮೊದಲು ಈಶ್ವರನ ಜೊತೆಯಲ್ಲಿ ನಾರಾಯಣನು ಭಾರ್ಯೆಯಾಗಿ ಬಂದಂತೆ ದೇವದಾರುವನಕ್ಕೆ ಬಂದಳು.

ದೃಷ್ಟ್ವಾ ಸಮಾಗತಂ ದೇವಂ ದೇವ್ಯಾ ಸಹ ಕಪರ್ದಿನಮ್ ।
ಪ್ರಣೇಮುಃ ಶಿರಸಾ ಭೂಮೌ ತೋಷಯಾಮಾಸುರೀಶ್ವರಮ್ ॥ ೧೯ ॥

ವೈದಿಕೈರ್ವಿವಿಧೈರ್ಮಂತ್ರೈಃ ಸ್ತೋತ್ರೈರ್ಮಾಹೇಶ್ವರೈಃ ಶುಭೈಃ ।
ಅಥರ್ವಶಿರಸಾ ಚಾನ್ಯೇ ರುದ್ರಾದ್ಯೈರರ್ಚಯನ್ ಭವಮ್ ॥ ೨೦ ॥

ನಮೋ ದೇವಾಧಿದೇವಾಯ ಮಹಾದೇವಾಯ ತೇ ನಮಃ ।
ತ್ರ್ಯಂಬಕಾಯ ನಮಸ್ತುಭ್ಯಂ ತ್ರಿಶೂಲವರಧಾರಿಣೇ ॥ ೨೧ ॥

ನಮೋ ದಿಗ್ವಾಸಸೇ ತುಭ್ಯಂ ವಿಕೃತಾಯ ಪಿನಾಕಿನೇ ।
ಸರ್ವಪ್ರಣತದೇವಾಯ ಸ್ವಯಮಪ್ರಣತಾತ್ಮನೇ ॥ ೨೨ ॥

---

೧೯. ಆಗ ಆ ತಪಸ್ವಿಗಳು ದೇವಿಯೊಡನೆ ಬಂದಿರುವ ಜಟಾಜೂಟಧರನಾದ ಈಶ್ವರನನ್ನು ಕಂಡು ಭೂಮಿಗೆ ತಲೆಬಾಗಿಸಿ ವಂದನೆಮಾಡಿ ಈಶ್ವರನನ್ನು ಪ್ರಸಾದ ಗೊಳಿಸಿದರು.

೨೦. ವೇದಗಳಲ್ಲಿ ಅಡಗಿದ ಅನೇಕ ಮಂತ್ರಗಳಿಂದಲೂ, ಈಶ್ವರನ ಪರ ವಾದ ಮಂಗಳಸ್ತುತಿ ಪಾಠಗಳಿಂದಲೂ ಅಥರ್ವಶೀರ್ಷ ಉಪನಿಷತ್ತುಗಳಿಂದಲೂ ಮತ್ತು ಇತರ ರುದ್ರಸೂಕ್ತಾದಿಗಳಿಂದಲೂ ಈಶ್ವರನನ್ನು ಅರ್ಚಿಸಿದರು.

೨೧. ಮತ್ತು ಈ ರೀತಿಯಾಗಿ ಸ್ತುತಿಸಿ ವಂದಿಸಿದರು:— ದೇವತೆಗಳಿಗೆ ಅಧಿದೇವತೆಯಾದ ನಿನಗೆ ನಮಸ್ಕಾರವು. ದೇವೋತ್ತಮನಾದ ನಿನಗೆ ನಮಸ್ಕಾರವು. ಮೂರು ನೇತ್ರಗಳಿಂದ ಶೋಭಿತನೂ, ಶ್ರೇಷ್ಠವಾದ ತ್ರಿಶೂಲವನ್ನು ಧರಿಸಿದವನೂ ಆದ ನಿನಗೆ ನಮಸ್ಕಾರವು.

೨೨. ಮತ್ತು ದಿಗಂಬರನಾಗಿರುವ ನಿನಗೆ ನಮಸ್ಕಾರವು. ಹಾಗು ವಿಕಾರ ವಾದ ರೂಪವನ್ನು ಧರಿಸಿದವನೂ, ಸಮಸ್ತ ದೇವತೆಗಳಿಂದ ವಂದಿಸಲ್ಪಟ್ಟ ದೇವನೂ ಮತ್ತು ಇತರರಿಗೆ ಪ್ರಣಾಮಮಾಡದಿರುವ ಆತ್ಮವುಳ್ಳವನೂ ಆದ ನಿನಗೆ ನಮಸ್ಕಾರವು.

ಅಂತಕಾಂತಕೃತೇ ತುಭ್ಯಂ ಸರ್ವಸಂಹರಣಾಯ ಚ ।
ನಮೋಽಸ್ತು ನೃತ್ಯಶೀಲಾಯ ನಮೋ ಭೈರವರೂಪಿಣೇ ॥ ೨೩ ॥

ನರನಾರೀಶರೀರಾಯ ಯೋಗಿನಾಂ ಗುರವೇ ನಮಃ ।
ನಮೋ ದಾಂತಾಯ ಶಾಂತಾಯ ತಾಪಸಾಯ ಹರಾಯ ಚ ॥ ೨೪ ॥

ವಿಭೀಷಣಾಯ ರುದ್ರಾಯ ನಮಸ್ತೇ ಕೃತ್ತಿವಾಸಸೇ ।
ನಮಸ್ತೇ ಲೇಲಿಹಾನಾಯ ಶ್ರೀಕಂಠಾಯ ಚ ತೇ ನಮಃ ॥ ೨೫ ॥

ಅಘೋರಘೋರರೂಪಾಯ ವಾಮದೇವಾಯ ವೈ ನಮಃ ।
ನಮಃ ಕನಕಮಾಲಾಯ ದೇವ್ಯಾಃ ಪ್ರಿಯಕರಾಯ ಚ ॥ ೨೬ ॥

---

೨೩. ಹಾಗು ಅಂತಕನಿಗೆ ಅಂತವನ್ನು ಮಾಡಿದವನೂ, ಸರ್ವವ್ಯಕ್ತಿಗಳನ್ನು ನಾಶಮಾಡುವವನೂ ಆದ ನಿನಗೆ ನಮಸ್ಕಾರವು. ನರ್ತನಮಾಡುವ ಶೀಲವುಳ್ಳವನಾದ ಈಶ್ವರನಿಗೆ ನಮಸ್ಕಾರವು. ಭೈರವವಾದ ರೂಪವುಳ್ಳವನಿಗೆ ನಮಸ್ಕಾರವು.

೨೪. ಅರ್ಧನಾರಿಯಶರೀರದಿಂದ ಕೂಡಿದ ನರದೇಹವುಳ್ಳವನೂ, ಯೋಗಿಗಳಿಗೆ ಗುರುವೂ ಆದ ನಿನಗೆ ನಮಸ್ಕಾರವು. ಜಿತೇಂದ್ರಿಯನೂ, ಶಮಶೀಲನೂ, ತಾಪಸಸ್ವರೂಪನೂ, ಮತ್ತು ಸಂಹಾರಕನೂ ಆದ ನಿನಗೆ ನಮಸ್ಕಾರವು.

೨೫. ಭಯಂಕರ ಮೂರ್ತಿಯುಳ್ಳವನೂ, ರುದ್ರಸ್ವರೂಪನೂ, ಮತ್ತು ಗಜಚರ್ಮಾಂಬರಧರನೂ, ಆದ ಶಿವನಿಗೆ ವಂದನೆಯು. ಪ್ರಲಯದಲ್ಲಿ ಜಗತ್ತನ್ನು ಆಸ್ವಾದಿಸುವವನಿಗೆ ನಮಸ್ಕಾರವು. ಹಾಗು ವಿಷಕಂಠದೇವನಿಗೆ ವಂದನೆಯು.

೨೬. ಸ್ವೇಚ್ಛಾವಶದಿಂದ ಅಘೋರವೂ ಘೋರವೂ ಆದ ರೂಪವುಳ್ಳವನೂ, ವಾಮದೇವಸ್ವರೂಪನೂ ಆದ ನಿನಗೆ ವಂದನೆಯು ಸುವರ್ಣಮಯವಾದ ಹಾರವನ್ನು ಧರಿಸಿದ ಸುಂದರರೂಪದಿಂದ ದೇವಿಗೆ ಪ್ರೀತಿಯನ್ನು ಕೊಟ್ಟಿರುವ ಶಂಕರನಿಗೆ ವಂದಿಸುವೆನು.

ಗಂಗಾಸಲಿಲಧಾರಾಯ ಶಂಭವೇ ಪರಮೇಷ್ಠಿನೇ ।
ನಮೋ ಯೋಗಾಧಿಪತಯೇ ಭೂತಾಧಿಪತಯೇ ನಮಃ ॥ ೨೭ ॥

ಪ್ರಾಣಾಯ ಚ ನಮಸ್ತುಭ್ಯಂ ನಮೋ ಭಸ್ಮಾಂಗಧಾರಿಣೇ ।
ನಮಸ್ತೇ ಹವ್ಯವಾಹಾಯ ದಂಷ್ಟ್ರಿಣೇ ಹವ್ಯರೇತಸೇ ॥ ೨೮ ॥

ಬ್ರಹ್ಮಣಶ್ಚ ಶಿರೋಹರ್ತ್ರೇ ನಮಸ್ತೇ ಕಾಲರೂಪಿಣೇ ।
ಆಗತಿಂ ತೇ ನ ಜಾನೀಮೋ ಗತಿಂ ನೈವ ಚ ನೈವ ಚ ॥ ೨೯ ॥

ವಿಶ್ವೇಶ್ವರ ಮಹಾದೇವ ಯೋಽಸಿ ಸೋಽಸಿ ನಮೋಽಸ್ತು ತೇ ।
ನಮಃ ಪ್ರಮಥನಾಥಾಯ ದಾತ್ರೇ ಚ ಶುಭಸಂಪದಾಮ್ ॥ ೩೦ ॥

---

೨೭. ತಲೆಯಲ್ಲಿ ಗಂಗಾ ತೀರ್ಥವನ್ನು ಧರಿಸಿದವನೂ, ಸುಖದಾಯಕನೂ, ಮತ್ತು ಪರಮಪದದಲ್ಲಿರುವವನೂ. ಆದ ಶಿವನಿಗೆ ನಮಸ್ಕಾರಮಾಡುವೆವು. ಮತ್ತು ಯೋಗವಿಭೂತಿಗಳಿಗೆ ಅಧಿಪತಿಯಾದ ನಿನಗೆ ವಂದಿಸುವೆವು.

೨೮. ಪ್ರಾಣಸ್ವರೂಪಿಯಾದ ನಿನಗೆ ನಮಸ್ಕಾರವು. ಶರೀರದಲ್ಲಿ ಭಸ್ಮವನ್ನು ಲೇಪಿಸಿಕೊಂಡಿರುವ ನಿನಗೆ ನಮಸ್ಕಾರವು. ಹವ್ಯವನ್ನು ದಹಿಸುವ ಅಗ್ನಿರೂಪವುಳ್ಳವನೂ, ಕೋರೆಹಲ್ಲುಗಳಿಂದ ಕೂಡಿದವನೂ ಮತ್ತು ಹವ್ಯರೂಪವಾದ ರೇತೋವಂತನೂ ಆದ ನಿನಗೆ ನಮಸ್ಕರಿಸುವೆವು.

೨೯. ಚತುರ್ಮುಖಬ್ರಹ್ಮನ ಶಿರವನ್ನು ಅಪಹರಿಸುವವನೂ, ಕಾಲ ಸ್ವರೂಪಿಯೂ ಆದ ನಿನಗೆ ನಮಸ್ಕಾರವು. ಸ್ವಾಮಿಯೇ ! ನಿನ್ನಆಗಮನವನ್ನು ನಾವು ತಿಳಿಯಲಾರೆವು. ಅಂತು ನಿನ್ನ ಗತಿಯನ್ನು ತಿಳಿಯಲು ಶಕ್ಯವೆ ಇಲ್ಲ.

೩೦. ವಿಶ್ವಕ್ಕೆ ಈಶ್ವರನೆ! ದೇವೋತ್ತಮನೆ! ನೀನು ಯಾರು ಆಗಿದ್ದೀಯೋ ಅವನೇ ಆಗಿದ್ದೀಯೆ. ನಾವು ಅದನ್ನು ತಿಳಿಯಲಾರೆವು. ನಿನಗೆ ನಮಸ್ಕಾರವು. ಪ್ರಮಥಗಣಗಳಿಗೆ ನಾಯಕನೂ, ಸಂಪತ್ತಿಯನ್ನು ಅನುಗ್ರಹಿಸುವವನೂ ಆದ ನಿನಗೆ ವಂದನೆಯು.

ಕಪಾಲಪಾಣಯೇ ತುಭ್ಯಂ ನಮೋ ಜುಷ್ಟತಮಾಯ ತೇ ।
ನಮಃ ಕನಕಪಿಂಗಾಯ ವಾರಿಲಿಂಗಾಯ ತೇ ನಮಃ ॥ ೩೧ ॥

ನಮೋ ವಹ್ನ್ಯರ್ಕಲಿಂಗಾಯ ಜ್ಞಾನಲಿಂಗಾಯ ತೇ ನಮಃ ।
ನಮೋ ಭುಜಂಗಹಾರಾಯ ಕರ್ಣಿಕಾರಪ್ರಿಯಾಯ ಚ ॥ ೩೨ ॥

ಕಿರೀಟಿನೇ ಕುಂಡಲಿನೇ ಕಾಲಕಾಲಾಯ ತೇ ನಮಃ ॥ ೩೩ ॥

ಮಹಾದೇವ ಮಹಾದೇವ ದೇವದೇವ ತ್ರಿಲೋಚನ ।
ಕ್ಷಮ್ಯತಾಂ ಯತ್ಕೃತಂ ಮೋಹಾತ್ ತ್ವಮೇವ ಶರಣಂ ಹಿ ನಃ ॥ ೩೪ ॥

---

೩೧. ಪಾಣಿಯಲ್ಲಿ ಕಪಾಲವನ್ನು ಧರಿಸಿದವನೂ, ಅನೇಕ ಭಕ್ತರಿಂದ ಸೇವಿಸಲ್ಪಟ್ಟವನೂ ಆದ ನಿನಗೆ ನಮಸ್ಕಾರವು. ಸುವರ್ಣದಂತೆ ಪಿಂಗಳವರ್ಣವುಳ್ಳವನಾದ ನಿನಗೆ ನಮಸ್ಕಾರವು. ಮತ್ತು ಜಲರೂಪವಾದ ಲಿಂಗದಿಂದ ಗೋಚರವಾಗುವ ನಿನ್ನನ್ನು ನಮಸ್ಕರಿಸುವೆನು.

೩೨. ಅಗ್ನಿ-ಸೂರ್ಯರೂಪವಾದ ಲಿಂಗಗಳಿಂದ ಗಮ್ಯವೂ, ಜ್ಞಾನಲಿಂಗದಿಂದ ಗಮ್ಯವೂ ಆದ ನಿನಗೆ ನಮಸ್ಕಾರವು. ನಮಸ್ಕಾರವು. ನಾಗೇಂದ್ರನ ಹಾರವನ್ನು ಧರಿಸಿದವನೂ, ಮತ್ತು ಕರ್ಣಿಕಾರಪುಷ್ಪದಲ್ಲಿ ವಿಶೇಷಪ್ರೀತಿಯುಳ್ಳವನೂ ಆದ ನಿನಗೆ ನಮಸ್ಕಾರವು.

೩೩. ಮತ್ತು ಕಿರೀಟವನ್ನು ಧರಿಸಿರುವವನೂ, ಕುಂಡಲಗಳಿಂದ ಅಲಂಕರಿಸಲ್ಪಟ್ಟವನೂ, ಕಾಲಮೂರ್ತಿಯನ್ನು ನಿಗ್ರಹಿಸಿದ ಕಾಲಮೂರ್ತಿಯೂ ಆದ ನಿನಗೆ ನಮಸ್ಕಾರವು.

೩೪. ದೇವತೆಗಳಲ್ಲಿ ಉತ್ತಮನೆ! ಮಹಾತ್ಮನಾದ ದೇವನೆ! ದೇವತೆಗಳಿಗೆ ದೇವತಾಸ್ವರೂಪಿಯೇ! ಮತ್ತು ಮೂರುಕಣ್ಣುಗಳುಳ್ಳವನೆ! ಮೋಹದಿಂದ ನಮ್ಮಿಂದ ಮಾಡಲ್ಪಟ್ಟ ಅಪರಾಧವು ಕ್ಷಮಿಸಲ್ಪಡಲಿ. ನಮಗೆ ನೀನೆ ಪರಮಗತಿಯು.

ಚರಿತಾನಿ ವಿಚಿತ್ರಾಣಿ ಗುಹ್ಯಾನಿ ಗಹನಾನಿ ಚ ।
ಬ್ರಹ್ಮಾದೀನಾಂ ಚ ಸರ್ವೇಷಾಂ ದುರ್ವಿಜ್ಞೇಯೋ ಹಿ ಶಂಕರಃ॥ ೩೫॥

ಅಜ್ಞಾನಾದ್ಯದಿ ವಾ ಜ್ಞಾನಾದ್ಯತ್ಕಿಂಚಿತ್ಕುರುತೇ ನರಃ ।
ತತ್ಸರ್ವಂ ಭಗವಾನೇವ ಕುರುತೇ ಯೋಗಮಾಯಯಾ ॥ ೩೬ ॥

ಏವಂ ಸ್ತುತ್ವಾ ಮಹಾದೇವಂ ಪ್ರಹೃಷ್ಟೇನಾಂತರಾತ್ಮಭಿಃ ।
ಊಚುಃ ಪ್ರಣಮ್ಯ ಗಿರಿಶಂ ಪಶ್ಯಾಮಸ್ತ್ವಾಂ ಯಥಾ ಪುರಾ ॥ ೩೭ ॥

ತೇಷಾಂ ಸಂಸ್ತವಮಾಕರ್ಣ್ಯ ಸೋಮಃ ಸೋಮವಿಭೂಷಣಃ ।
ಸ್ವಯಮೇವ ಪರಂ ರೂಪಂ ದರ್ಶಯಾಮಾಸ ಶಂಕರಃ ॥ ೩೮ ॥

---

೩೫. ನಿನ್ನ ವಿಚಿತ್ರವಾದ ಚರಿತ್ರೆಗಳು ಬಹು ರಹಸ್ಯವೂ ಅತಿ ಗಹನವೂ ಆಗಿವೆ. ಆದ್ದರಿಂದ ಶಂಕರನು ಬ್ರಹ್ಮನೆ ಮೊದಲಾದ ಸಮಸ್ತ ದೇವತೆಗಳಿಗೆ ಕೂಡ ತಿಳಿಯಲು ಅಶಕ್ಯನಾಗಿರುವನು.

೩೬. ಮಾನವನು ಅಜ್ಞಾನವಶದಿಂದಲಾಗಲೀ ಅಥವಾ ಜ್ಞಾನಪೂರ್ವಕವಾಗಿಯಾಗಲಿ, ಯಾವುದನ್ನು ಕಿಂಚಿತ್ತಾದರೂ ಮಾಡುವನೊ; ಷಡ್ಗುಣೈಶ್ವರ್ಯ ಸಂಪನ್ನನಾದ ನೀನೆ ಯೋಗಮಾಯೆಯಿಂದ ಅದೆಲ್ಲವನ್ನೂ ಮಾಡುವವನಾಗಿದ್ದೀಯೆ.

೩೭. ಸರ್ವೇಶ್ವರನ ತತ್ತ್ವದ ಅಂತರವನ್ನು ಪ್ರವೇಶಿಸಿದ ಅಂತರಾತ್ಮವುಳ್ಳವರಾಗಿ ಮುನಿಗಳು ಪರಮೇಶ್ವರನನ್ನು ಸ್ತುತಿಮಾಡಿ ಕೈಲಾಸನಾಥನಾದ ಈಶ್ವರನಿಗೆ ಹೇಳಿದರು. ಸ್ವಾಮಿಯೆ ! ನಿನ್ನ ಮೊದಲಿನಂತೆ ಇರುವ ರೂಪವನ್ನು ನೋಡುವೆವು.

೩೮. ಚಂದ್ರಕಲಾಭರಣದಿಂದ ಶೋಭಿಸುವ ಈಶ್ವರನು ಗೌರೀ ಸಮೇತನಾಗಿ ಮುನಿಗಳ ಸ್ತುತಿವಚನವನ್ನು ಕೇಳಿ ತಾನಾಗಿಯೆ ತನ್ನ ಪರರೂಪವನ್ನು ಮುನಿಗಳಿಗೆ ತೋರಿಸಿದನು.

ತಂ ತೇ ದೃಷ್ಟ್ವಾಥ ಗಿರಿಶಂ ದೇವ್ಯಾ ಸಹ ಪಿನಾಕಿನಮ್ ।
ಯಥಾಪೂರ್ವಂ ಸ್ಥಿತಾ ವಿಪ್ರಾಃ ಪ್ರಣೇಮುರ್ಹೃಷ್ಟಮಾನಸಾಃ ॥ ೩೯ ॥

ತತಸ್ತೇ ಮುನಯಃ ಸರ್ವೇ ಸಂಸ್ತೂಯ ಚ ಮಹೇಶ್ವರಮ್ ।
ಭೃಗ್ವಂಗಿರಾ ವಸಿಷ್ಠಸ್ತು ವಿಶ್ವಾಮಿತ್ರಸ್ತಥೈವ ಚ ॥ ೪೦ ॥

ಗೌತಮೋಽತ್ರಿಃ ಸುಕೇಶಶ್ಚ ಪುಲಸ್ತ್ಯಃ ಪುಲಹಃ ಕ್ರತುಃ ।
ಮರೀಚಿಃ ಕಶ್ಯಪಶ್ಚಾಪಿ ಸಂವರ್ತಕಮಹಾತಪಾಃ ॥ ೪೧ ॥

ಪ್ರಣಮ್ಯ ದೇವದೇವೇಶಮಿದಂ ವಚನಮಬ್ರುವನ್ ॥ ೪೨ ॥

---

೩೯. ತರುವಾಯ ಪಿನಾಕ ಆಯುಧವನ್ನು ಧರಿಸಿದವನೂ, ಕೈಲಾಸ ವಿಹಾರಿಯೂ ಆದ ಗೌರೀದೇವಿಯೊಡನೆ ಇರುವ ಶಂಕರನನ್ನು ನೋಡಿ ಪೂರ್ವದಂತೆ ಇರುವ ಆ ಎಲ್ಲ ವಿಪ್ರರು ಸಂತುಷ್ಟವಾದ ಮಾನಸವುಳ್ಳವರಾಗಿ ಈಶ್ವರನನ್ನು ನಮಸ್ಕರಿಸಿದರು.

೪೦. ತರುವಾಯ ಅಲ್ಲಿ ಸೇರಿರುವ ಸಮಸ್ತಮುನಿಗಳು ಪರಮೇಶ್ವರನನ್ನು ಸ್ತೋತ್ರಮಾಡಿದರು. ಅಲ್ಲಿ ನೆರೆದಿರುವ ಭಕ್ತರಾದ ಮುನಿಗಳಲ್ಲಿ ಭೃಗು, ಅಂಗಿರಾ, ವಸಿಷ್ಠ, ಮತ್ತು ವಿಶ್ವಾಮಿತ್ರ ಎಂಬ ಮುನಿಗಳು ಸೇರಿದ್ದರು.

೪೧. ಹಾಗು ಗೌತಮ, ಅತ್ರಿ ಸುಕೇಶ, ಪುಲಸ್ತ್ಯ, ಪುಲಹ, ಕ್ರತು. ಮರೀಚಿ ಕಶ್ಯಪ, ಸಂವರ್ತಕ, ಮತ್ತು ಮಹಾತಪ ಎಂಬ ಸಂಜ್ಞಾಂಕಿತರಾದ ಮಹಾಮುನಿಗಳು ಆ ಮುನಿಗಳ ಗುಂಪಿಗೆ ಸೇರಿದ್ದರು.

೪೨. ಈ ರೀತಿಯಾಗಿ ಸೇರಿರುವ ಮಹಾಮುನಿಗಳೆಲ್ಲರೂ ಪರಮ ಭಕ್ತಿ ಭಾವದಿಂದ ಸ್ತುತಿ ನಮಸ್ಕಾರಗಳನ್ನು ಮಾಡಿ ಅಪರಾಧವನ್ನು ಕ್ಷಮಿಸುವಂತೆ ಮಾಡಿ ಮತ್ತೆ ಶಂಕರನನ್ನು ಕುರಿತು ಹೇಳಿದರು.

ಕಥಂ ತ್ವಾ ದೇವದೇವೇಶ ಕರ್ಮಯೋಗೇನ ವಾ ಪ್ರಭೋ ।
ಜ್ಞಾನೇನ ವಾಥ ಯೋಗೇನ ಪೂಜಯಾಮಃ ಸದೈವ ಹಿ ॥ ೪೩ ॥

ಕೇನ ವಾ ದೇವ ಮಾರ್ಗೇಣ ಸಂಪೂಜ್ಯೋ ಭಗವಾನಿಹ ।
ಕಿಂ ತತ್ಸೇವ್ಯಮಸೇವ್ಯಂ ವಾ ಸರ್ವಮೇತದ್ಬ್ರವೀಹಿ ನಃ ॥ ೪೪ ॥

ಶ್ರೀ ಶಿವ ಉವಾಚ:—

ಏತದ್ವಃ ಸಂಪ್ರವಕ್ಷ್ಯಾಮಿ ಗೂಢಂ ಗಹನಮುತ್ತಮಮ್ ।
ಬ್ರಹ್ಮಣಾ ಕಥಿತಂ ಪೂರ್ವಂ ಮಹಾದೇವೇ ಮಹರ್ಷಯಃ ॥ ೪೫ ॥

ಸಾಂಖ್ಯಯೋಗಾದ್ದ್ವಿಧಾ ಜ್ಞೇಯಂ ಪುರುಷಾಣಾಂ ಹಿ ಸಾಧನಮ್ ।
ಯೋಗೇನ ಸಹಿತಂ ಸಾಂಖ್ಯಂ ಪುರುಷಾಣಾಂ ವಿಮುಕ್ತಿದಮ್ ॥ ೪೬ ॥

---

೪೩. ದೇವರಿಗೆ ಈಶ್ವರನೂ ಪ್ರಕಾಶಸ್ವರೂಪನೂ ಮತ್ತು ಪ್ರಭುವೂ ಆದ ಶಂಕರನೆ! ಕರ್ಮಯೋಗದಿಂದಲೊ, ಅಥವಾ ಜ್ಞಾನಯೋಗದಿಂದಲೊ, ನಿನ್ನನ್ನು ಸರ್ವಕಾಲಗಳಲ್ಲಿಯೂ ನಾವು ಪೂಜೆಮಾಡುವುದು ಹೇಗೆ?

೪೪. ಸ್ವಾಮಿಯೆ! ಇಲ್ಲಿ ನಮ್ಮಿಂದ ಭಗವಂತನಾದ ನೀನು ಯಾವ ಮಾರ್ಗದಿಂದ ಪೂಜಿಸಲ್ಪಡುವವನಾಗುತ್ತೀಯೆ? ನಿನ್ನ ಪೂಜಾಂಗವಾಗಿ ಯಾವುದನ್ನು ಸೇವಿಸಬೇಕು? ಅಥವಾ ಯಾವುದನ್ನು ಸೇವಿಸದೆ ಬಿಡಬೇಕು? ಇದೆಲ್ಲವನ್ನೂ ನಮಗೆ ಹೇಳು.

೪೫. ಶಂಕರನು ಹೀಗೆಂದು ಹೇಳಿದನು:— ಮುನಿಗಳೆ! ನೀವು ಪ್ರಶ್ನಿಸಿದ ರಹಸ್ಯವೂ ದುರ್ಜ್ಞೇಯವೂ ಮತ್ತು ಉತ್ತಮವೂ ಆದ ವಿಷಯವನ್ನು ನಿಮಗೆ ಹೇಳುತ್ತೇನೆ. ಪೂರ್ವದಲ್ಲಿ ಮಹಾದೇವನ ವಿಷಯದಲ್ಲಿ ತತ್ತ್ವವು ಬ್ರಹ್ಮದೇವನಿಂದ ಹೇಳಲ್ಪಟ್ಟಿದೆ.

೪೬. ಮಾನವರಿಗೆ ಮೋಕ್ಷಪುರುಷಾರ್ಥವನ್ನು ಉಂಟುಮಾಡುವ ಸಾಧನವು ಸಾಂಖ್ಯ ಮತ್ತು ಯೋಗವೆಂದು ಎರಡುವಿಧವೆಂದು ತಿಳಿಯಬೇಕು. ಅಂತಹ ಯೋಗದಿಂದ ಮಿಶ್ರವಾದ ಸಾಂಖ್ಯಮಾರ್ಗವು ಮನುಷ್ಯರಿಗೆ ಮುಕ್ತಿಯನ್ನು ಕೊಡುವುದು.

ನ ಕೇವಲಂ ಹಿ ಯೋಗೇನ ದೃಶ್ಯತೇ ಪುರುಷಃ ಪರಃ ।
ಜ್ಞಾನಂ ತು ಕೇವಲಂ ಸಮ್ಯಗಪವರ್ಗಫಲಪ್ರದಮ್ ॥ ೪೭ ॥

ಭವಂತಃ ಕೇವಲಂ ಯೋಗಂ ಸಮಾಶ್ರಿತ್ಯ ವಿಮುಕ್ತಯೇ ।
ವಿಹಾಯ ಸಾಂಖ್ಯಂ ವಿಮಲಮಕುರ್ವತ ಪರಿಶ್ರಮಮ್ ॥ ೪೮ ॥

ಏತಸ್ಮಾತ್ಕಾರಣಾದ್ವಿಪ್ರಾ ನೃಣಾಂ ಕೇವಲಕರ್ಮಣಾಮ್ ।
ಆಗತೋಽಹಮಿಮಂ ದೇಶಂ ಜ್ಞಾಪಯನ್ ಮೋಹಸಂಭವಮ್॥ ೪೯ ॥

ತಸ್ಮಾದ್ಭವದ್ಭಿರ್ವಿಮಲಂ ಜ್ಞಾನಂ ಕೈವಲ್ಯಸಾಧನಮ್ ।
ಜ್ಞಾತವ್ಯಂ ಹಿ ಪ್ರಯತ್ನೇನ ಶ್ರೋತವ್ಯಂ ದೃಶ್ಯಮೇವ ಚ ॥ ೫೦ ॥

---

೪೭. ಪರಮಪುರುಷರೂಪಿಯಾದ ಪರಬ್ರಹ್ಮವಸ್ತುವು ಜ್ಞಾನಯೋಗವಿಲ್ಲದ ಯೋಗಮಾರ್ಗದಿಂದಲೆ ಪ್ರತ್ಯಕ್ಷವಾಗುವುದಿಲ್ಲ. ಪರಮಾರ್ಥಜ್ಞಾನವು ಸಾಧನಾಂತರ ವಿಲ್ಲದೆ ಮುಕ್ತಿಯೆಂಬ ಫಲವನ್ನು ಕೊಡುವುದು.

೪೮. ನೀವೆಲ್ಲರೂ ನಿರ್ಮಲವಾದ ಸಾಂಖ್ಯಮಾರ್ಗವನ್ನು ಬಿಟ್ಟು ಒಂದೇ ಆದ ಯೋಗಮಾರ್ಗವನ್ನು ಮುಕ್ತಿಫಲ ಲಾಭಕ್ಕೋಸ್ಕರ ಆಶ್ರಯಿಸಿ ತುಂಬಾ ಅನು ಷ್ಠಾನ ಪರಿಶ್ರಮವನ್ನು ಹೊಂದಿದಿರಿ.

೪೯. ವಿಪ್ರರೇ ! ಈ ಕಾರಣದಿಂದಲೆ ಮಾನವನು ಕೇವಲ ಕರ್ಮಾನುಷ್ಠಾನ ಮಾಡುತ್ತ ಅವಲಂಬಿಸಿದ ಯೋಗಮಾರ್ಗವು ಮೋಹಕ್ಕೆ ಕಾರಣವಾಗುವುದೆಂಬು ದನ್ನು ಬೋಧಿಸಲು ನಾನು ಈ ಪ್ರದೇಶಕ್ಕೆ ಬಂದಿರುವೆನು.

೫೦. ಆದುದರಿಂದ ನೀವೆಲ್ಲರೂ ಕೈವಲ್ಯಪುರುಷಾರ್ಥಕ್ಕೆ ಸಾಧನವಾದ ಪರ ಮಾರ್ಥ ತತ್ತ್ವಜ್ಞಾನಮಾರ್ಗವನ್ನು ಪ್ರಯತ್ನಪೂರ್ವಕವಾಗಿ ತಿಳಿಯಬೇಕು. ಅದನ್ನು ಶ್ರವಣಮಾಡಬೇಕು. ತತ್ತ್ವವನ್ನು ಸಾಕ್ಷಾತ್ಕರಿಸಬೇಕು.

ಏಕಃ ಸರ್ವತ್ರಗೋ ಹ್ಯಾತ್ಮಾ ಕೇವಲಶ್ಚಿತಿಮಾತ್ರಕಃ ।
ಆನಂದೋ ನಿರ್ಮಲೋ ನಿತ್ಯ ಏತದ್ವೈ ಸಾಂಖ್ಯದರ್ಶನಮ್ ॥ ೫೧ ॥

ಏತದೇವ ಪರಂ ಜ್ಞಾನಮಥ ಮೋಕ್ಷೋಽನುಗೀಯತೇ ।
ಏತತ್ಕೈವಲ್ಯಮಮಲಂ ಬ್ರಹ್ಮಭಾವಶ್ಚ ವರ್ಣಿತಃ ॥ ೫೨ ॥

ಆಶ್ರಿತ್ಯ ಚೈತತ್ಪರಮಂ ತನ್ನಿಷ್ಠಾಸ್ತತ್ಪರಾಯಣಾಃ ।
ಪಶ್ಯಂತಿ ಮಾಂ ಮಹಾತ್ಮಾನೋ ಯತಯೋ ವಿಶ್ವಮೀಶ್ವರಮ್॥ ೫೩ ॥

ಏತತ್ತತ್ಪರಮಂ ಜ್ಞಾನಂ ಕೇವಲಂ ಸನ್ನಿರಂಜನಮ್ ।
ಅಹಂ ಹಿ ವೇದ್ಯೋ ಭಗವಾನ್ ಮಮ ಮೂರ್ತಿರಿಯಂ ಶಿವಾ ॥ ೫೪ ॥

---

೫೧. ಆತ್ಮವಸ್ತುವು ಅದ್ವಿತೀಯವೂ ಸರ್ವವ್ಯಾಪಿಯೂ ಕೇವಲ ಸ್ವರೂಪವೂ ಚೈತನ್ಯಶಕ್ತಿಪೂರ್ಣವೂ ಆನಂದಾತ್ಮಕವೂ ನಿಷ್ಕಳಂಕವೂ ನಿತ್ಯವೂ ಆಗಿರುವುದೆಂಬ ಜ್ಞಾನವೇ ಸಾಂಖ್ಯದೃಷ್ಟಿಯೆನಿಸುವುದು.

೫೨. ಇದೇ ಪರಮಾರ್ಥತತ್ತ್ವಜ್ಞಾನವು. ಮತ್ತೆ ಇದೇ ಮೋಕ್ಷವೆಂದೂ ಹೇಳಲ್ಪಡುತ್ತದೆ. ಇದೇ ನಿರ್ಮಲವಾದ ಕೈವಲ್ಯದಶೆಯು. ಹೀಗೆ ಬ್ರಹ್ಮಭಾವ ಪ್ರಾಪ್ತಿಯು ಮೋಕ್ಷವೆಂದು ಕರೆಯಲ್ಪಡುವುದು.

೫೩. ಶ್ರೇಷ್ಠವಾದ ಈ ಜ್ಞಾನನಿಷ್ಠೆಯನ್ನು ಹೊಂದಿ ಜ್ಞಾನಯೋಗದಲ್ಲಿ ನಿಷ್ಠೆ-ತತ್ಪರತೆಗಳಿಂದ ಕೂಡಿದ, ಮಹಾತ್ಮರಾದ ಮತ್ತು ಜಿತೇಂದ್ರಿಯರಾದಯತಿಗಳು ವಿಶ್ವರೂಪಿಯೂ ವಿಶ್ವೇಶ್ವರನೂ ಆದ ನನ್ನನ್ನು ಸಾಕ್ಷಾತ್ಕರಿಸುತ್ತಾರೆ.

೫೪. ಜ್ಞಾನಾಕಾರವಾದ ಈ ಪರಬ್ರಹ್ಮವಸ್ತುವು ಸರ್ವೋತ್ತಮವೂ ಅದ್ವಿತೀಯವೂ, ಅಬಾಧಿತವೂ ಮತ್ತು ನಿರಂಜನವೂ ಆಗಿದೆ. ಷಡ್ಗುಣೈಶ್ವರ್ಯಸಂಪನ್ನನಾದ ನಾನು ವೇದ್ಯವಾದ ವಸ್ತುವಾಗಿರುವೆನು. ಈ ಪಾರ್ವತೀದೇವಿಯು ನನಗೆ ವ್ಯತಿರಿಕ್ತವಲ್ಲದ ಮೂರ್ತಿಸ್ವರೂಪಳಾಗಿರುವಳು.

ಬಹೂನಿ ಸಾಧನಾನೀಹ ಸಿದ್ಧಯೇ ಕಥಿತಾನಿ ತು ।
ತೇಷಾಮಭ್ಯಧಿಕಂ ಜ್ಞಾನಂ ಮಾಮಕಂ ದ್ವಿಜಪುಂಗವಾಃ ॥ ೫೫ ॥

ಜ್ಞಾನಯೋಗರತಾಃ ಶಾಂತಾ ಮಾಮೇವ ಶರಣಂ ಗತಾಃ ।
ಯೇ ಹಿ ಮಾಂ ಭಸ್ಮನಿರತಾ ಧ್ಯಾಯಂತಿ ಸತತಂ ಹೃದಿ ॥ ೫೬ ॥

ಮದ್ಭಕ್ತಿತತ್ಪರಾ ನಿತ್ಯಂ ಯತಯಃ ಕ್ಷೀಣಕಲ್ಮಷಾಃ ।
ನಾಶಯಾಮ್ಯಚಿರಾತ್ತೇಷಾಂ ಘೋರಂ ಸಂಸಾರಗಹ್ವರಮ್ ॥ ೫೭ ॥

ನಿರ್ಮಿತಂ ಹಿ ಮಯಾ ಪೂರ್ವಂ ವ್ರತಂ ಪಾಶುಪತಂ ಶುಭಮ್ ।
ಗುಹ್ಯಾದ್ಗುಹ್ಯತಮಂ ಸೂಕ್ಷ್ಮಂ ವೇದಸಾರಂ ವಿಮುಕ್ತಯೇ ॥ ೫೮ ॥

---

೫೫. ದ್ವಿಜೋತ್ತಮರೆ ! ಈ ಪ್ರಪಂಚದಲ್ಲಿ ವಿವಿಧ ಸಿದ್ಧಿಗಳನ್ನು ಹೊಂದಲು ಅನೇಕ ಸಾಧನಗಳು ಹೇಳಲ್ಪಟ್ಟಿರುತ್ತವೆ. ಆದರೆ ಆ ಎಲ್ಲ ಸಾಧನಗಳಲ್ಲಿ ನನ್ನ ಜ್ಞಾನವೆಂಬುದು ಉತ್ತಮವಾದ ಸಾಧನವಾಗಿದೆ.

೫೬. ಇಂತಹ ಜ್ಞಾನಯೋಗದಲ್ಲಿ ತತ್ಪರರೂ, ಶಾಂತಚಿತ್ತರೂ, ಮಾನಸ ದಲ್ಲಿ ನನ್ನನ್ನೇ ಶರಣುಹೊಂದಿದವರೂ ಮತ್ತು ಭಸ್ಮೋದ್ಧೂಲನದಲ್ಲಿ ತತ್ಪರರೂ ಆಗಿ ಹೃದಯದಲ್ಲಿ ಸಂತತವಾಗಿ ನನ್ನನ್ನು ಧ್ಯಾನಿಸಬೇಕು.

೫೭. ನನ್ನಲ್ಲಿ ಭಕ್ತಿಪರತಂತ್ರರೂ, ಜಿತೇಂದ್ರಿಯರೂ ಮತ್ತು ಕ್ಷಯಿಸಿದ ಪಾಪಕರ್ಮವುಳ್ಳವರೂ ಆಗಿ, ನನ್ನನ್ನು ಧ್ಯಾನಿಸಿದವರ ಘೋರವಾದ ಸಂಸಾರ ಬಂಧ ಸಂಕಟವನ್ನು ನಾನು ಶೀಘ್ರವಾಗಿ ನಾಶಮಾಡುತ್ತೇನೆ.

೫೮. ಮುಕ್ತಿಗೆ ಸಾಧನವಾಗಿ ಪೂರ್ವದಲ್ಲಿ ನನ್ನಿಂದ ರಹಸ್ಯವಿಷಯಗಳೆಲ್ಲ ಕ್ಕಿಂತ ಅತಿ ರಹಸ್ಯವೂ, ಸೂಕ್ಷ್ಮವೂ ಮತ್ತು ವೇದಗಳಲ್ಲಿ ಪ್ರತಿಪಾದಿಸಿರುವ ವಿಷಯ ಗಳಲ್ಲಿ ಸಾರರೂಪವೂ ಆದ ಮಂಗಳಕರ ಪಾಶುಪತವ್ರತವಿಧಾನವು ನಿರ್ಮಿಸಲ್ಪಟ್ಟಿದೆ

ಪ್ರಶಾಂತಃ ಸಂಯತಮನಾ ಭಸ್ಮೋದ್ಧೂಲಿತವಿಗ್ರಹಃ ।
ಬ್ರಹ್ಮಚರ್ಯರತೋ ನಗ್ನೋ ವ್ರತಂ ಪಾಶುಪತಂ ಚರೇತ್ ॥ ೫೯ ॥

ಯದ್ವಾ ಕೌಪೀನವಸನಃ ಸ್ಯಾದೇಕವಸನೋ ಮುನಿಃ ।
ವೇದಾಭ್ಯಾಸರತೋ ವಿದ್ವಾನ್ ಧ್ಯಾಯೇತ್ ಪಶುಪತಿಂ ಶಿವಮ್ ॥ ೬೦ ॥

ಏಷ ಪಾಶುಪತೋ ಯೋಗಃ ಸೇವನೀಯೋ ಮುಮುಕ್ಷುಭಿಃ ।
ತಸ್ಮಿನ್ ಸ್ಥಿತೈಸ್ತು ಪಠಿತಂ ನಿಷ್ಕಾಮೈರಿತಿ ಹಿ ಶ್ರುತಮ್ ॥ ೬೧ ॥

ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।
ಬಹವೋಽನೇನ ಯೋಗೇನ ಪೂತಾ ಮದ್ಭಾವಮಾಗತಾಃ ॥ ೬೨ ॥

---

೫೯. ಶಾಂತಿಯನ್ನು ಹೊಂದಿದವನೂ, ನಿಗ್ರಹಿಸಲ್ಪಟ್ಟ ಮಾನಸವುಳ್ಳವನೂ, ಭಸ್ಮದಿಂದ ಲೇಪಿಸಲ್ಪಟ್ಟ ದೇಹವುಳ್ಳವನೂ, ಬ್ರಹ್ಮಚರ್ಯಾನುಷ್ಠಾನಪರನೂ ಮತ್ತು ದಿಗಂಬರನೂ ಆಗಿ ಪಾಶುಪತವ್ರತವನ್ನು ಆಚರಿಸಬೇಕು.

೬೦. ಅಥವಾ ಕೌಪೀನಮಾತ್ರವನ್ನು ಧರಿಸಿದವನಾಗಲಿ, ಏಕವಸ್ತ್ರವನ್ನು ಧರಿಸಿದವನಾಗಲಿ ಆಗಿದ್ದ ಮುನಿಯು ವೇದಾಭ್ಯಾಸತತ್ಪರನೂ ಜ್ಞಾನನಿಷ್ಠೆಯುಳ್ಳವನೂ ಆಗಿ ಮಂಗಳಮೂರ್ತಿಯಾದ ಪಶುಪತಿಯನ್ನು ಧ್ಯಾನಿಸಬೇಕು.

೬೧. ಇಂತಹ ಪಾಶುಪತಮಹಾಯೋಗದಲ್ಲಿ ತತ್ಪರರೂ, ನಿಷ್ಕಾಮರೂ ಆದ ಮುಮುಕ್ಷುಗಳಿಂದ ಮಹತ್ತಾದ ಈ ಪಾಶುಪತಯೋಗವು ಸೇವಿಸಲ್ಪಡಬೇಕೆಂದು ಶಾಸ್ತ್ರವಚನಗಳಿಂದ ಪ್ರತಿಪಾದಿಸಲ್ಪಟ್ಟಿದೆ.

೬೨. ವಿಷಯಾಭಿಲಾಷೆ, ಭಯ, ಕೋಪ ಮುಂತಾದ ದುಷ್ಟವೃತ್ತಿಗಳನ್ನು ಬಿಟ್ಟು ನಾನೇ ಪರಮಗತಿಯೆಂದು ಪ್ರೀತಿಸಿ, ನನ್ನನ್ನು ಆಶ್ರಯಿಸಿರುವ ಅನೇಕ ಮುಮುಕ್ಷುಜನರು ಈ ಪಾಶುಪತಯೋಗದಿಂದ ನನ್ನ ಐಕ್ಯವನ್ನು ಹೊಂದಿರುವರು.

ಅನ್ಯಾನಿ ಚೈವ ಶಾಸ್ತ್ರಾಣಿ ಲೋಕೇऽಸ್ಮಿನ್ ಮೋಹನಾನಿ ತು ।
ವೇದವಾದವಿರುದ್ಧಾನಿ ಮಯ್ಯೈವ ಕಥಿತಾನಿ ತು ॥ ೬೩ ॥

ವಾಮಂ ಪಾಶುಪತಂ ಸೋಮಂ ಲಾಕುರಂ ಚೈವ ಭೈರವಮ್।
ಅಸೇವ್ಯಮೇತತ್ ಕಥಿತಂ ವೇದಬಾಹ್ಯಂ ತಥೇತರತ್ ॥ ೬೪ ॥

ವೇದಮೂರ್ತಿರಹಂ ವಿಪ್ರಾ ನಾನ್ಯಶಾಸ್ತ್ರಾರ್ಥವೇದಿಭಿಃ ।
ಜ್ಞಾಯತೇ ಮತ್ಸ್ವರೂಪಂ ತು ಮುಕ್ತ್ವಾ ದೇವಂ ಸನಾತನಮ್ ॥

ಸ್ಥಾಪಯಧ್ವಮಿಮಂ ಮಾರ್ಗಂ ಪೂಜಯಧ್ವಂ ಮಹೇಶ್ವರಮ್ ।
ತತೋऽಚಿರಾದ್ವರಂ ಜ್ಞಾನಮುತ್ಪತ್ಸ್ಯತಿ ನ ಸಂಶಯಃ ॥ ೬೬ ॥

---

೬೩. ವೇದಪ್ರತಿಪಾದ್ಯವಾದ ಸಿದ್ಧಾಂತಕ್ಕೆ ವಿರೋಧವಾಗಿರುವ ಮತ್ತು ಮೋಹವನ್ನು ಉಂಟುಮಾಡುವ ಇತರ ಅನೇಕಶಾಸ್ತ್ರಗಳು ಈ ಲೋಕದಲ್ಲಿ ಪ್ರಚಾರವಾಗುವಂತೆ ನನ್ನಿಂದಲೇ ಹೇಳಲ್ಪಟ್ಟವೆ.

೬೪. ವೇದಬಾಹ್ಯಶಾಸ್ತ್ರಗಳಲ್ಲಿ ವಾಮ, ಪಾಶುಪತ, ಸೋಮ, ಲಾಕುರ ಮತ್ತು ಭೈರವವೆಂಬ ವಿವಿಧ ಆಗಮಗಳು ಸೇವಿಸಲು ಅರ್ಹಗಳಲ್ಲವೆಂದು ಹೇಳಲ್ಪಟ್ಟವೆ. ಹೀಗೆ ಅವೈದಿಕವಾದ ಇತರ ಮತಗಳು ಉಪಾದೇಯವಲ್ಲ.

೬೫. ವಿಪ್ರೋತ್ತಮರೆ ! ನಾನು ವೇದವಾಙ್ಮಯ ಮೂರ್ತಿಯಾಗಿರುವೆನು. ಇಂತಹ ನನ್ನ ಸ್ವರೂಪವು ಆದಿ-ಅಂತರಹಿತನಾದ ಪರಮೇಶ್ವರನನ್ನು ಬಿಟ್ಟು ಇತರ ಶಾಸ್ತ್ರಾರ್ಥಗಳನ್ನು ತಿಳಿದವರಿಂದ ತಿಳಿಯಲು ಶಕ್ಯವಿಲ್ಲ.

೬೬. ಈ ಪಾಶುಪತಯೋಗಮಾರ್ಗವನ್ನು ಪ್ರತಿಷ್ಠೆಗೊಳಿಸಿರಿ. ಮಹೇಶ್ವರ ದೇವನನ್ನು ಪೂಜಿಸಿರಿ. ಅದರಿಂದ ನಿಮಗೆ ಶೀಘ್ರವಾಗಿ ಉತ್ತಮವಾದ ತತ್ತ್ವ ಜ್ಞಾನವು ಹುಟ್ಟುವುದು. ಇದರಲ್ಲಿ ಸಂದೇಹವಿಲ್ಲ.

ಮಯಿ ಭಕ್ತಿಶ್ಚ ವಿಪುಲಾ ಭವತಾಮಸ್ತು ಸತ್ತಮಾಃ ।
ಧ್ಯಾನಮಾತ್ರಂ ಹಿ ಸಾನ್ನಿಧ್ಯಂ ದಾಸ್ಯಾಮಿ ಮುನಿಸತ್ತಮಾಃ ॥ ೧೭ ॥

ಇತ್ಯುಕ್ತ್ವಾ ಭಗವಾನ್ ಸೋಮಸ್ತತ್ರೈವಾಂತರ್ಹಿತೋಽಭವತ್ ।
ತೇಽಪಿ ದಾರುವನೇ ಸ್ಥಿತ್ವಾ ಹ್ಯರ್ಚಯಂತಿ ಸ್ಮ ಶಂಕರಮ್ ॥ ೧೮ ॥

ಬ್ರಹ್ಮಚರ್ಯರತಾಃ ಶಾಂತಾ ಜ್ಞಾನಯೋಗಪರಾಯಣಾಃ ।
ಸಮೇತ್ಯ ತೇ ಮಹಾತ್ಮಾನೋ ಮುನಯೋ ಬ್ರಹ್ಮವಾದಿನಃ ॥ ೧೯ ॥

ವಿಚಕ್ರಿರೇ ಬಹೂನ್ವಾದಾನ್ ಸ್ವಾತ್ಮಜ್ಞಾನಸಮಾಶ್ರಯಾನ್ ॥ ೨೦ ॥

---

೧೭. ಸಾಧುಶ್ರೇಷ್ಠರೆ! ನಿಮಗೆ ನನ್ನಲ್ಲಿ ಅತಿಶಯಿತವಾದ ಭಕ್ತಿಯು ಉಂಟಾಗಲಿ. ಶ್ರೇಷ್ಠರಾದ ಮುನೀಶ್ವರರೆ! ಇನ್ನು ಮುಂದೆ ನಿಮಗೆ ನೀವು ಧ್ಯಾನ ಮಾಡಿದ ಮಾತ್ರದಿಂದ ನಾನು ಸಾನ್ನಿಧ್ಯವನ್ನು ಕೊಡುವೆನು.

೧೮. ಪೂಜ್ಯನಾದ ಮಹೇಶ್ವರನು ಮುನಿಗಳಿಗೆ ಹೀಗೆಂದುಹೇಳಿ ಪಾರ್ವತೀ ದೇವಿಯಿಂದ ಸಹಿತನಾಗಿ ಅಲ್ಲಿಯೇ ಅದೃಶ್ಯನಾದನು. ಆ ತಪಸ್ವಿಗಳು ಆ ದಾರುವನ ದಲ್ಲಿದ್ದು ಶಂಕರನನ್ನು ಅರ್ಚಿಸುತ್ತಿದ್ದರು.

೧೯. ಬ್ರಹ್ಮಚರ್ಯ ನಿಯಮಾನುಷ್ಠಾನಪರರೂ, ಶಮ ಸ್ವಭಾವವುಳ್ಳವರೂ, ಜ್ಞಾನಯೋಗದಲ್ಲಿ ನಿಷ್ಣಾತರೂ, ಮಹಾತ್ಮರೂ ಮತ್ತು ಬ್ರಹ್ಮವಾದಿಗಳೂ ಆದ ಮುನಿಗಳು ಸಭೆಸೇರಿ ಬ್ರಹ್ಮಚಿಂತನೆಯನ್ನು ಮಾಡಿದರು.

೨೦. ಮತ್ತು ಸ್ವಾತ್ಮನ ವಿಷಯದಲ್ಲಿ ತಮ್ಮ ತಮ್ಮ ಬುದ್ಧಿಬಲವನ್ನು ಅನು ಸರಿಸಿ, ಯುಕ್ತಿ-ಯುಕ್ತ್ಯಾಭ್ಯಾಸಗಳಿಂದ ವಿವಿಧವಾದಗಳನ್ನು ಮಾಡಿದರು.

ಕಿಮಸ್ಯ ಜಗತೋ ಮೂಲಮಾತ್ಮಾ ಚಾಸ್ಮಾಕಮೇವ ಹಿ ।
ಕೋಽಪಿ ಸ್ಯಾತ್ ಸರ್ವಭಾವಾನಾಂ ಹೇತುರೀಶ್ವರ ಏವ ಚ　　॥ ೭೧ ॥

ಇತ್ಯೇವಂ ಮನ್ಯಮಾನಾನಾಂ ಧ್ಯಾನಮಾರ್ಗಾವಲಂಬಿನಾಮ್ ।
ಆವಿರಾಸೀನ್ಮಹಾದೇವೀ ತತೋ ಗಿರಿವರಾತ್ಮಜಾ　　॥ ೭೨ ॥

ಕೋಟಿಸೂರ್ಯಪ್ರತೀಕಾಶಾ ಜ್ವಾಲಾಮಾಲಾಸಮಾವೃತಾ ।
ಸ್ವಭಾಭಿರ್ನಿಮಲಾಭಿಃ ಸಾ ಪೂರಯಂತೀ ನಭಸ್ತಲಮ್　　॥ ೭೩ ॥

ತಾಮನ್ವಪಶ್ಯದ್ಗಿರಿಜಾಮಮೇಯಾಂ
ಜ್ವಾಲಾಸಹಸ್ರಾಂತರಸನ್ನಿವಿಷ್ಟಾಮ್ ।
ಪ್ರಣೇಮುರೇತಾಮಖಿಲೇಶಪತ್ನೀಂ
ಜಾನಂತಿ ಚೈತತ್ಪರಮಸ್ಯ ಬೀಜಮ್　　॥ ೭೪ ॥

---

೭೧. ಈ ಪ್ರಪಂಚಕ್ಕೆ ಮೂಲಕಾರಣವು ಯಾವುದು ? ನಮ್ಮ ಆತ್ಮನಸ್ವರೂಪವು ಯಾವುದು ? ಪ್ರಪಂಚದಲ್ಲಿರುವ ಸರ್ವವಸ್ತುಗಳಿಗೆ ಕಾರಣನೂ, ನಿಯಾಮಕನೂ, ಯಾರಾದರೂ ಇರುವನೆ ?

೭೨. ಈ ರೀತಿಯಾಗಿ ವಿಚಾರಸರಣಿಯಿಂದ ಮನನಮಾಡುವವರೂ ಧ್ಯಾನ ಮಾರ್ಗವನ್ನು ಅವಲಂಬಿಸಿದವರೂ ಆದ ತಪಸ್ವಿಗಳಿಗೆ ತರುವಾಯ ಪರ್ವತರಾಜನ ಪುತ್ರಿಯಾದ ಮಹಾದೇವಿಯು ಪ್ರತ್ಯಕ್ಷಳಾದಳು.

೭೩. ಕೋಟಿಸಂಖ್ಯೆಯ ಸೂರ್ಯಬಿಂಬಗಳಂತೆ ಹೊಳೆಯುವವಳೂ, ಜ್ವಾಲೆಗಳ ಪಂಕ್ತಿಯಿಂದ ಸುತ್ತಲ್ಪಟ್ಟವಳೂ ಆದ ಮಹಾದೇವಿಯು ತನ್ನ ನಿರ್ಮಲವಾದ ಕಾಂತಿಗಳಿಂದ ಆಕಾಶವನ್ನು ಪೂರ್ಣಗೊಳಿಸುತ್ತ ಪ್ರತ್ಯಕ್ಷಳಾದಳು.

೭೪. ಆಗ ತಪಸ್ವಿಗಳು ಸಹಸ್ರಾರು ಜ್ವಾಲೆಗಳ ಅಂತರದಲ್ಲಿ ಕುಳಿತಿರುವಂತೆ ಕಾಣುವ, ಅಳತೆಮಾಡಲಾಗದ ಆ ಗಿರೀಂದ್ರಪುತ್ರಿಯನ್ನು ಕಂಡರು. ಸರ್ವೇಶ್ವರನ ಪತ್ನಿಯಾದ ಆ ಪಾರ್ವತಿಯನ್ನು ನಮಸ್ಕರಿಸಿದರು. ಮತ್ತು ಸೃಷ್ಟಿಕರ್ತನಾದ ಪರಮಾತ್ಮನಿಗೆ ದೇವಿಯೇ ಉತ್ತಮವಾದ ಬೀಜಶಕ್ತಿಯೆಂದು ಅರಿತರು.

ಅಸ್ಮಾಕಮೇಷಾ ಪರಮಸ್ಯ ಪತ್ನೀ
ಗತಿಸ್ತಥಾತ್ಮಾ ಗಗನಾಭಿಧಾನಾ ।
ಪಶ್ಯಂತ್ಯಥಾತ್ಮಾನಮಿದಂ ಚ ಕೃತ್ಸ್ನಂ
ತಸ್ಯಾಮಥೈತೇ ಮುನಯಃ ಪ್ರಹೃಷ್ಟಾಃ ॥ ೭೫ ॥

ನಿರೀಕ್ಷಿತಾಸ್ತೇ ಪರಮೇಶಪತ್ನ್ಯಾ
ತದಂತರೇ ದೇವಮಶೇಷಹೇತುಮ್ ।
ಪಶ್ಯಂತಿ ಶಂಭುಂ ಕವಿಮೀಶಿತಾರಂ
ರುದ್ರಂ ಬೃಹಂತಂ ಪುರುಷಂ ಪುರಾಣಮ್ ॥ ೭೬ ॥

ಆಲೋಕ್ಯ ದೇವೀಮಥ ದೇವಮೀಶಂ
ಪ್ರಣೇಮುರಾನಂದಮವಾಪುರಗ್ರ್ಯಮ್ ।
ಜ್ಞಾನಂ ತದೀಶಂ ಭಗವತ್ಪ್ರಸಾದಾ-
ದಾವಿರ್ಬಭೌ ಜನ್ಮವಿನಾಶಹೇತು ॥ ೭೭ ॥

---

೭೫. ಮಹೇಶ್ವರನ ಪತ್ನಿಯಾದ ಮತ್ತು ಆಕಾಶವೆಂಬ ನಾಮಧೇಯವುಳ್ಳ ಈ ದೇವಿಯು ನಮಗೆ ಪರಮಗತಿರೂಪಳು. ಹಾಗು ನಮಗೆ ಆತ್ಮರೂಪಳಾಗಿರ ವಳು. ಹೀಗೆಂದು ಸ್ತುತಿಸಿ ತಮ್ಮ ಆತ್ಮವನ್ನೂ, ಬಾಹ್ಯ-ಆಧ್ಯಾತ್ಮಿಕ ಪ್ರಪಂಚವನ್ನೂ ದೇವಿಯಲ್ಲಿ ನೋಡುವವರಾದರು. ಮತ್ತು ಅನಂತರದಲ್ಲಿ ಸಮಸ್ತ ಮುನಿಗಳು ಸಂತೋಷಗೊಂಡವರಾದರು.

೭೬. ಪರಮೇಶ್ವರ ಪತ್ನಿಯಾದ ದೇವಿಯಿಂದ ಅನುಗ್ರಹ ಪೂರ್ವಕವಾಗಿ ನಿರೀಕ್ಷಿಸಲ್ಪಟ್ಟ ಮುನಿಗಳು ಆ ಸಮಯದಲ್ಲಿ ಸರ್ವಜಗತ್ಕಾರಣನೂ, ಸುಖದಾಯಕನೂ, ಸರ್ವಜ್ಞನೂ, ಸರ್ವೇಶ್ವರನೂ, ರುದ್ರಮೂರ್ತಿಯೂ, ಬೃಹದಾಕಾರನೂ, ಮತ್ತು ಪುರಾಣಪುರುಷನೂ ಆದ ಪರಮಾತ್ಮನನ್ನು ಸಾಕ್ಷಾತ್ಕರಿಸಿದರು.

೭೭. ಹೀಗೆ ದೇವಿಯನ್ನೂ, ಸರ್ವೇಶ್ವರನಾದ ದೇವನನ್ನೂ ಸಾಕ್ಷಾತ್ಕರಿಸಿ ತಪಸ್ವಿಗಳಾದ ಮುನಿಗಳು ನಮಸ್ಕಾರಮಾಡಿ, ಅಪಾರವಾದ ಆನಂದವನ್ನು ಹೊಂದಿದರು. ಆಗ ಈಶ್ವರಾನುಗ್ರಹದಿಂದ ಮುಕ್ತಿಯನ್ನು ಕೊಡಲು ಶಕ್ತವಾದ, ಜನ್ಮ ಮರಣಗಳನ್ನು ಪ್ರತಿಬಂಧಿಸುವ ತತ್ತ್ವಜ್ಞಾನವು ತಪಸ್ವಿಗಳಿಗೆ ಉದಯಿಸಿತು.

ಇಯಂ ಯಾ ಸಾ ಜಗತೋ ಯೋನಿರೇಕಾ
ಸರ್ವಾತ್ಮಿಕಾ ಸರ್ವನಿಯಾಮಿಕಾ ಚ ।
ಮಾಹೇಶ್ವರೀ ಶಕ್ತಿರನಾದಿಸಿದ್ಧಾ
ವ್ಯೋಮಾಭಿಧಾನಾ ದಿವಿ ರಾಜತೀವ ॥ ೭೮ ॥

ಅಸ್ಯಾಂ ಮಹಾನ್ ಪರಮೇಷ್ಠೀ ಪರಸ್ತಾ-
ನ್ಮಹೇಶ್ವರಃ ಶಿವ ಏಕಃ ಸ ರುದ್ರಃ ।
ಚಕಾರ ವಿಶ್ವಂ ಪರಶಕ್ತಿನಿಷ್ಠಂ
ಮಾಯಾಮಥಾರುಹ್ಯ ಚ ದೇವದೇವಃ ॥ ೭೯ ॥

ಏಕೋ ದೇವಃ ಸರ್ವಭೂತೇಷು ಗೂಢೋ
ಮಾಯೀ ರುದ್ರಃ ಸಕಲೋ ನಿಷ್ಕಲಶ್ಚ ।
ಸ ಏವ ದೇವೀ ನ ಚ ತದ್ವಿಭಿನ್ನ
ಮೇತಜ್ಞಾತ್ವಾ ಹ್ಯಮೃತತ್ವಂ ವ್ರಜಂತಿ ॥ ೮೦ ॥

---

೭೮. ಜಗತ್ತಿಗೆ ಅದ್ವಿತೀಯಕಾರಣಳೂ, ಸರ್ವಾತ್ಮಕಳೂ, ಸಮಸ್ತ ವಸ್ತು ನಿಯಾಮಕಳೂ, ವ್ಯೋಮ ಎಂಬ ಆಕಾಶದ ಪರ್ಯಾಯಶಬ್ದವೇ ನಾಮಧೇಯವಾಗಿ ಉಳ್ಳವಳೂ, ಮಹೇಶ್ವರಪತ್ನಿಯೂ, ಮತ್ತು ಅನಾದಿಶಕ್ತಿರೂಪಳೂ, ಆದ ದೇವಿಯು ಆಕಾಶದಲ್ಲಿ ರಾಜಿಸುತ್ತಿರುವಳು.

೭೯. ಮಹಾತ್ಮನೂ, ಪರಮಪದವಾಸಿಯೂ, ಸರ್ವೋತ್ತಮನೂ, ಮಹೇಶ್ವರನೂ, ಶಿವಸ್ವರೂಪನೂ, ಅದ್ವಿತೀಯನೂ ಮತ್ತು ದೇವೋತ್ತಮನೂ ಆದ ರುದ್ರಮೂರ್ತಿಯು ಮಾಯೆಯನ್ನು ಅವಲಂಬಿಸಿ ಪರಶಕ್ತಿಯಲ್ಲಿ ಅಡಗಿರುವ ಸಮಸ್ತ ವಿಶ್ವವನ್ನು ಈ ದೇವಿಯ ನಿಮಿತ್ತದಿಂದ ಸೃಷ್ಟಿಸಿರುವನು.

೮೦. ಅದ್ವಿತೀಯನೂ, ಪ್ರಕಾಶಮಯನೂ, ಆದ ಪರಮಾತ್ಮನು ಸರ್ವಪ್ರಾಣಿಗಳಲ್ಲಿ ಗೂಢನೂ, ಮಾಯಾಶಕ್ತಿಯುಳ್ಳವನೂ, ರುದ್ರಮೂರ್ತಿಯೂ ಅನೇಕ ವಿಭಾಗಗಳಿಂದ ಕೂಡಿದವನೂ, ಮತ್ತು ಸತ್ಯಸ್ವರೂಪದಿಂದ ಅವಯವವರ್ಜಿತನೂ ಆಗಿರುವನು. ಅಂತಹ ಮಹೇಶ್ವರನೆ ದೇವಿಯ ರೂಪನೂ ಆಗಿದ್ದಾನೆ. ಮಹೇಶ್ವರನಿಗಿಂತ ವ್ಯತಿರಿಕ್ತವಸ್ತುವು ಇಲ್ಲ. ಈತತ್ತ್ವವನ್ನು ತಿಳಿದವರು ಮುಕ್ತಿಯನ್ನು ಹೊಂದುವರು.

ಅಂತರ್ಹಿತೋऽಭೂದ್ಭಗವಾನ್ಮಹೇಶೋ
ದೇವ್ಯಾ ತಯಾ ಸಹ ದೇವಾಧಿದೇವಃ ।
ಆರಾಧಯಂತಿ ಸ್ಮ ತಮಾದಿದೇವಂ
ವನೌಕಸಸ್ತೇ ಪುನರೇವ ರುದ್ರಮ್ ॥ ೮೧ ॥

ಏತದ್ವಃ ಕಥಿತಂ ಸರ್ವಂ ದೇವದೇವಸ್ಯ ಚೇಷ್ಟಿತಮ್ ।
ದೇವದಾರುವನೇ ಪೂರ್ವಂ ಪುರಾಣೇ ಯನ್ಮಯಾ ಶ್ರುತಮ್ ॥ ೮೨ ॥

ಯಃ ಪಠೇಚ್ಛೃಣುಯಾನ್ನಿತ್ಯಂ ಮುಚ್ಯತೇ ಸರ್ವಪಾತಕೈಃ ।
ಶ್ರಾವಯೇದ್ವಾ ದ್ವಿಜಾಞ್ಛಾಂತಾನ್ ಸ ಯಾತಿ ಪರಮಾಂ ಗತಿಮ್ ॥

ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇ
ದ್ವಿನವತಿತಮೋऽಧ್ಯಾಯಃ.

---

೮೧. ದೇವತೆಗಳಿಗೆ ದೇವತಾರೂಪಿಯೂ, ಷಡ್ಗುಣೈಶ್ವರ್ಯಸಂಪನ್ನನೂ, ಆದ ಮಹೇಶ್ವರನು ದೇವಿಯೊಡನೆ ಅಲ್ಲಿ ಅಂತರ್ಧಾನ ಹೊಂದಿದನು. ಆ ಅರಣ್ಯವಾಸಿಗಳಾದ ಮಹರ್ಷಿಗಳು ಆದಿದೇವತಾಸ್ವರೂಪಿಯೂ ರುದ್ರಮೂರ್ತಿಯೂ ಆದ ಹೇಮಶ್ವರನನ್ನು ಮತ್ತೆ ಆರಾಧಿಸುತ್ತಿದ್ದರು.

೮೨. ನನ್ನಿಂದ ಪೂರ್ವಕಾಲದಲ್ಲಿ ಪುರಾಣದಿಂದ ಶ್ರವಣಮಾಡಲ್ಪಟ್ಟಿರುವಂತೆ ದೇವದಾರುವನದಲ್ಲಿ ದೇವೋತ್ತಮನಾದ ಮಹೇಶ್ವರನು ಮಾಡಿದ ಸಕಲ ಉದ್ಯಮವು ನಿಮಗೆ ವರ್ಣಿಸಲ್ಪಟ್ಟಿದೆ.

೮೩. ಯಾವ ಮಾನವನು ಪವಿತ್ರವಾದ ದೇವದಾರುವನದ ಚರಿತ್ರೆಯನ್ನು ಪ್ರತಿನಿತ್ಯವೂ ಪಠಿಸುವನೋ; ಅವನು ಸಮಸ್ತಪಾಪಗಳಿಂದ ಬಿಡಲ್ಪಡುವನು. ಮತ್ತು ಶಮಸ್ವಭಾವವುಳ್ಳ ದ್ವಿಜರನ್ನು ಕುಳ್ಳಿರಿಸಿ ಇದನ್ನು ಅವರಿಂದ ಶ್ರವಣಮಾಡಿಸಿದವನು ಉತ್ತಮವಾದ ಸದ್ಗತಿಯನ್ನು ಹೊಂದುತ್ತಾನೆ.

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ತೊಂಭತ್ತೆರಡನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

# ಕೂರ್ಮಪುರಾಣಂ

## ತ್ರಿನವತಿತಮೋಽಧ್ಯಾಯಃ.

**ಸೂತ ಉವಾಚ :—**

**ಏಷಾ ಪುಣ್ಯತಮಾ ದೇವೀ ದೇವಗಂಧರ್ವಸೇವಿತಾ ।**
**ನರ್ಮದಾ ಲೋಕವಿಖ್ಯಾತಾ ತೀರ್ಥಾನಾಮುತ್ತಮಾ ನದೀ ॥ ೧ ॥**

**ತಸ್ಯಾಃ ಶೃಣುಧ್ವಂ ಮಾಹಾತ್ಮ್ಯಂ ಮಾರ್ಕಂಡೇಯೇನ ಭಾಷಿತಮ್ ।**
**ಯುಧಿಷ್ಠಿರಾಯ ತು ಶುಭಂ ಸರ್ವಪಾಪಪ್ರಣಾಶನಮ್ ॥ ೨ ॥**

---

## ತೊಂಭತ್ತಮೂರನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು:— ಅತ್ಯಂತ ಪಾವನವೂ, ಪ್ರಕಾಶಮಯವೂ, ಸಿದ್ಧ-ಗಂಧರ್ವ ವೃಂದದಿಂದ ಆಶ್ರಯಿಸಲ್ಪಟ್ಟಿರುವುದೂ ಮತ್ತು ಲೋಕಗಳಲ್ಲಿ ಪ್ರಖ್ಯಾತಿಗೊಂಡಿರುವುದೂ, ಆದ ನರ್ಮದಾನದಿಯು ತೀರ್ಥಗಳಲ್ಲಿ ಉತ್ತಮವಾದುದು.

೨. ಸರ್ವಪಾಪಗಳನ್ನು ಭಂಜನಮಾಡುವುದೂ, ಮಂಗಳದಾಯಕವೂ, ಮತ್ತು ಮಾರ್ಕಂಡೇಯ ಮಹಾಮುನಿಯಿಂದ ಯುಧಿಷ್ಠಿರ ಮಹಾರಾಜನಿಗೆ ವರ್ಣಿಸಲ್ಪಟ್ಟಿರುವುದೂ ಆದ ನರ್ಮದಾನದಿಯ ಮಾಹಾತ್ಮ್ಯವನ್ನು ಕೇಳಿರಿ.

ಯುಧಿಷ್ಠಿರ ಉವಾಚ :—

ಶ್ರುತಾಸ್ತೇ ವಿವಿಧಾ ಧರ್ಮಾಸ್ತ್ವತ್ಪ್ರಸಾದಾನ್ಮಹಾಮುನೇ ।
ಮಾಹಾತ್ಮ್ಯಂ ಚ ಪ್ರಯಾಗಸ್ಯ ತೀರ್ಥಾನಿ ವಿವಿಧಾನಿ ಚ ॥ ೧ ॥

ನರ್ಮದಾ ಸರ್ವತೀರ್ಥಾನಾಂ ಮುಖ್ಯಾ ಹಿ ಭವತೇರಿತಾ ।
ತಸ್ಯಾಸ್ತ್ವಿದಾನೀಂ ಮಾಹಾತ್ಮ್ಯಂ ವಕ್ತುಮರ್ಹಸಿ ಸತ್ತಮ ॥ ೪ ॥

ಮಾರ್ಕಂಡೇಯ ಉವಾಚ :—

ನರ್ಮದಾ ಸರಿತಾಂ ಶ್ರೇಷ್ಠಾ ರುದ್ರದೇಹಾದ್ವಿನಿಃಸೃತಾ ।
ತಾರಯೇತ್ ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ॥ ೫ ॥

ನರ್ಮದಾಯಾಸ್ತು ಮಾಹಾತ್ಮ್ಯಂ ಪುರಾಣೇ ಯನ್ಮಯಾ ಶ್ರುತಮ್ ।
ಇದಾನೀಂ ತತ್ಪ್ರವಕ್ಷ್ಯಾಮಿ ಶೃಣುಷ್ವೈಕಮನಾಃ ಶುಭಮ್ ॥ ೬ ॥

---

೩. ಯುಧಿಷ್ಠಿರಮಹಾರಾಜನು ಹೀಗೆ ಕೇಳಿಕೊಂಡನು:– ಮಹಾಮುನಿಯೆ ! ನಿನ್ನ ಅನುಗ್ರಹಕ್ಕೆ ಪಾತ್ರನಾದುದರಿಂದ ನಿನ್ನಿಂದ ನಾನು ನಾನಾವಿಧವಾದ ಧರ್ಮತತ್ತ್ವಗಳನ್ನೂ, ಪ್ರಯಾಗಕ್ಷೇತ್ರದ ಮಾಹಾತ್ಮ್ಯವನ್ನೂ ಮತ್ತು ಅನೇಕ ತೀರ್ಥಕ್ಷೇತ್ರಗಳನ್ನೂ ಕೇಳಿದೆನು.

೪. ಸಾಧೂತ್ತಮನೆ ! ನರ್ಮದಾ ಎಂಬ ಪವಿತ್ರನದಿಯು ಸಮಸ್ತ ತೀರ್ಥಗಳಲ್ಲಿ ಪ್ರಧಾನವಾದುದೆಂದು ನಿನ್ನಿಂದ ಹೇಳಲ್ಪಟ್ಟಿತು. ಈಗ ಆ ನರ್ಮದಾನದಿಯ ಮಾಹಾತ್ಮ್ಯವನ್ನು ಹೇಳಲು ಅರ್ಹನಾಗಿದ್ದೀಯೆ.

೫. ಮಾರ್ಕಂಡೇಯಮುನಿಯು ಇಂತೆಂದನು:— ರುದ್ರಮೂರ್ತಿಯ ದೇಹದಿಂದ ಪ್ರಾದುರ್ಭಾವ ಹೊಂದಿರುವ ಮತ್ತು ನದಿಗಳಲ್ಲಿ ಉತ್ತಮವಾದ ನರ್ಮದಾನದಿಯು ಸ್ಥಾವರ ಜಂಗಮರೂಪವಾದ ಸಮಸ್ತ ಪ್ರಾಣಿಗಳನ್ನೂ ಉದ್ಧಾರಮಾಡುವುದು.

೬. ಪೂರ್ವದಲ್ಲಿ ನನ್ನಿಂದ ಪುರಾಣದಲ್ಲಿ ಕೇಳಲ್ಪಟ್ಟಿರುವಂತೆ ಶುಭಮಯವಾದ ನರ್ಮದಾನದಿಯ ಮಾಹಾತ್ಮ್ಯವನ್ನು ಈಗ ನಾನು ಹೇಳುತ್ತೇನೆ. ನೀನು ಇದೊಂದರಲ್ಲಿಯೇ ಗಮನವನ್ನಿಟ್ಟು ಕೇಳು.

**ಪುಣ್ಯಾ ಕನಖಲೇ ಗಂಗಾ ಕುರುಕ್ಷೇತ್ರೇ ಸರಸ್ವತೀ ।**
**ಗ್ರಾಮೇ ವಾ ಯದಿ ವಾರಣ್ಯೇ ಪುಣ್ಯಾ ಸರ್ವತ್ರ ನರ್ಮದಾ　　॥ ೭ ॥**

**ತ್ರಿಭಿಃ ಸಾರಸ್ವತಂ ತೋಯಂ ಸಪ್ತಾಹಾದ್ಯಾಮುನಂ ಜಲಮ್ ।**
**ಸದ್ಯಃ ಪುನಾತಿ ಗಾಂಗೇಯಂ ದರ್ಶನಾದೇವ ನಾರ್ಮದಮ್　　॥ ೮ ॥**

**ಕಲಿಂಗದೇಶಪಶ್ಚಾರ್ಧೇ ಪರ್ವತೇಽಮರಕಂಟಕೇ ।**
**ಪುಣ್ಯಾ ತ್ರಿಷು ತ್ರಿಲೋಕೇಷು ರಮಣೀಯಾ ಮನೋರಮಾ　　॥ ೯ ॥**

**ಸದೇವಾಸುರಗಂಧರ್ವಾ ಋಷಯಶ್ಚ ತಪೋಧನಾಃ ।**
**ತಪಸ್ತಪ್ತ್ವಾ ತು ರಾಜೇಂದ್ರ ಸಿದ್ಧಿಂ ತು ಪರಮಾಂ ಗತಾಃ　　॥ ೧೦ ॥**

---

೭. ಗಂಗಾನದಿಯು ಕನಖಲವೆಂಬ ಕ್ಷೇತ್ರದಲ್ಲಿ ಪವಿತ್ರವಾದುದು. ಸರಸ್ವತೀ ನದಿಯು ಕುರುಕ್ಷೇತ್ರದಲ್ಲಿ ಬಂದರೆ ಪಾವನವಾಗುವುದು. ನರ್ಮದಾನದಿಯು ಗ್ರಾಮ ದಲ್ಲಿಯಾಗಲಿ, ಅರಣ್ಯದಲ್ಲಿಯಾಗಲಿ, ಸಕಲ ಪ್ರದೇಶದಲ್ಲಿಯೂ ಪಾವನವಾಗುವುದು.

೮. ಸರಸ್ವತೀನದಿಯ ತೀರ್ಥವು ಮೂರುದಿನಗಳ ಸೇವೆಯಿಂದ ಪವಿತ್ರಕರ ವಾಗುವುದು. ಯಮುನಾನದಿಯ ತೀರ್ಥವು ಏಳುದಿನಗಳಲ್ಲಿ ಶುದ್ಧಿಯನ್ನು ಉಂಟು ಮಾಡುವುದು. ಮತ್ತು ಗಂಗಾನದೀ ತೀರ್ಥವು ಕೂಡಲೆ ಪವಿತ್ರಮಾಡುವುದು. ಆದರೆ ನರ್ಮದಾನದಿಯ ತೀರ್ಥವು ದರ್ಶನಮಾತ್ರದಿಂದ ಪಾವನವಾದುದು.

೯. ಕಲಿಂಗದೇಶದ ಪಶ್ಚಿಮಾರ್ಧದಲ್ಲಿರುವ ಅಮರಕಂಟಕ ಎಂಬ ಪರ್ವತ ದಲ್ಲಿ ಮೂರುಲೋಕಗಳಲ್ಲಿ ವಿಖ್ಯಾತವೂ, ರಮ್ಯವೂ, ಮತ್ತು ಮಾನಸವನ್ನು ಆಕ ರ್ಷಿಸುವುದೂ ಆದ ಈ ಪುಣ್ಯನದೀತೀರ್ಥವು ಇರುವುದು.

೧೦. ರಾಜೇಂದ್ರನೆ ! ಈ ತೀರ್ಥದ ಸನ್ನಿಧಿಯಲ್ಲಿ ದೇವ-ಅಸುರ-ಗಂಧರ್ವ ಮತ್ತು ಮಹರ್ಷಿಗಳು ಆದರದಿಂದ ತಪವನ್ನು ಆಚರಿಸಿ ದುರ್ಲಭವಾದ ಪರಮ ಸಿದ್ಧಿಯನ್ನು ಹೊಂದಿರುವರು.

ತತ್ರ ಸ್ನಾತ್ವಾ ನರೋ ರಾಜನ್ನಿಯಮಸ್ಥೋ ಜಿತೇಂದ್ರಿಯಃ ।
ಉಪೋಷ್ಯ ರಜನೀಮೇಕಾಂ ಕುಲಾನಾಂ ತಾರಯೇಚ್ಛತಮ್ ॥ ೧೧ ॥

ಯೋಜನಾನಾಂ ಶತಂ ಸಾಗ್ರಂ ಶ್ರೂಯತೇ ಸರಿದುತ್ತಮಾ ।
ವಿಸ್ತಾರೇಣ ತು ರಾಜೇಂದ್ರ ಯೋಜನದ್ವಯಮಾಯತಾ ॥ ೧೨ ॥

ಷಷ್ಟಿತೀರ್ಥಸಹಸ್ರಾಣಿ ಷಷ್ಟಿಕೋಟ್ಯಸ್ತಥೈವ ಚ ।
ಪರ್ವತಸ್ಯ ಸಮಂತಾತ್ತು ತಿಷ್ಠಂತ್ಯಮರಕಂಟಕೇ ॥ ೧೩ ॥

ಬ್ರಹ್ಮಚಾರೀ ಶುಚಿರ್ಭೂತ್ವಾ ಜಿತಕ್ರೋಧೋ ಜಿತೇಂದ್ರಿಯಃ ।
ಸರ್ವಹಿಂಸಾನಿವೃತ್ತಸ್ತು ಸರ್ವಭೂತಹಿತೇ ರತಃ ॥ ೧೪ ॥

---

೧೧. ರಾಜೇಂದ್ರನೆ! ಆ ಪ್ರದೇಶದಲ್ಲಿ ಮನುಜನು ಸ್ನಾನಮಾಡಿ ಯಾತ್ರಾ ನಿಯಮವಂತನೂ, ನಿಗ್ರಹಿಸಿದ ಸಕಲೇಂದ್ರಿಯಗಳುಳ್ಳವನೂ ಆಗಿ ಒಂದು ರಾತ್ರಿ ಪೂರ್ತಿಯಾಗಿ ಉಪವಾಸ ಮಾಡಿದರೆ ತನ್ನ ವಂಶದಲ್ಲಿ ಒಂದು ನೂರು ಮಂದಿಯನ್ನು ಉದ್ಧರಿಸುವನು.

೧೨. ರಾಜಶ್ರೇಷ್ಠನೆ! ತೀರ್ಥೋತ್ತಮವಾದ ಈ ನದಿಯು ಸಂಪೂರ್ಣವಾಗಿ ಒಂದು ನೂರು ಯೋಜನ ಪರಿಮಾಣದಷ್ಟು ವಿಸ್ತಾರವಾಗಿದೆಯೆಂದು ಕೇಳುವೆವು. ದೀರ್ಘಪರಿಮಾಣದಲ್ಲಿ ಎರಡು ಯೋಜನ ಪರಿಮಾಣದಷ್ಟು ದೀರ್ಘವಾಗಿರುವುದು.

೧೩. ಅಮರಕಂಟಕ ಪರ್ವತದ ಸುತ್ತಮುತ್ತಲಿರುವ ಪ್ರದೇಶಗಳಲ್ಲಿ ಅರವತ್ತು ಸಹಸ್ರ ಸಂಖ್ಯೆಯಷ್ಟು ಪವಿತ್ರ ತೀರ್ಥಗಳೂ ಮತ್ತು ಅರವತ್ತು ಕೋಟಿಯಷ್ಟು ಪುಣ್ಯತೀರ್ಥಗಳೂ ಸೇರಿ ಹೀಗೆ ಅಸಂಖ್ಯಾತ ತೀರ್ಥಗಳು ಇರುತ್ತವೆ.

೧೪. ಆ ತೀರ್ಥಯಾತ್ರಾಸಮಯದಲ್ಲಿ ಮಾನವನು ಬ್ರಹ್ಮಚರ್ಯ ವ್ರತವನ್ನು ಆಚರಿಸುವವನೂ, ಕ್ರೋಧವನ್ನು ನಿಗ್ರಹಿಸಿದವನೂ, ಜಿತೇಂದ್ರಿಯನೂ, ಸರ್ವಪ್ರಾಣಿಗಳ ಹಿಂಸೆಯನ್ನು ತ್ಯಜಿಸಿದವನೂ ಮತ್ತು ಸರ್ವ ಭೂತಗಳಿಗೆ ಹಿತವನ್ನುಂಟುಮಾಡುವವನೂ ಆಗಿ ಶುದ್ಧ ಮಾನಸವುಳ್ಳವನಾಗಿರಬೇಕು.

ಏವಂ ಶುದ್ಧಸಮಾಚಾರೋ ಯಸ್ತು ಪ್ರಾಣಾನ್ ಪರಿತ್ಯಜೇತ್ ।
ತಸ್ಯ ಪುಣ್ಯಫಲಂ ರಾಜಞ್ಛೃಣುಷ್ವಾವಹಿತೋಽನಘ　　॥ ೧೫ ॥

ಶತಂ ವರ್ಷಸಹಸ್ರಾಣಿ ಸ್ವರ್ಗೇ ಮೋದತಿ ಪಾಂಡವ ।
ಅಪ್ಸರೋಗಣಸಂಕೀರ್ಣೋ ದಿವ್ಯಸ್ತ್ರೀಪರಿವಾರಿತಃ　　॥ ೧೬ ॥

ದಿವ್ಯಗಂಧಾನುಲಿಪ್ತಶ್ಚ ದಿವ್ಯಪುಷ್ಪೋಪಶೋಭಿತಃ ।
ಕ್ರೀಡತೇ ದಿವ್ಯಲೋಕೇ ತು ವಿಬುಧೈಃ ಸಹ ಮೋದತೇ　　॥ ೧೭ ॥

ತತಃ ಸ್ವರ್ಗಾತ್ ಪರಿಭ್ರಷ್ಟೋ ರಾಜಾ ಭವತಿ ಧಾರ್ಮಿಕಃ ।
ಗೃಹಂ ತು ಲಭತೇಽಸೌ ವೈ ನಾನಾರತ್ನಸಮನ್ವಿತಮ್　　॥ ೧೮ ॥

---

೧೫. ನಿಷ್ಕಳಂಕನಾದ ರಾಜನೆ! ಈ ರೀತಿಯಾಗಿ ತ್ರಿಕರಣಶುದ್ಧಿಯಿಂದ ಕೂಡಿದವನಾಗಿ ವಾಸಮಾಡಿ ಯಾವ ಮಾನವನು ಅಲ್ಲಿ ಪ್ರಾಣಗಳನ್ನು ತ್ಯಜಿಸುವನೋ; ಅವನಿಗೆ ಉಂಟಾಗುವ ಪುಣ್ಯಫಲಗಳನ್ನು ಅವಧಾನವನ್ನಿಟ್ಟು ಕೇಳುವವನಾಗು.

೧೬. ಯುಧಿಷ್ಠಿರನೆ! ಅಂತಹ ಸುಕೃತಿಯು ಒಂದು ನೂರು ಸಹಸ್ರ ವರ್ಷಗಳವರೆಗೆ ಸ್ವರ್ಗ ಲೋಕದಲ್ಲಿ ಅನೇಕ ಅಪ್ಸರಾಂಗನೆಯರಿಂದ ಕೂಡಿದವನೂ ಅನೇಕ ದಿವ್ಯಸ್ತ್ರೀಯರಿಂದ ಉಪಚರಿಸಲ್ಪಟ್ಟವನೂ ಆಗಿ ಸುಖವನ್ನು ಅನುಭವಿಸುತ್ತಾನೆ.

೧೭. ಮತ್ತು ದಿವ್ಯವಾದ ಗಂಧವನ್ನು ಲೇಪಿಸಿಕೊಂಡವನೂ, ದಿವ್ಯವಾದ ಪುಷ್ಪಗಳಿಂದ ಅಲಂಕರಿಸಲ್ಪಟ್ಟವನೂ ಆಗಿ ದಿವ್ಯಲೋಕದಲ್ಲಿ ದೇವತೆಗಳೊಡನೆ ವಿಹರಿಸುತ್ತ ಸಂತೋಷವನ್ನು ಅನುಭವಿಸುವನು.

೧೮. ಮತ್ತು ಅಂತಹ ಉತ್ತಮ ಭವನವು ದಿವ್ಯರತ್ನಗಳಿಂದ ಉಜ್ವಲವಾದ ಸ್ತಂಭಗಳಿಂದಲೂ ವಜ್ರ-ವೈಡೂರ್ಯಗಳಿಂದಲೂ ಶೋಭಿಸಲ್ಪಟ್ಟಿರುವುದೂ ; ಶುಭ್ರವಾದ ನಾನಾ ಚಿತ್ರಗಳಿಂದ ಕೂಡಿರುವುದೂ ಮತ್ತು ನೂರಾರು ಮಂದಿ ದಾಸೀಜನರಿಂದ ಪೂರ್ಣವೂ ಆಗಿರುವುದು.

ಸ್ತಂಭೈರ್ಮಣಿಮಯೈರ್ದಿವ್ಯೈರ್ವಜ್ರವೈಡೂರ್ಯಭೂಷಿತಮ್ ।
ಆಲೇಖ್ಯವಾಹನೈಃ ಶುಭ್ರೈರ್ದಾಸೀಶತಸಮನ್ವಿತಮ್ ॥ ೧೯ ॥

ರಾಜರಾಜೇಶ್ವರಃ ಶ್ರೀಮಾನ್ ಸರ್ವಸ್ತ್ರೀಜನವಲ್ಲಭಃ
ಜೀವೇದ್ವರ್ಷಶತಂ ಸಾಗ್ರಂ ತತ್ರ ಭೋಗಸಮನ್ವಿತಃ ॥ ೨೦ ॥

ಅಗ್ನಿಪ್ರವೇಶೇಽಥ ಜಲೇ ವಾಥವಾನಶನೇ ಕೃತೇ ।
ಅನಿವರ್ತಿಕಾ ಗತಿಸ್ತಸ್ಯ ಪವನಸ್ಯಾಂಬರೇ ಯಥಾ ॥ ೨೧ ॥

ಪಶ್ಚಿಮೇ ಪರ್ವತತಟೇ ಸರ್ವಪಾಪವಿನಾಶನಃ ।
ಹ್ರದೋ ಜಲೇಶ್ವರೋ ನಾಮ ತ್ರಿಷು ಲೋಕೇಷು ವಿಶ್ರುತಃ ॥ ೨೨ ॥

---

೧೯. ಆ ಧಾರ್ಮಿಕನು ಸ್ವರ್ಗಸುಖಾನುಭವಾನಂತರದಲ್ಲಿ ಸ್ವರ್ಗದಿಂದ ಭ್ರಷ್ಟನಾಗಿ ರಾಜನಾಗಿ ಜನಿಸುವನು. ಮತ್ತು ಈ ಧಾರ್ಮಿಕನು ಅನೇಕ ವಿಧವಾದ ರತ್ನಗಳಿಂದ ಕೂಡಿದ ವಸತಿಗೃಹವನ್ನು ಹೊಂದುತ್ತಾನೆ.

೨೦. ಅಂತಹ ದಿವ್ಯಭವನದಲ್ಲಿ ರಾಜರಾಜರಿಗೆ ಈಶ್ವರನೂ, ಧನಾಧಿಪನೂ ಮತ್ತು ಸಮಸ್ತ ಸ್ತ್ರೀಜನರಿಗೆ ಪ್ರೇಮಾಸ್ಪದನೂ ಆಗಿ ಸಂಪೂರ್ಣವಾಗಿ ಶತಸಂವತ್ಸರಗಳ ಪರ್ಯಂತವಾಗಿ ದಿವ್ಯಭೋಗಗಳನ್ನು ಅನುಭವಿಸುತ್ತ ಜೀವಿಸುವನು.

೨೧. ಈ ಪವಿತ್ರಕ್ಷೇತ್ರದಲ್ಲಿ ಅಗ್ನಿಪ್ರವೇಶ, ಜಲದಲ್ಲಿ ಪತನ, ಅಥವಾ ಉಪವಾಸವ್ರತಗಳಲ್ಲಿ ಯಾವುದಾದರೊಂದು ವಿಧದಿಂದ ಮರಣಹೊಂದಿದರೆ ವಾಯುದೇವನ ಗತಿಗೆ ಆಕಾಶದಲ್ಲಿ ತಡೆಯಿಲ್ಲದಂತೆ ಅವನ ಸದ್ಗತಿಗೆ ನಿವೃತ್ತಿಯು ಇಲ್ಲ.

೨೨. ಪರ್ವತದ ಪಶ್ಚಿಮದಿಕ್ಕಿನ ತಪ್ಪಲಿನಲ್ಲಿ ಸಮಸ್ತ ಪಾತಕಗಳನ್ನು ಕಳೆಯುವ ಜಲೇಶ್ವರವೆಂದು ನಾಮಾಂಕಿತವಾದ ಒಂದು ಜಲಾಶಯ ತೀರ್ಥವು ಮೂರು ಲೋಕಗಳಲ್ಲಿ ಪ್ರಸಿದ್ಧಿಹೊಂದಿರುವುದು.

ತತ್ರ ಪಿಂಡಪ್ರದಾನೇನ ಸಂಧ್ಯೋಪಾಸನಕರ್ಮಣಾ ।
ದಶವರ್ಷಸಹಸ್ರಾಣಿ ತರ್ಪಿತಾಃ ಸ್ಯುರ್ನ ಸಂಶಯಃ ॥ ೨೩ ॥

ದಕ್ಷಿಣೇ ನರ್ಮದಾಕೂಲೇ ಕಪಿಲಾಖ್ಯಾ ಮಹಾನದೀ ।
ಸರಸಾರ್ಜುನಸಂಛನ್ನಾ ನಾತಿದೂರೇ ವ್ಯವಸ್ಥಿತಾ ॥ ೨೪ ॥

ಸಾ ತು ಪುಣ್ಯಾ ಮಹಾಭಾಗಾ ತ್ರಿಷು ಲೋಕೇಷು ವಿಶ್ರುತಾ ।
ತತ್ರ ಕೋಟಿಶತಂ ಸಾಗ್ರಂ ತೀರ್ಥಾನಾಂ ತು ಯುಧಿಷ್ಠಿರ ॥ ೨೫ ॥

ತಸ್ಮಿಂಸ್ತೀರ್ಥೇ ತು ಯೇ ವೃಕ್ಷಾಃ ಪತಿತಾಃ ಕಾಲಪರ್ಯಯಾತ್ ।
ನರ್ಮದಾತೋಯಸಂಸ್ಪೃಷ್ಟಾಸ್ತೇ ಯಾಂತಿ ಪರಮಾಂ ಗತಿಮ್ ॥ ೨೬ ॥

---

೨೩. ಆ ತೀರ್ಥದಲ್ಲಿ ಪಿತೃಗಳಿಗೆ ಪಿಂಡದಾನವನ್ನು ಆಚರಿಸುವುದರಿಂದಲೂ ಸಂಧ್ಯಾವಂದನೆಯ ಅನುಷ್ಠಾನದಿಂದಲೂ ಪಿತೃಗಳು ಹತ್ತು ಸಹಸ್ರ ವರ್ಷಗಳ ಪರ್ಯಂತವಾಗಿ ತೃಪ್ತಿಯನ್ನು ಹೊಂದುವರು. ಇದಕ್ಕೆ ಸಂಶಯವಿಲ್ಲ.

೨೪. ನರ್ಮದಾನದಿಯ ದಕ್ಷಿಣ ಭಾಗದ ತೀರದಲ್ಲಿ ಸೊಂಪಾಗಿ ಬೆಳೆದ ಅರ್ಜುನವೃಕ್ಷಗಳಿಂದ ಮುಚ್ಚಿಹೋದ ಕಪಿಲಾ ಎಂಬ ನಾಮಾಂಕನವುಳ್ಳ ಮಹಾ ನದಿಯು ಸಮೀಪದಲ್ಲಿಯೇ ಹರಿಯುತ್ತಿರುವುದು.

೨೫. ಮಹಾಮಹಿಮೆಯಿಂದ ಕೂಡಿ ಪಾವನವಾಗಿರುವ ಆ ಮಹಾನದಿಯು ಮೂರು ಲೋಕಗಳಲ್ಲಿ ಪ್ರಸಿದ್ಧಿಹೊಂದಿರುವುದು. ಯುಧಿಷ್ಠಿರ ಮಹಾರಾಜನೆ! ಅಲ್ಲಿ ಸಂಪೂರ್ಣವಾಗಿ ಒಂದು ನೂರು ಕೋಟಿ ತೀರ್ಥಗಳ ಪಂಕ್ತಿಯು ಇರುವುದು.

೨೬. ಆ ತೀರ್ಥದಲ್ಲಿ ಹುಟ್ಟಿ ಬೆಳೆದ ಯಾವ ವೃಕ್ಷಗಳು ಕಾಲಪರಿಪಾಕದಿಂದ ಜೀರ್ಣವಾಗಿ ಕೆಳಗೆ ಬೀಳುವುವೊ; ಅವುಗಳು ನರ್ಮದಾನದಿಯ ತೀರ್ಥದಿಂದ ಸ್ಪರ್ಶಹೊಂದಿದುವುಗಳಾಗಿ ಉತ್ತಮಗತಿಯನ್ನು ಹೊಂದುತ್ತವೆ.

ದ್ವಿತೀಯಾ ತು ಮಹಾಭಾಗ ವಿಶಲ್ಯಕರಣೀ ಶುಭಾ ।
ತತ್ರ ತೀರ್ಥೇ ನರಃ ಸ್ನಾತ್ವಾ ವಿಶಲ್ಯೋ ಭವತಿ ಕ್ಷಣಾತ್ ॥ ೨೭ ॥

ಕಪಿಲಾ ಚ ವಿಶಲ್ಯಾ ಚ ಶ್ರೂಯೇತೇ ಸರಿದುತ್ತಮೇ ।
ಈಶ್ವರೇಣ ಪುರಾ ಪ್ರೋಕ್ತೇ ಲೋಕಾನಾಂ ಹಿತಕಾಮ್ಯಯಾ ॥ ೨೮ ॥

ಅನಾಶಕಂ ತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।
ಸರ್ವಪಾಪವಿಶುದ್ಧಾತ್ಮಾ ರುದ್ರಲೋಕೇ ಸ ಗಚ್ಛತಿ ॥ ೨೯ ॥

ತತ್ರ ಸ್ನಾತ್ವಾ ನರೋ ರಾಜನ್ನಶ್ವಮೇಧಫಲಂ ಲಭೇತ್ ।
ಯೇ ವಸಂತ್ಯುತ್ತರೇ ಕೂಲೇ ರುದ್ರಲೋಕೇ ವಸಂತಿ ತೇ ॥ ೩೦ ॥

---

೨೭. ಮಹಾಭಾಗ್ಯಶಾಲಿಯಾದ ರಾಜನೆ! ವಿಶಲ್ಯಕರಣೀ ಎಂದು ಸಂಜ್ಞಾಂಕಿತವಾದ ಮತ್ತು ಮಂಗಳಕರವಾದ ಮತ್ತೊಂದು ಮಹಾನದಿಯು ಅಲ್ಲಿರುವುದು. ಆ ತೀರ್ಥದಲ್ಲಿ ಸ್ನಾನಮಾಡಿದ ಮನುಜನು ತನಗುಂಟಾದ ವ್ಯಸನಶಲ್ಯಗಳಿಂದ ಮುಕ್ತನಾಗುತ್ತಾನೆ.

೨೮. ಕಪಿಲಾ, ವಿಶಲ್ಯಾ ಎಂಬ ಎರಡು ಶ್ಲಾಘ್ಯವಾದ ಪವಿತ್ರ ನದಿಗಳು ಎಲ್ಲೆಲ್ಲಿಯೂ ಕೇಳಲ್ಪಡುತ್ತಿವೆ. ಲೋಕಗಳಿಗೆ ಹಿತವನ್ನು ಉಂಟುಮಾಡುವ ಸಂಕಲ್ಪದಿಂದ ಈಶ್ವರನಿಂದ ಈ ನದಿಗಳು ಹಿಂದೆ ಪ್ರಕಾಶಗೊಳಿಸಲ್ಪಟ್ಟವೆ.

೨೯. ಪ್ರಜಾನಾಥನೆ! ಆ ತೀರ್ಥೋತ್ತಮದಲ್ಲಿ ಯಾವ ನರನು ಉಪವಾಸ ವ್ರತವನ್ನು ಆಚರಿಸುತ್ತಾನೆಯೊ; ಅವನು ತನ್ನ ಸಮಸ್ತ ಪಾತಕಸಂಸರ್ಗದಿಂದ ಶುದ್ಧಿಹೊಂದಿದ ಆತ್ಮವುಳ್ಳವನಾಗಿ ರುದ್ರಲೋಕದಲ್ಲಿ ಮಾನ್ಯನಾಗುತ್ತಾನೆ.

೩೦. ಯುಧಿಷ್ಠಿರರಾಜನೆ! ಮಾನವನು ಆ ತೀರ್ಥದಲ್ಲಿ! ಸ್ನಾನಮಾಡಿದುದರಿಂದ ಅಶ್ವಮೇಧಯಾಗದಿಂದುಂಟಾಗುವ ಮಹಾಫಲವನ್ನು ಹೊಂದುತ್ತಾನೆ ಯಾವ ಜನರು ಉತ್ತರ ತೀರದಲ್ಲಿ ವಾಸಮಾಡುವರೋ; ಅವರು ರುದ್ರಲೋಕದಲ್ಲಿ ವಾಸಮಾಡುವರು.

ಸರಸ್ವತ್ಯಾಂ ಚ ಗಂಗಾಯಾಂ ನರ್ಮದಾಯಾಂ ಯುಧಿಷ್ಠಿರ ।
ಸಮಂ ಸ್ನಾನಂ ಚ ದಾನಂ ಚ ಯಥಾ ಮೇ ಶಂಕರೋಽಬ್ರವೀತ್॥೩೧

ಪರಿತ್ಯಜತಿ ಯಃ ಪ್ರಾಣಾನ್ ಪರ್ವತೇಽಮರಕಂಟಕೇ ।
ವರ್ಷಕೋಟಿಶತಂ ಸಾಗ್ರಂ ರುದ್ರಲೋಕೇ ಮಹೀಯತೇ ॥ ೩೨॥

ನರ್ಮದಾಯಾಂ ಜಲಂ ಪುಣ್ಯಂ ಫೇನೋರ್ಮಿಸಮಲಂಕೃತಮ್ ।
ಪವಿತ್ರಂ ಶಿರಸಾ ಧೃತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೩೩

ನರ್ಮದಾ ಸರ್ವತಃ ಪುಣ್ಯಾ ಬ್ರಹ್ಮಹತ್ಯಾಪಹಾರಿಣೀ ।
ಅಹೋರಾತ್ರೋಪವಾಸೇನ ಮುಚ್ಯತೇ ಬ್ರಹ್ಮಹತ್ಯಯಾ ॥ ೩೪

---

೩೧. ಯುಧಿಷ್ಠಿರರಾಜನೆ! ಸರಸ್ವತೀ, ಗಂಗಾ ಮತ್ತು ನರ್ಮದಾ ಎಂಬ ಈ ಮೂರು ಪುಣ್ಯನದಿಗಳಲ್ಲಿ ಮಾಡಿದ ಸ್ನಾನ-ದಾನಾದಿ ಸತ್ಕರ್ಮಗಳು ತುಲ್ಯವಾದ ಫಲವನ್ನು ಕೊಡುವುವು-ಎಂದು ನನಗೆ ಶಂಕರನು ಹೇಳಿರುವನು.

೩೨. ಯಾವ ಮಾನವನು ಅಮರಕಂಟಕವೆಂಬ ಪರ್ವತದಲ್ಲಿ ಪ್ರಾಣಗಳನ್ನು ತ್ಯಜಿಸುವನೊ; ಅವನು ಒಂದು ನೂರು ಕೋಟಿ ಸಂವತ್ಸರಗಳಷ್ಟು ಪೂರ್ಣಕಾಲದ ವರೆಗೆ ರುದ್ರಲೋಕದಲ್ಲಿ ಮಾನ್ಯನಾಗಿರುವನು.

೩೩. ನೊರೆಗಳು ಮತ್ತು ಅಲೆಗಳಿಂದ ಕೂಡಿದ ನರ್ಮದಾನದಿಯ ಪವಿತ್ರ ಜಲವನ್ನು ಶಿರದಲ್ಲಿ ಪ್ರೋಕ್ಷಿಸಿ ಧಾರಣಮಾಡಬೇಕು. ಅದರಿಂದ ಸಮಸ್ತ ಪಾತಕಗಳಿಂದ ಮುಕ್ತನಾಗುತ್ತಾನೆ.

೩೪. ನರ್ಮದಾನದಿಯು ಸಮಸ್ತ ಪ್ರದೇಶಗಳಲ್ಲಿಯೂ ಪಾವನವೂ ಬ್ರಹ್ಮಹತ್ಯಾಪಾಪಮೋಚಕವೂ ಆಗಿದೆ. ಆ ತೀರ್ಥದಲ್ಲಿ ಒಂದು ಅಹೋರಾತ್ರದಲ್ಲಿ ಉಪವಾಸ ವ್ರತವನ್ನು ಮಾಡಿದ್ದರಿಂದ ಬ್ರಹ್ಮಹತ್ಯಾ ಪಾತಕದಿಂದ ಮುಕ್ತನಾಗುತ್ತಾನೆ.

ಜಾಲೇಶ್ವರಂ ತೀರ್ಥವರಂ ಸರ್ವಪಾಪಪ್ರಣಾಶನಮ್ ।
ತತ್ರ ಗತ್ವಾ ನಿಯಮವಾನ್ ಸರ್ವಕಾಮಾನ್ ಲಭೇನ್ನರಃ ॥ ೩೫ ॥

ಚಂದ್ರಸೂರ್ಯೋಪರಾಗೇ ಚ ಗತ್ವಾ ಹ್ಯಮರಕಂಟಕಮ್ ।
ಅಶ್ವಮೇಧಾದ್ದಶಗುಣಂ ಪುಣ್ಯಮಾಪ್ನೋತಿ ಮಾನವಃ ॥ ೩೬ ॥

ಏಷ ಪುಣ್ಯೋ ಗಿರಿವರೋ ದೇವಗಂಧರ್ವಸೇವಿತಃ ।
ನಾನಾದ್ರುಮಲತಾಕೀರ್ಣೋ ನಾನಾಪುಷ್ಪೋಪಶೋಭಿತಃ ॥ ೩೭ ॥

ತತ್ರ ಸನ್ನಿಹಿತೋ ರಾಜನ್ ದೇವ್ಯಾ ಸಹ ಮಹೇಶ್ವರಃ ।
ಬ್ರಹ್ಮಾ ವಿಷ್ಣುಸ್ತಥಾ ರುದ್ರೋ ವಿದ್ಯಾಧರಗಣೈಃ ಸಹ ॥ ೩೮ ॥

---

೩೫. ಮತ್ತೊಂದು ತೀರ್ಥವು ಜಾಲೇಶ್ವರವೆಂದು ಪ್ರಸಿದ್ಧವೂ ಸರ್ವಪಾಪ ಭಂಜಕವೂ ಆಗಿದೆ. ಆ ತೀರ್ಥಕ್ಕೆ ಹೋಗಿ ಸ್ನಾನಾದಿನಿಯಮಗಳನ್ನು ಆಚರಿಸಿದ ಮಾನವನು ತನ್ನ ಸಮಸ್ತ ಇಷ್ಟಾರ್ಥಗಳನ್ನು ಹೊಂದುತ್ತಾನೆ.

೩೬. ಚಂದ್ರ-ಸೂರ್ಯರ ಗ್ರಹಣದ ಪುಣ್ಯಕಾಲಗಳಲ್ಲಿ ಮಾನವನು ಅಮರ ಕಂಟಕ ಪರ್ವತಕ್ಕೆ ಹೋಗಿ ಸ್ನಾನಾದಿಕರ್ಮಗಳನ್ನು ಆಚರಿಸಿದರೆ ಅಶ್ವಮೇಧಯಾಗದ ಫಲಕ್ಕಿಂತಲೂ ದಶಗುಣಿತವಾದ ಪುಣ್ಯ-ಫಲಗಳನ್ನು ಹೊಂದುತ್ತಾನೆ.

೩೭. ದೇವತೆಗಳಿಂದಲೂ ಗಂಧರ್ವರಿಂದಲೂ ಸೇವಿಸಲ್ಪಟ್ಟಿರುವುದೂ, ವಿವಿಧ ವಾದ ವೃಕ್ಷ-ಲತೆಗಳಿಂದ ತುಂಬಿರುವುದೂ, ಮತ್ತು ಅನೇಕ ಪುಷ್ಪಗಳಿಂದ ಶೋಭಿಸ ಲ್ಪಟ್ಟಿರುವುದೂ ಆದ ಈ ಶ್ರೇಷ್ಠಪರ್ವತವು ಅತಿ ಪಾವನವಾದುದು.

೩೮. ರಾಜನೆ ! ಆ ಶ್ರೇಷ್ಠಪರ್ವತದಲ್ಲಿ ಮಹೇಶ್ವರನು ತನ್ನ ಪ್ರಿಯೆಯಾದ ದೇವಿಯೊಡನೆ ಸನ್ನಿಹಿತನಾಗಿರುವನು. ಹಾಗು ಬ್ರಹ್ಮ-ವಿಷ್ಣು-ರುದ್ರರೆಂಬ ತ್ರಿಮೂರ್ತಿ ಗಳು ವಿದ್ಯಾಧರರ ಗಣಗಳೊಂದಿಗೆ ಅಲ್ಲಿ ವಾಸಮಾಡುತ್ತಲಿರುವರು.

ಪ್ರದಕ್ಷಿಣಂ ತು ಯಃ ಕುರ್ಯಾತ್ಪರ್ವತೇಽಮರಕಂಟಕೇ ।
ಪೌಂಡರೀಕಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ　॥ ೩೯ ॥

ಕಾವೇರೀ ನಾಮ ವಿಖ್ಯಾತಾ ನದೀ ಕಲ್ಮಷನಾಶಿನೀ ।
ತತ್ರ ಸ್ನಾತ್ವಾ ಮಹಾದೇವಮರ್ಚಯೇದ್ವೃಷಭಧ್ವಜಮ್　॥ ೪೦ ॥

ಸಂಗಮೇ ನರ್ಮದಾಯಾಸ್ತು ರುದ್ರಲೋಕೇ ಮಹೀಯತೇ　॥ ೪೧ ॥

ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇ
ತ್ರಿನವತಿತಮೋಽಧ್ಯಾಯಃ.

---

೩೯. ಆ ಅಮರಕಂಟಕ ಪರ್ವತದಲ್ಲಿ ಯಾವ ಮಾನವನು ಒಂದು ಸಲ ಮಾತ್ರವಾದರೂ ಪ್ರದಕ್ಷಿಣೆಯನ್ನು ಮಾಡುವನೊ; ಅವನು ಪೌಂಡರೀಕ ಯಜ್ಞವನ್ನು ಆಚರಿಸಿದಂತೆ ಅದರ ಫಲವನ್ನು ಹೊಂದುವನು.

೪೦. ಕಾವೇರಿ ಎಂದು ಲೋಕ ಪ್ರಸಿದ್ಧವಾದ ಮಹಾನದಿಯು ಪಾಪಗಳನ್ನು ದಹಿಸುವುದು, ಆ ನದಿಯ ತೀರ್ಥದಲ್ಲಿ ಸ್ನಾನಮಾಡಿ ವೃಷಭದಿಂದ ಅಂಕಿತವಾದ ಧ್ವಜವುಳ್ಳ ಮಹಾದೇವನನ್ನು ಅರ್ಚಿಸಬೇಕು.

೪೧. ಹಾಗೆ ನರ್ಮದಾನದಿಯ ಸಂಗಮಕ್ಷೇತ್ರದಲ್ಲಿ ಸ್ನಾನಮಾಡುವುದು ಮಹತ್ತಾದ ಫಲವನ್ನು ಕೊಡುವುದು. ಹಾಗು ಸ್ನಾನಕರ್ಮವನ್ನು ಆಚರಿಸಿದ ಮಾನವನು ರುದ್ರಲೋಕದಲ್ಲಿ ಮಾನ್ಯನಾಗುತ್ತಾನೆ.

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ತೊಂಭತ್ತಮೂರನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

# ಕೂರ್ಮಪುರಾಣಂ

## ಚತುರ್ನವತಿತಮೋಽಧ್ಯಾಯಃ.

**ಮಾರ್ಕಂಡೇಯ ಉವಾಚ :—**

ನರ್ಮದಾ ಸರಿತಾಂ ಶ್ರೇಷ್ಠಾ ಸರ್ವಪಾಪವಿನಾಶಿನೀ ।
ಮುನಿಭಿಃ ಕಥಿತಾ ಪೂರ್ವಮೀಶ್ವರೇಣ ಸ್ವಯಂಭುವಾ ॥ ೧ ॥

ಮುನಿಭಿಃ ಸಂಸ್ತುತಾ ಹ್ಯೇಷಾ ನರ್ಮದಾ ಪ್ರವರಾ ನದೀ ।
ರುದ್ರಗಾತ್ರಾದ್ವಿನಿಷ್ಕ್ರಾಂತಾ ಲೋಕಾನಾಂ ಹಿತಕಾಮ್ಯಯಾ ॥ ೨ ॥

---

## ತೊಂಭತ್ತನಾಲ್ಕನೆಯ ಅಧ್ಯಾಯವು

೧. ಮಾರ್ಕಂಡೇಯ ಮುನಿಯು ಹೀಗೆಂದು ಹೇಳಿದನು :—ನದಿಗಳಲ್ಲಿ ಉತ್ತಮವಾದ ನರ್ಮದಾನದಿಯು ಸರ್ವ ಪಾಪನಿವಾರಕವಾದುದೆಂದು ಪೂರ್ವದಲ್ಲಿ ಸ್ವಯಂಪ್ರಕಾಶನಾದ ಶಂಕರನಿಂದ ಮುನಿಗಳಿಗೆ ಹೇಳಲ್ಪಟ್ಟಿದೆ.

೨. ಲೋಕಗಳಿಗೆ ಹಿತವನ್ನು ಮಾಡುವ ಸಂಕಲ್ಪವುಳ್ಳ ಈಶ್ವರನ ಗಾತ್ರದಿಂದ ಆವಿರ್ಭಾವವನ್ನು ಹೊಂದಿರುವ ಶ್ರೇಷ್ಠವಾದ ಈ ನರ್ಮದಾನದಿಯು ಮುನಿಗಳಿಂದ ಸ್ತುತಿಸಲ್ಪಟ್ಟಿರುವುದು.

ಸರ್ವಪಾಪಹರಾ ನಿತ್ಯಂ ಸರ್ವದೇವನಮಸ್ಕೃತಾ ।
ಸಂಸ್ತುತಾ ದೇವಗಂಧರ್ವೈರಪ್ಸರೋಭಿಸ್ತಥೈವ ಚ ॥ ೩ ॥

ಉತ್ತರೇ ಚೈವ ಕೂಲೇ ಚ ತೀರ್ಥೇ ತ್ರೈಲೋಕ್ಯವಿಶ್ರುತೇ ।
ನಾಮ್ನಾ ಭದ್ರೇಶ್ವರಂ ಪುಣ್ಯಂ ಸರ್ವಪಾಪಹರಂ ಶುಭಮ್ ॥ ೪ ॥

ತತ್ರ ಸ್ನಾತ್ವಾ ನರೋ ರಾಜನ್ ದೈವತೈಃ ಸಹ ಮೋದತೇ ॥ ೫ ॥

ತತೋ ಗಚ್ಛೇತ ರಾಜೇಂದ್ರ ವಿಮಲೇಶ್ವರಮುತ್ತಮಮ್ ।
ತತ್ರ ಸ್ನಾತ್ವಾ ನರೋ ರಾಜನ್ ಗೋಸಹಸ್ರಫಲಂ ಲಭೇತ್ ॥ ೬ ॥

---

೩. ಮತ್ತು ಸಮಸ್ತ ಪಾಪಗಳನ್ನು ಮೋಚನಮಾಡುವುದೂ, ಸಮಸ್ತ ದೇವತೆಗಳಿಂದ ವಂದಿಸಲ್ಪಡುವುದೂ ಆದ ಈ ನದಿಯು ದೇವತೆ-ಗಂಧರ್ವ ಮತ್ತುಅಪ್ಸರಾಂಗನೆಯರಿಂದ ಪ್ರತಿದಿನದಲ್ಲಿಯೂ ಸ್ತುತಿಸಲ್ಪಟ್ಟಿದೆ.

೪. ಹಾಗು ಉತ್ತರ ತೀರದಲ್ಲಿ ತ್ರಿಲೋಕಗಳಲ್ಲಿ ಪ್ರಖ್ಯಾತವಾದ ತೀರ್ಥಗಳ ಸನ್ನಿಧಿಯಲ್ಲಿ ಭದ್ರೇಶ್ವರ ಎಂದು ನಾಮಧೇಯವುಳ್ಳದ್ದೂ ಸಮಸ್ತ ಪಾಪಗಳನ್ನು ಶೋಧಿಸುವುದೂ ಮತ್ತು ಮಂಗಳದಾಯಕವೂ ಆದ ತೀರ್ಥವು ಇರುವುದು.

೫. ಭದ್ರೇಶ್ವರವೆಂಬ ಆ ಪವಿತ್ರ ತೀರ್ಥದಲ್ಲಿ ಸ್ನಾನಮಾಡಿದ ನರನು ಸ್ವರ್ಗಲೋಕದಲ್ಲಿ ದೇವತೆಗಳೊಡನೆ ಸುಖಸಂಪತ್ತಿಯನ್ನು ಅನುಭವಿಸಿ ಸಂತೋಷಿಸುತ್ತಾನೆ.

೬. ಯುಧಿಷ್ಠಿರರಾಜನೆ ! ಭದ್ರೇಶ್ವರ ತೀರ್ಥದಲ್ಲಿ ಸ್ನಾನಮಾಡಿದ ಮಾನವನು ಅಲ್ಲಿಂದ ಉತ್ತಮವಾದ ವಿಮಲೇಶ್ವರ ತೀರ್ಥಕ್ಕೆ ಹೋಗಬೇಕು. ವಿಮಲೇಶ್ವರ ತೀರ್ಥದಲ್ಲಿ ಸ್ನಾನಮಾಡುವುದರಿಂದ ಮಾನವನು ಸಹಸ್ರ ಗೋದಾನದ ಫಲವನ್ನು ಹೊಂದುತ್ತಾನೆ.

ತತೋಽಙ್ಗಾರಕೇಶ್ವರಂ ಗಚ್ಛೇನ್ನಿಯತೋ ನಿಯತಾಯನಃ ।
ಸರ್ವಪಾಪವಿಶುದ್ಧಾತ್ಮಾ ರುದ್ರಲೋಕೇ ಮಹೀಯತೇ ॥ ೭ ॥

ತತೋ ಗಚ್ಛೇತ ರಾಜೇಂದ್ರ ಕೇದಾರಂ ನಾಮ ಪುಣ್ಯದಮ್ ।
ತತ್ರ ಸ್ನಾತ್ವೋದಕಂ ಪೀತ್ವಾ ಸರ್ವಾನ್ ಕಾಮಾನವಾಪ್ನುಯಾತ್॥ ೮ ॥

ನಿಷ್ಪಲೇಶಂ ತತೋ ಗಚ್ಛೇತ್ ಸರ್ವಪಾಪವಿನಾಶನಮ್ ।
ತತ್ರ ಸ್ನಾತ್ವಾ ಮಹಾರಾಜ ರುದ್ರಲೋಕೇ ಮಹೀಯತೇ ॥ ೯ ॥

ತತೋ ಗಚ್ಛೇತ ರಾಜೇಂದ್ರ ಬಾಣತೀರ್ಥಮನುತ್ತಮಮ್ ।
ತತ್ರ ಪ್ರಾಣಾನ್ ಪರಿತ್ಯಜ್ಯ ರುದ್ರಲೋಕಮವಾಪ್ನುಯಾತ್ ॥ ೧೦ ॥

---

೭. ಅನಂತರದಲ್ಲಿ ನಿಯಮಪರಿಪೂತನಾದ ಮಾನವನು ನಿಯತವಾದ ಮಾರ್ಗವನ್ನು ಅವಲಂಬಿಸಿ ಅಂಗಾರಕೇಶ್ವರ ತೀರ್ಥಕ್ಕೆ ಹೋಗಬೇಕು. ಆ ತೀರ್ಥ ಸೇವೆಯಿಂದ ಸರ್ವಪಾಪಗಳು ನಿವೃತ್ತಿಯಾಗಿ ಶುದ್ಧಾತ್ಮನಾಗಿ ರುದ್ರಲೋಕದಲ್ಲಿ ಮಾನ್ಯನಾಗುತ್ತಾನೆ.

೮. ರಾಜಶ್ರೇಷ್ಠನೆ! ತರುವಾಯ ಪುಣ್ಯವನ್ನು ಕೊಡುವ ಕೇದಾರವೆಂಬ ತೀರ್ಥವನ್ನು ಕುರಿತು ಹೋಗಬೇಕು. ಆ ತೀರ್ಥದಲ್ಲಿ ಸ್ನಾನ ಮತ್ತು ಪಾನಗಳನ್ನು ಮಾಡಿದರೆ ಸಮಸ್ತ ಇಷ್ಟಾರ್ಥಗಳನ್ನು ಹೊಂದುತ್ತಾನೆ.

೯. ಮಹಾರಾಜನೆ! ತರುವಾಯ ಸಮಸ್ತ ಪಾಪಗಳನ್ನು ಧ್ವಂಸಮಾಡುವ ನಿಷ್ಪಲೇಶವೆಂಬ ತೀರ್ಥವನ್ನು ಕುರಿತು ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಸ್ನಾನಮಾಡಿದವನು ರುದ್ರಲೋಕದಲ್ಲಿ ಪೂಜ್ಯನಾಗುತ್ತಾನೆ.

೧೦. ರಾಜೇಂದ್ರನೆ! ಅಲ್ಲಿಂದ ಮುಂದೆ ಸರ್ವೋತ್ತಮವಾದ ಬಾಣತೀರ್ಥವನ್ನು ಸೇವಿಸಬೇಕು. ಆ ಬಾಣತೀರ್ಥದಲ್ಲಿ ಮರಣಪರ್ಯಂತವಿದ್ದು ಪ್ರಾಣ ತ್ಯಾಗ ಮಾಡುವುದರಿಂದ ರುದ್ರಲೋಕವನ್ನು ಹೊಂದುತ್ತಾನೆ.

ತತಃ ಪುಷ್ಕರಿಣೀಂ ಗಚ್ಛೇತ್ ಸ್ನಾನಂ ತತ್ರ ಸಮಾಚರೇತ್ ।
ತತ್ರ ಸ್ನಾತ್ವಾ ನರೋ ರಾಜನ್ ಸಿಹ್ಮಾಸನಪತಿರ್ಭವೇತ್ ॥ ೧೧ ॥

ಶಾಕತೀರ್ಥಂ ತತೋ ಗಚ್ಛೇತ್ ಕೂಲೇ ಚೈವ ತು ದಕ್ಷಿಣೇ ।
ಸ್ನಾತಮಾತ್ರೋ ನರಸ್ತತ್ರ ಇಂದ್ರಸ್ಯಾರ್ಧಾಸನಂ ಲಭೇತ್ ॥ ೧೨ ॥

ತತೋ ಗಚ್ಛೇತ ರಾಜೇಂದ್ರ ಶೂಲಭೇದಮಿತಿ ಶ್ರುತಿಃ ।
ತತ್ರ ಸ್ನಾತ್ವಾ ಚ ಪೀತ್ವಾ ಚ ಗೋಸಹಸ್ರಫಲಂ ಲಭೇತ್ ॥ ೧೩ ॥

ಉಪೋಷ್ಯ ರಜನೀಮೇಕಾಂ ಸ್ನಾನಂ ಕೃತ್ವಾ ಯಥಾವಿಧಿ ।
ಆರಾಧಯೇನ್ಮಹಾಯೋಗಂ ದೇವದೇವಂ ನರೋಽಮಲಃ ॥ ೧೪ ॥

---

೧೧. ತರುವಾಯ ಪುಷ್ಕರಿಣೀತೀರ್ಥಕ್ಕೆ ಹೋಗಬೇಕು. ಮತ್ತು ಅಲ್ಲಿ ಸ್ನಾನ ವಿಧಿಯನ್ನು ಆಚರಿಸಬೇಕು. ರಾಜನೆ! ಪುಷ್ಕರಿಣೀ ತೀರ್ಥದಲ್ಲಿ ಮಾನವನು ಸ್ನಾನಮಾಡಿ ರಾಜ್ಯವನ್ನು ಆಳುವ ಪ್ರಭುವಾಗಿ ಸಿಂಹಾಸನಕ್ಕೆ ಅಧಿಪತಿಯಾಗುವನು.

೧೨. ಅಲ್ಲಿಂದ ಮುಂದೆ ದಕ್ಷಿಣಭಾಗದ ತೀರದಲ್ಲಿರುವ ಶಾಕತೀರ್ಥವನ್ನು ಸೇವಿಸಬೇಕು. ಶಾಕತೀರ್ಥದಲ್ಲಿ ನರನು ಸ್ನಾನಮಾತ್ರಾನುಷ್ಠಾನದಿಂದ ಇಂದ್ರನ ಅರ್ಧಾಸನವನ್ನು ಹೊಂದುವನು.

೧೩. ಮಹಾರಾಜನೆ! ಅಲ್ಲಿಂದ ಮುಂದೆ ಶೂಲಭೇದ ಎಂಬ ತೀರ್ಥಕ್ಕೆ ಹೋಗಬೇಕು-ಎಂದು ಶ್ರುತಿಯು ವಿಧಿಸಿದೆ. ಶೂಲಭೇದ ತೀರ್ಥದಲ್ಲಿ ಸ್ನಾನ-ಪಾನಗಳ ಅನುಷ್ಠಾನದಿಂದ ಸಹಸ್ರ ಗೋದಾನಫಲಗಳನ್ನು ಅನುಭವಿಸುತ್ತಾನೆ.

೧೪. ಅಲ್ಲಿ ಪರಿಶುದ್ಧನಾದ ಮಾನವನು ಒಂದುರಾತ್ರಿಯಲ್ಲಿ ಉಪವಾಸ ಮಾಡಿ ಯಥಾವಿಧಿಯಾಗಿ ಸ್ನಾನಮಾಡಿ ದೇವತೆಗಳಿಗೆ ದೇವತೆಯೂ ಮಹಾಯೋಗೇಶ್ವರನೂ ಆದ ನಾರಾಯಣನನ್ನು ಆರಾಧಿಸಬೇಕು.

ಗೋಸಹಸ್ರಫಲಂ ಪ್ರಾಪ್ಯ ವಿಷ್ಣುಲೋಕಂ ಸ ಗಚ್ಛತಿ ॥ ೧೫ ॥

ಋಷಿತೀರ್ಥಂ ತತೋ ಗತ್ವಾ ಸರ್ವಪಾಪಹರಂ ನೃಣಾಮ್ ।
ಸ್ನಾತಮಾತ್ರೋ ನರಸ್ತತ್ರ ಶಿವಲೋಕೇ ಮಹೀಯತೇ ॥ ೧೬ ॥

ನಾರದಸ್ಯ ತು ತತ್ರೈವ ತೀರ್ಥಂ ಪರಮಶೋಭನಮ್ ।
ಸ್ನಾತಮಾತ್ರೋ ನರಸ್ತತ್ರ ಗೋಸಹಸ್ರಫಲಂ ಲಭೇತ್ ॥ ೧೭ ॥

ಯತ್ರ ತಪ್ತಂ ತಪಃ ಪೂರ್ವಂ ನಾರದೇನ ಸುರರ್ಷಿಣಾ ।
ಪ್ರೀತಸ್ತಸ್ಯ ದದೌ ಯೋಗಂ ದೇವದೇವೋ ಮಹೇಶ್ವರಃ ॥ ೧೮ ॥

---

೧೫. ಹೀಗೆ ಆ ತೀರ್ಥದಲ್ಲಿ ಮಾಡಿದ ನಾರಾಯಣನ ಆರಾಧನೆಯಿಂದ ಸಹಸ್ರ ಗೋದಾನಗಳ ಫಲವನ್ನು ಹೊಂದಿ ಕಡೆಯಲ್ಲಿ ವಿಷ್ಣುಲೋಕವನ್ನು ಹೊಂದುತ್ತಾನೆ.

೧೬. ತರುವಾಯ ಮಾನವಜನರ ಸಮಸ್ತ ಪಾತಕಗಳನ್ನು ತೊಳೆದು ಹಾಕುವ ಋಷಿತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನವನ್ನು ಮಾಡಿದ ನರನು ಅದರ ಪ್ರಭಾವದಿಂದ ಶಿವನ ಲೋಕದಲ್ಲಿ ಮಾನ್ಯನಾಗುವನು.

೧೭. ಅದೇ ಸ್ಥಲದಲ್ಲಿ ಪರಮಕಲ್ಯಾಣಗಳನ್ನು ಕೊಡುವ ನಾರದಮುನಿಯ ತೀರ್ಥವು ಇರುವುದು. ನಾರದ ತೀರ್ಥದಲ್ಲಿ ಸ್ನಾನವನ್ನು ಮಾತ್ರ ಮಾಡಿರುವ ನರನು ಸಹಸ್ರ ಗೋದಾನದ ಫಲವನ್ನು ಹೊಂದುತ್ತಾನೆ.

೧೮. ಆ ನಾರದ ತೀರ್ಥದಲ್ಲಿ ದೇವರ್ಷಿಯಾದ ನಾರದಮುನಿಯಿಂದ ಪೂರ್ವ ಕಾಲದಲ್ಲಿ ತಪವು ಆಚರಿಸಲ್ಪಟ್ಟಿತು. ಅದರಿಂದ ಪ್ರಸನ್ನನೂ, ಸುಪ್ರೀತನೂ, ದೇವೋತ್ತಮನೂ ಆದ ಮಹೇಶ್ವರನು ನಾರದಮುನಿಗೆ ಯೋಗವನ್ನು ಉಪದೇಶಿಸಿದನು.

ಬ್ರಹ್ಮಣಾ ನಿರ್ಮಿತಂ ಲಿಂಗಂ ಬ್ರಹ್ಮೇಶ್ವರಮಿತಿ ಶ್ರುತಮ್ ।
ಯತ್ರ ಸ್ನಾತ್ವಾ ನರೋ ರಾಜನ್ ಬ್ರಹ್ಮಲೋಕೇ ಮಹೀಯತೇ॥ ೧೯ ॥

ಋಣತೀರ್ಥಂ ತತೋ ಗಚ್ಛೇದೃಣಾನ್ಮುಚ್ಯೇನ್ನರೋ ಧ್ರುವಮ್ ।
ವಟೇಶ್ವರಂ ತತೋ ಗಚ್ಛೇತ್ ಪರ್ಯಾಪ್ತಂ ಜನ್ಮನಃ ಫಲಮ್॥ ೨೦ ॥

ಭೀಮೇಶ್ವರಂ ತತೋ ಗಚ್ಛೇತ್ ಸರ್ವವ್ಯಾಧಿವಿನಾಶನಮ್ ।
ಸ್ನಾತಮಾತ್ರೋ ನರಸ್ತತ್ರ ಸರ್ವದುಃಖೈಃ ಪ್ರಮುಚ್ಯತೇ ॥ ೨೧ ॥

ತತೋ ಗಚ್ಛೇತ ರಾಜೇಂದ್ರ ಪಿಂಗಲೇಶ್ವರಮುತ್ತಮಮ್ ।
ಅಹೋರಾತ್ರೋಪವಾಸೇನ ತ್ರಿರಾತ್ರಫಲಮಾಪ್ನುಯಾತ್ ॥ ೨೨ ॥

---

೧೯. ರಾಜನೆ! ಬ್ರಹ್ಮದೇವನಿಂದ ನಿರ್ಮಿಸಲ್ಪಟ್ಟಿರುವ ಲಿಂಗವು ಬ್ರಹ್ಮೇಶ್ವರ ಎಂದು ಪ್ರಸಿದ್ಧಿಹೊಂದಿರುವುದು. ಅದರ ಸಮೀಪದಲ್ಲಿರುವ ಬ್ರಹ್ಮೇಶ್ವರ ತೀರ್ಥದಲ್ಲಿ ಸ್ನಾನಮಾಡಿದ ಮಾನವನು ಬ್ರಹ್ಮಲೋಕದಲ್ಲಿ ಗಣ್ಯನಾಗುತ್ತಾನೆ.

೨೦. ಅಲ್ಲಿಂದ ಮುಂದೆ ಋಣತೀರ್ಥವೆಂಬ ನಾಮಾಂಕಿತವಾದ ತೀರ್ಥಕ್ಕೆ ಹೋಗಬೇಕು. ಆ ತೀರ್ಥಸೇವೆಯಿಂದ ನರನು ನಿಜವಾಗಿ ಋಣದಿಂದ ಬಿಡುಗಡೆ ಹೊಂದುತ್ತಾನೆ. ಅಲ್ಲಿಂದ ವಟೇಶ್ವರತೀರ್ಥಕ್ಕೆ ಹೋಗಬೇಕು. ಅದರಿಂದ ಜನ್ಮವು ಸಾರ್ಥಕವಾದಂತೆ ಆಗುವುದು.

೨೧. ತರುವಾಯ ಸರ್ವ ರೋಗೋಪದ್ರವಗಳನ್ನು ನಾಶಮಾಡುವ ಭೀಮೇಶ್ವರ ತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನವನ್ನು ಮಾಡಿ ಪವಿತ್ರನಾದ ನರನು ಸಕಲ ದುಃಖಗಳಿಂದ ಮುಕ್ತನಾಗುತ್ತಾನೆ.

೨೨. ಮಹಾರಾಜನೆ! ಅನಂತರದಲ್ಲಿ ಪ್ರಶಸ್ತವಾದ ಪಿಂಗಲೇಶ್ವರವೆಂಬ ತೀರ್ಥಕ್ಕೆ ಹೋಗಬೇಕು. ಆ ಪಿಂಗಲೇಶ್ವರ ತೀರ್ಥದಲ್ಲಿ ಒಂದು ಅಹೋರಾತ್ರದಲ್ಲಿ ಮಾತ್ರ ಉಪವಾಸ ವ್ರತಾನುಷ್ಠಾನದಿಂದ ತ್ರಿರಾತ್ರವ್ರತದ ಫಲವನ್ನು ಹೊಂದುತ್ತಾನೆ.

ತಸ್ಮಿಂಸ್ತೀರ್ಥೇ ತು ರಾಜೇಂದ್ರ ಕಪಿಲಾಂ ಯಃ ಪ್ರಯಚ್ಛತಿ ।
ಯಾವಂತಿ ತಸ್ಯಾ ರೋಮಾಣಿ ತತ್ಪ್ರಸೂತಿಕುಲೇಷು ಚ ॥ ೨೩ ॥

ತಾವದ್ವರ್ಷಸಹಸ್ರಾಣಿ ರುದ್ರಲೋಕೇ ಮಹೀಯತೇ ॥ ೨೪ ॥

ಯಸ್ತು ಪ್ರಾಣಪರಿತ್ಯಾಗಂ ಕುರ್ಯಾತ್ತತ್ರ ನರಾಧಿಪ ।
ಅಕ್ಷಯಂ ಮೋದತೇ ಕಾಲಂ ಯಾವಚ್ಚಂದ್ರದಿವಾಕರೌ ॥ ೨೫ ॥

ನರ್ಮದಾತಟಮಾಶ್ರಿತ್ಯ ಯೇ ಚ ತಿಷ್ಠಂತಿ ಮಾನವಾಃ ।
ತೇ ಮೃತಾಃ ಸ್ವರ್ಗಮಾಯಾಂತಿ ಸಂತಃ ಸುಕೃತಿನೋ ಯಥಾ ॥ ೨೬ ॥

---

೨೩. ಆ ಪಿಂಗಲೇಶ್ವರ ತೀರ್ಥದಲ್ಲಿ ಯಾವ ಮಾನವನು ಕಪಿಲವರ್ಣದ ಗೋವನ್ನು ದಾನಕೊಡುವನೋ; ಅವನಿಗೆ ಆ ದಾನದ ಫಲಭೋಗವು ಕಪಿಲಾಗೋವಿನ ಮತ್ತು ಅದರ ಸಂತತಿಯ ರೋಮಗಳ ಸಂಖ್ಯಾಪರಿಮಾಣವನ್ನು ಅವಲಂಬಿಸಿದೆ.

೨೪. ಹೀಗೆ ತಾನು ದಾನಮಾಡಿದ ಕಪಿಲಾಗೋವ್ಯಕ್ತಿಯಲ್ಲಿ ಮತ್ತು ಅದರ ಸಂತತಿಯಲ್ಲಿ ರೋಮಗಳು ಎಷ್ಟು ಸಂಖ್ಯೆಯಲ್ಲಿವೆಯೊ, ಅಷ್ಟು ಸಹಸ್ರ ವರ್ಷಗಳ ವರೆಗೆ ರುದ್ರಲೋಕದಲ್ಲಿ ಪೂಜಿಸಲ್ಪಡುತ್ತಾನೆ.

೨೫. ನರಪತಿಯೆ ! ಯಾವ ಮನುಷ್ಯನು ಆ ತೀರ್ಥದಲ್ಲಿ ಪ್ರಾಣತ್ಯಾಗ ವನ್ನು ಮಾಡುವನೊ, ಅವನು ಗಗನದಲ್ಲಿ ಸೂರ್ಯ-ಚಂದ್ರರು ಪ್ರಕಾಶಿಸುತ್ತಿರುವಷ್ಟು ಶಾಶ್ವತಕಾಲದವರೆಗೆ ಸುಖವನ್ನು ಹೊಂದಿ ಸಂತೋಷಿಸುತ್ತಾನೆ.

೨೬. ನರ್ಮದಾನದಿಯ ತೀರವನ್ನು ಆಶ್ರಯಿಸಿಕೊಂಡು ಯಾವ ಮಾನ ವರು ವಾಸಮಾಡುವರೊ; ಅವರು ಮರಣಾನಂತರದಲ್ಲಿ ಸುಕೃತವನ್ನು ಮಾಡಿದ ಸಾಧುಜನರಂತೆ ಸ್ವರ್ಗಲೋಕ ಸುಖವನ್ನು ಹೊಂದುತ್ತಾರೆ.

ತತೋ ದೀಪ್ತೇಶ್ವರಂ ಗಚ್ಛೇದ್ವ್ಯಾಸತೀರ್ಥಂ ತಪೋವನಮ್ ।
ನಿವರ್ತಿತಾ ಪುರಾ ತತ್ರ ವ್ಯಾಸಭೀತಾ ಮಹಾನದೀ ॥ ೨೭ ॥

ಹುಂಕಾರಿತಾ ತು ವ್ಯಾಸೇನ ತತ್ಕ್ಷಣೇನ ತತೋ ಗತಾ ॥ ೨೮ ॥

ಪ್ರದಕ್ಷಿಣಂ ತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ಯುಧಿಷ್ಠಿರ ।
ಪ್ರೀತಸ್ತತ್ರ ಭವೇದ್ವ್ಯಾಸೋ ವಾಂಛಿತಂ ಲಭತೇ ಫಲಮ್ ॥ ೨೯ ॥

ತತೋ ಗಚ್ಛೇತ ರಾಜೇಂದ್ರ ಇಕ್ಷುನದ್ಯಾಸ್ತು ಸಂಗಮಮ್ ।
ತ್ರೈಲೋಕ್ಯವಿಶ್ರುತಂ ಪುಣ್ಯಂ ತತ್ರ ಸನ್ನಿಹಿತಃ ಶಿವಃ ॥ ೩೦ ॥

---

೨೭. ತರುವಾಯ ವ್ಯಾಸಮುನಿಯು ವಾಸಮಾಡಿದ ತಪೋವನಕ್ಕೂ, ವ್ಯಾಸಮುನಿಯಿಂದ ಅಲ್ಲಿ ರಚಿತವಾದ ವ್ಯಾಸತೀರ್ಥಕ್ಕೂ, ಅದರ ಸನ್ನಿಧಿಯಲ್ಲಿದ್ದ ದೀಪ್ತೇಶ್ವರತೀರ್ಥಕ್ಕೂ ಹೋಗಬೇಕು. ಪೂರ್ವದಲ್ಲಿ ಅಲ್ಲಿದ್ದ ಮಹಾನದಿಯು ವ್ಯಾಸಮುನಿಗೆ ಭಯಪಟ್ಟು ಹಿಂತಿರುಗಿದೆ.

೨೮. ವ್ಯಾಸಮುನಿಯು ಒಂದುಸಲ ಹುಂಕಾರದಿಂದ ಗರ್ಜಿಸಿ ಬೆದರಿಸಲಾಗಿ ಆ ಕ್ಷಣದಲ್ಲಿ ಆ ಮಹಾನದಿಯು ಅಲ್ಲಿಂದ ಹಿಂತಿರುಗಿ ಹೋಗಿರುವುದು.

೨೯. ಯುಧಿಷ್ಠಿರರಾಜನೆ ! ಆ ತೀರ್ಥದಲ್ಲಿ ಯಾವ ನರನು ಪ್ರದಕ್ಷಿಣೆ ಯನ್ನು ಮಾಡುವನೊ; ಅವನ ವಿಷಯದಲ್ಲಿ ವ್ಯಾಸಮುನಿಯು ಪ್ರಸನ್ನನಾಗುವನು, ಮತ್ತು ನರನ ಇಷ್ಟಾರ್ಥಗಳನ್ನು ಕೊಡುವನು.

೩೦. ರಾಜೇಂದ್ರನೆ ! ತ್ರಿಲೋಕಗಳಲ್ಲಿ ಪ್ರಖ್ಯಾತಿಹೊಂದಿರುವ ಇಕ್ಷುನದೀ ಸಂಗಮರೂಪವಾದ ಪುಣ್ಯತೀರ್ಥಕ್ಕೆ ಅಲ್ಲಿಂದ ಹೋಗಬೇಕು. ಆ ತೀರ್ಥದಲ್ಲಿ ಯಾವಾಗಲೂ ಮಹೇಶ್ವರನು ಸನ್ನಿಹಿತನಾಗಿರವನು.

ತತ್ರ ಸ್ನಾತ್ವಾ ನರೋ ರಾಜನ್ ಗಾಣಪತ್ಯಮವಾಪ್ನುಯಾತ್ ॥ ೩೧ ॥

ಋಣತೀರ್ಥಂ ತತೋ ಗಚ್ಛೇತ್ ಸ ಋಣಾನ್ಮುಚ್ಯತೇ ಧ್ರುವಮ್ ।
ಆಜನ್ಮನಃ ಕೃತಂ ಪಾಪಂ ಸ್ನಾತಸ್ತತ್ರ ವ್ಯಪೋಹತಿ ॥ ೩೨ ॥

ತತ್ರ ದೇವಾಃ ಸಗಂಧರ್ವಾ ಭರ್ಗಾತ್ಮಜಮನುತ್ತಮಮ್ ।
ಉಪಾಸತೇ ಮಹಾತ್ಮಾನಂ ಸ್ಕಂದಂ ಶಕ್ತಿಧರಂ ಪ್ರಭುಮ್ ॥ ೩೩ ॥

ತತೋ ಗಚ್ಛೇದಾಂಗಿರಸಂ ಸ್ನಾನಂ ತತ್ರ ಸಮಾಚರೇತ್ ।
ಗೋಸಹಸ್ರಫಲಂ ಪ್ರಾಪ್ಯ ರುದ್ರಲೋಕಂ ಸ ಗಚ್ಛತಿ ॥ ೩೪ ॥

---

೩೧. ರಾಜನೆ! ಹೀಗೆ ಇಕ್ಷುನದೀ ಸಂಗಮಕ್ಷೇತ್ರದಲ್ಲಿ ಶಿವನ ಸನ್ನಿಧಿಯಲ್ಲಿ ಸ್ನಾನ ಮಾಡುವುದರಿಂದ ಜನಿಸಿದ ಪುಣ್ಯಪ್ರಭಾವದಿಂದ ಗಣಗಳ ಆಧಿಪತ್ಯಾಧಿಕಾರವನ್ನು ಹೊಂದುವನು.

೩೨. ಅಲ್ಲಿಂದ ಮುಂದೆ ಋಣತೀರ್ಥವನ್ನು ಕುರಿತು ಪ್ರಯಾಣ ಮಾಡಬೇಕು. ಆ ಋಣತೀರ್ಥದಲ್ಲಿ ಮಾಡುವ ಯಾತ್ರಾವಿಧಿಯಿಂದ ಮಾನವನು ಋಣದಿಂದ ಬಿಡುಗಡೆಯನ್ನು ಹೊಂದುವನು. ಮತ್ತು ಅಲ್ಲಿ ಸ್ನಾನಮಾಡಿದ್ದರಿಂದ ಜನನ ಮೊದಲುಗೊಂಡು ಮಾಡಿದ್ದ ಪಾಪರಾಶಿಯು ಕಳೆದುಹೋಗುವುದು.

೩೩. ಆ ಋಣತೀರ್ಥದಲ್ಲಿ ದೇವತೆಗಳು ಗಂಧರ್ವರೊಡನೆ ಶ್ರೇಷ್ಠನೂ, ಮಹೇಶ್ವರನ ಪುತ್ರನೂ, ಮಹಾತ್ಮನೂ, ಶಕ್ತಿಧರನೂ, ಮತ್ತು ಪ್ರಭುವೂ ಆದ ಕುಮಾರಸ್ವಾಮಿಯನ್ನು ಸಂತತವಾಗಿ ಸೇವಿಸುತ್ತಿರುವರು.

೩೪. ಅಲ್ಲಿಂದ ಮುಂದೆ ಆಂಗಿರಸತೀರ್ಥಕ್ಕೆ ಹೋಗಿ ಆ ತೀರ್ಥದಲ್ಲಿ ಸ್ನಾನವನ್ನು ವಿಧಿವತ್ತಾಗಿ ಆಚರಿಸಬೇಕು. ಹಾಗೆ ಆಚರಿಸಿದ ಪುಣ್ಯವಂತನು ಸಹಸ್ರ ಗೋದಾನದಫಲವನ್ನು ಹೊಂದಿ ಅಂತದಲ್ಲಿ ರುದ್ರಲೋಕಕ್ಕೆ ಹೋಗುತ್ತಾನೆ.

ಅಂಗಿರಾ ಯತ್ರ ದೇವೇಶಂ ಬ್ರಹ್ಮಪುತ್ರೋ ವೃಷಧ್ವಜಮ್ ।
ತಪಸಾರಾಧ್ಯ ವಿಶ್ವೇಶಂ ಲಬ್ಧವಾನ್ ಯೋಗಮುತ್ತಮಮ್ ॥ ೩೫ ॥

ಕುಶತೀರ್ಥಂ ತತೋ ಗಚ್ಛೇತ್ ಸರ್ವಪಾಪಪ್ರಣಾಶನಮ್ ।
ತತ್ರ ಸ್ನಾನಂ ಪ್ರಕುರ್ವೀತ ಅಶ್ವಮೇಧಫಲಂ ಲಭೇತ್ ॥ ೩೬ ॥

ಕೋಟಿತೀರ್ಥಂ ತತೋ ಗಚ್ಛೇತ್ ಸರ್ವಪಾಪಪ್ರಣಾಶನಮ್ ।
ಆಜನ್ಮನಃ ಕೃತಂ ಪಾಪಂ ಸ್ನಾತಸ್ತತ್ರ ವ್ಯಪೋಹತಿ ॥ ೩೭ ॥

ಚಂದ್ರಭಾಗಾಂ ತತೋ ಗಚ್ಛೇತ್ ಸ್ನಾನಂ ತತ್ರ ಸಮಾಚರೇತ್ ।
ಸ್ನಾತಮಾತ್ರೋ ನರಸ್ತತ್ರ ಸೋಮಲೋಕೇ ಮಹೀಯತೇ ॥ ೩೮ ॥

---

೩೫. ಆ ತೀರ್ಥದಲ್ಲಿ ಬ್ರಹ್ಮಪುತ್ರನಾದ ಅಂಗಿರಮುನಿಯು ದೇವತೆಗಳಿಗೆ ಪ್ರಭುವೂ, ವಿಶ್ವಕ್ಕೆ ನಿಯಾಮಕನೂ, ಮತ್ತು ವೃಷಭಾಂಕಿತ ಧ್ವಜವುಳ್ಳವನೂ ಆದ ಮಹೇಶ್ವರನನ್ನು ತಪಶ್ಚರ್ಯೆಯಿಂದ ಆರಾಧಿಸಿ ಉತ್ತಮವಾದ ಯೋಗವಿಧಿಯನ್ನು ಹೊಂದಿದನು.

೩೬. ತರುವಾಯ ಸಮಸ್ತ ಪಾಪಗಳನ್ನು ದೂರಮಾಡುವ ಕುಶತೀರ್ಥವೆಂಬ ಉತ್ತಮತೀರ್ಥಕ್ಕೆ ಹೋಗಬೇಕು. ಆ ತೀರ್ಥದಲ್ಲಿ ಸ್ನಾನಮಾಡಿದ ಮಾನವನು ಅಶ್ವಮೇಧಯಾಗವನ್ನು ಆಚರಿಸಿದ ಫಲವನ್ನು ಹೊಂದುತ್ತಾನೆ.

೩೭. ಅಲ್ಲಿಂದ ಮುಂದೆ ಯಾತ್ರಿಕರ ಸಕಲ ಪಾಪಗಳನ್ನು ಭಂಜಿಸುವ ಕೋಟಿ ತೀರ್ಥಕ್ಕೆ ಹೋಗಬೇಕು. ಕೋಟಿತೀರ್ಥದಲ್ಲಿ ಸ್ನಾನಮಾಡಿದ ಮಾನವನು ತಾನು ಜನ್ಮವೆತ್ತಿದ ಮೊದಲಾಗಿ ಮಾಡಿದ ಸಕಲ ಪಾಪಗಳ ರಾಶಿಯು ನಾಶ ಹೊಂದುವುದು.

೩೮. ಮತ್ತು ಮುಂದೆ ಚಂದ್ರಭಾಗಾನದಿ ಎಂಬ ಪ್ರಶಸ್ತ ತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನವಿಧಿಯನ್ನು ಆಚರಿಸಬೇಕು. ಚಂದ್ರಭಾಗಾ ತೀರ್ಥದಲ್ಲಿ ಸ್ನಾನ ಮಾಡಿದ ಮಾತ್ರದಿಂದ ನರನು ಚಂದ್ರಲೋಕದಲ್ಲಿ ಗಣ್ಯನಾಗುತ್ತಾನೆ.

ನರ್ಮದಾದಕ್ಷಿಣೇ ಕೂಲೇ ಸಂಗಮೇಶ್ವರಮುತ್ತಮಮ್ ।
ತತ್ರ ಸ್ನಾತ್ವಾ ನರೋ ರಾಜನ್ ಸರ್ವಯಜ್ಞಫಲಂ ಲಭೇತ್ ॥ ೩೯ ॥

ನರ್ಮದಾಯಾ ಉದಕ್ಕೂಲೇ ತೀರ್ಥಂ ಪರಮಶೋಭನಮ್ ।
ಆದಿತ್ಯಾಯತನಂ ರಮ್ಯಮೀಶ್ವರೇಣ ತು ಭಾಷಿತಮ್ ॥ ೪೦ ॥

ತತ್ರ ಸ್ನಾತ್ವಾ ತು ರಾಜೇಂದ್ರ ದತ್ವಾ ದಾನಂ ತು ಶಕ್ತಿತಃ ।
ತಸ್ಯ ತೀರ್ಥಪ್ರಭಾವೇಣ ಲಭತೇ ಚಾಕ್ಷಯಂ ಫಲಮ್ । ॥ ೪೧ ॥

ದರಿದ್ರಾ ವ್ಯಾಧಿತಾ ಯೇ ತು ಯೇ ತು ದುಷ್ಕೃತಕರ್ಮಿಣಃ ।
ಮುಚ್ಯಂತೇ ಸರ್ವಪಾಪೇಭ್ಯಃ ಸೂರ್ಯಲೋಕಂ ಪ್ರಯಾಂತಿ ತೇ॥ ೪೨ ॥

---

೩೯. ಮಹಾರಾಜನೆ! ನರ್ಮದಾನದಿಯ ದಕ್ಷಿಣತೀರದಲ್ಲಿ ಉತ್ತಮವಾದ ಸಂಗಮೇಶ್ವರ ತೀರ್ಥವು ಇರುವುದು. ಆ ತೀರ್ಥದಲ್ಲಿ ಮಾನವನು ಸ್ನಾನಮಾಡು ವುದರಿಂದ ಸಮಸ್ತ ಯಜ್ಞಗಳನ್ನು ಆಚರಿಸುವುದರಿಂದ ಉಂಟಾಗುವ ಫಲರಾಶಿಗೆ ಭಾಗಿಯಾಗುವನು.

೪೦. ನರ್ಮದಾನದಿಯ ಉತ್ತರದಿಕ್ಕಿನ ತೀರದಲ್ಲಿ ಸರ್ವೋತ್ತಮವೂ ಮಂಗಳದಾಯಕವೂ ಮತ್ತು ರಮಣೀಯವೂ ಆದ ಆದಿತ್ಯಾಯತನವೆಂಬ ತೀರ್ಥವು ಇರುವುದು. ಈ ತೀರ್ಥವು ಸರ್ವೇಶ್ವರನಿಂದ ಪ್ರಶಂಸಿಸಲ್ಪಟ್ಟಿದೆ.

೪೧. ರಾಜೇಂದ್ರನೆ! ಆದಿತ್ಯಾಯತನ ತೀರ್ಥದಲ್ಲಿ ಸ್ನಾನಮಾಡಿ ಯಥಾ ಶಕ್ತಿಯಾಗಿ ದಾನವನ್ನು ಕೊಟ್ಟು, ಆ ತೀರ್ಥಸನ್ನಿಧಿಯಲ್ಲಿ ಮಾಡಿದ ಸ್ನಾನ–ದಾನ ಪ್ರಭಾವಗಳಿಂದ ಅಕ್ಷಯವಾದ ಫಲವನ್ನು ಹೊಂದುತ್ತಾನೆ.

೪೨. ಮಾನವರಲ್ಲಿ ದರಿದ್ರರಾಗಲಿ, ರೋಗಗ್ರಸ್ತರಾಗಲಿ, ಅಥವಾ ದುಷ್ಕೃತ ಗಳನ್ನು ಆಚರಿಸಿದವರೇ ಆಗಲಿ ಆಗಿರುವ ಮಾನವರು ಆದಿತ್ಯಾಯತನ ತೀರ್ಥಸೇವೆ ಯಿಂದ ಸರ್ವ ಪಾಪಗಳಿಂದ ಮುಕ್ತರಾಗಿ ಸೂರ್ಯಲೋಕವನ್ನು ಹೊಂದುತ್ತಾರೆ.

ಮಾತೃತೀರ್ಥಂ ತತೋ ಗಚ್ಛೇತ್ ಸ್ನಾನಂ ತತ್ರ ಸಮಾಚರೇತ್ ।
ಸ್ನಾತಮಾತ್ರೋ ನರಸ್ತತ್ರ ಸ್ವರ್ಗಲೋಕಮವಾಪ್ನುಯಾತ್ ॥ ೪೩ ॥

ತತಃ ಪಶ್ಚಿಮತೋ ಗಚ್ಛೇನ್ಮರುತಾಶಯಮುತ್ತಮಮ್ ।
ತತ್ರ ಸ್ನಾತ್ವಾ ತು ರಾಜೇಂದ್ರ ಶುಚಿರ್ಭೂತ್ವಾ ಸಮಾಹಿತಃ ॥ ೪೪ ॥

ಕಾಂಚನಂ ಚ ಯತೇರ್ದದ್ಯಾದ್ಯಥಾವಿಭವವಿಸ್ತರಮ್ ।
ಪುಷ್ಪಕೇಣ ವಿಮಾನೇನ ವಾಯುಲೋಕಂ ಸ ಗಚ್ಛತಿ ॥ ೪೫ ॥

ತತೋ ಗಚ್ಛೇತ ರಾಜೇಂದ್ರ ಅಹಲ್ಯಾತೀರ್ಥಮುತ್ತಮಮ್ ।
ಸ್ನಾನಮಾತ್ರಾದಪ್ಸರೋಭಿರ್ಮೋದತೇ ಕಾಲಮುತ್ತಮಮ್ ॥ ೪೬ ॥

---

೪೩. ತರುವಾಯ ಮಾತೃತೀರ್ಥವನ್ನು ಕುರಿತು ಹೋಗಬೇಕು. ಆ ತೀರ್ಥವನ್ನು ಹೊಂದಿ ಅಲ್ಲಿ ಸ್ನಾನಮಾಡಬೇಕು. ನರನು ಅಲ್ಲಿ ಸ್ನಾನಮಾಡಿದ ತತ್‌ಕ್ಷಣದಲ್ಲಿ ಪುಣ್ಯಪ್ರಭಾವದಿಂದ ಸ್ವರ್ಗಸುಖವನ್ನು ಅನುಭವಿಸುತ್ತಾನೆ.

೪೪. ಅಲ್ಲಿಂದ ಪಶ್ಚಿಮಭಾಗದಲ್ಲಿರುವ ಮರುತಾಶಯವೆಂಬ ನಾಮಾಂಕನವುಳ್ಳ ಉತ್ತಮತೀರ್ಥಕ್ಕೆ ಹೋಗಬೇಕು. ರಾಜೇಂದ್ರನೆ! ಆ ತೀರ್ಥದಲ್ಲಿ ಸ್ನಾನಮಾಡಿ ಶುಚಿಯೂ ಮತ್ತು ಚಿತ್ತಶಾಂತಿಯುಳ್ಳವನೂ ಆಗಬೇಕು.

೪೫. ಮತ್ತು ತನ್ನ ಸಂಪತ್ತಿ ವಿಭವ ವಿಸ್ತಾರಗಳನ್ನು ಅನುಸರಿಸಿ ಯತಿಗೆ ಕಾಂಚನವನ್ನು ದಾನಮಾಡಬೇಕು. ಅವನು ಪುಷ್ಪಕವಿಮಾನವನ್ನು ಆರೋಹಣ ಮಾಡಿ ವಾಯುಲೋಕಕ್ಕೆ ಹೋಗುವನು.

೪೬. ರಾಜಶ್ರೇಷ್ಠನೆ! ಅಲ್ಲಿಂದ ಮುಂದೆ ಶ್ರೇಷ್ಠವಾದ ಅಹಲ್ಯಾತೀರ್ಥವನ್ನು ಕುರಿತು ಪ್ರಯಾಣಮಾಡಬೇಕು. ಆ ಅಹಲ್ಯಾತೀರ್ಥದಲ್ಲಿ ಸ್ನಾನಮಾಡಿದ ಪುಣ್ಯಪ್ರಭಾವದಿಂದ ಮಾತ್ರವೇ ಬಹು ದೀರ್ಘಕಾಲದವರೆಗೆ ಅಪ್ಸರಾಂಗನೆಯರೊಡನೆ ವಿಹರಿಸುತ್ತಾನೆ.

ಚೈತ್ರಮಾಸೇ ತು ಸಂಪ್ರಾಪ್ತೇ ಶುಕ್ಲಪಕ್ಷೇ ತ್ರಯೋದಶೀ ।
ಕಾಮದೇವದಿನೇ ತಸ್ಮಿನ್ ಅಹಲ್ಯಾಂ ಪೂಜಯೇನ್ನರಃ ॥ ೪೭ ॥

ಯತ್ರ ತತ್ರ ಸಮುತ್ಪನ್ನೋ ನರೋऽತ್ಯರ್ಥಪ್ರಿಯೋ ಭವೇತ್ ।
ಸ್ತ್ರೀವಲ್ಲಭೋ ಭವೇಚ್ಛ್ರೀಮಾನ್ ಕಾಮದೇವ ಇವಾಪರಃ ॥ ೪೮ ॥

ಸರಿದ್ವರಾಂ ಸಮಾಸಾದ್ಯ ತೀರ್ಥಂ ಶಕ್ರಸ್ಯ ವಿಶ್ರುತಮ್ ।
ಸ್ನಾತಮಾತ್ರೋ ನರಸ್ತತ್ರ ಗೋಸಹಸ್ರಫಲಂ ಲಭೇತ್ ॥ ೪೯ ॥

ಸೋಮತೀರ್ಥಂ ತತೋ ಗಚ್ಛೇತ್ ಸ್ನಾನಂ ತತ್ರ ಸಮಾಚರೇತ್ ।
ಸ್ನಾತಮಾತ್ರೋ ನರಸ್ತತ್ರ ಸರ್ವಪಾಪೈಃ ಪ್ರಮುಚ್ಯತೇ ॥ ೫೦ ॥

---

೪೭. ಚೈತ್ರಮಾಸದ ಶುಕ್ಲಪಕ್ಷದಲ್ಲಿ ತ್ರಯೋದಶೀ ತಿಥಿಯು ಪ್ರಾಪ್ತವಾಗಿರುವ ಸಂದರ್ಭದಲ್ಲಿ ಆ ತಿಥಿಯು ಕಾಮದೇವನಿಗೆ ಪ್ರಿಯವಾದುದರಿಂದ ಅಂದು ಅಹಲ್ಯೆಯನ್ನು ಪೂಜಿಸಬೇಕು.

೪೮. ಈ ಅಹಲ್ಯಾಪೂಜೆಯ ವಿಧಿಯಿಂದ ಯಾವ ಅಪ್ರಸಿದ್ಧ ಸ್ಥಳದಲ್ಲಿ ಹುಟ್ಟಿದ ಪಾಮರ ಮನುಷ್ಯನು ಕೂಡ ಮತ್ತೊಬ್ಬ ಕಾಮದೇವನಂತೆ ಅತಿಶಯವಾಗಿ ಎಲ್ಲರ ಪ್ರೀತಿಯನ್ನು ಆಕರ್ಷಿಸುವವನೂ, ಸ್ತ್ರೀಯರಿಗೆ ಅತ್ಯಂತ ಪ್ರಿಯನೂ, ಮತ್ತು ಸೌಂದರ್ಯವುಳ್ಳವನೂ ಆಗುತ್ತಾನೆ.

೪೯. ನದಿಗಳಲ್ಲಿ ಉತ್ತಮವಾದ ನರ್ಮದಾನದಿಯನ್ನು ಆಶ್ರಯಿಸಿ ಇರುವ ಇಂದ್ರತೀರ್ಥವೆಂಬುದು ಅತಿಪ್ರಸಿದ್ಧವಾಗಿದೆ. ಆ ತೀರ್ಥದಲ್ಲಿ ಸ್ನಾನವೆಂಬ ಪುಣ್ಯಕರ್ಮವನ್ನು ಮಾತ್ರ ಮಾಡಿದ ಮಾನವನು ಆ ತೀರ್ಥಸ್ನಾನಮಾತ್ರದಿಂದ ಸಹಸ್ರಗೋದಾನದ ಫಲವನ್ನು ಅನುಭವಿಸುತ್ತಾನೆ.

೫೦. ಅನಂತರದಲ್ಲಿ ಸೋಮತೀರ್ಥವನ್ನು ಕುರಿತು ಹೋಗಬೇಕು. ಹಾಗು ಆ ತೀರ್ಥದಲ್ಲಿ ಸ್ನಾನವಿಧಿಯನ್ನು ನೆರವೇರಿಸಬೇಕು. ಮಾನವನು ಆ ತೀರ್ಥಸ್ನಾನಮಾತ್ರದಿಂದ ತನ್ನ ಸಕಲ ಪಾಪಬಂಧನದಿಂದ ಮುಕ್ತನಾಗುತ್ತಾನೆ.

ಸೋಮಗ್ರಹೇ ತು ರಾಜೇಂದ್ರ ಪಾಪಕ್ಷಯಕರಂ ಭವೇತ್ ।
ತ್ರೈಲೋಕ್ಯವಿಶ್ರುತಂ ರಾಜನ್ ಸೋಮತೀರ್ಥಂ ಮಹಾಫಲಮ್ ॥

ಯಸ್ತು ಚಾಂದ್ರಾಯಣಂ ಕುರ್ಯಾತ್ತತ್ರ ತೀರ್ಥೇ ಸಮಾಹಿತಃ ।
ಸರ್ವಪಾಪವಿಶುದ್ಧಾತ್ಮಾ ಸೋಮಲೋಕಂ ಸ ಗಚ್ಛತಿ ॥ ೫೨ ॥

ಅಗ್ನಿಪ್ರವೇಶಂ ಯಃ ಕುರ್ಯಾತ್ ಸೋಮತೀರ್ಥೇ ನರಾಧಿಪ ।
ಜಲೇ ಚಾನಶನಂ ವಾಪಿ ನಾಸೌ ಮರ್ತ್ಯೋ ಹಿ ಜಾಯತೇ ॥ ೫೩ ॥

ಸ್ತಂಭತೀರ್ಥಂ ತತೋ ಗಚ್ಛೇತ್ ಸ್ನಾನಂ ತತ್ರ ಸಮಾಚರೇತ್ ।
ಸ್ನಾತಮಾತ್ರೋ ನರಸ್ತತ್ರ ಸೋಮಲೋಕೇ ಮಹೀಯತೇ ॥ ೫೪ ॥

---

೫೧. ರಾಜಶ್ರೇಷ್ಠನೆ! ಸೋಮತೀರ್ಥವು ಚಂದ್ರಗ್ರಹಣ ಸಮಯದಲ್ಲಿ ಸಮಸ್ತ ಪಾಪಕ್ಷಯವನ್ನುಂಟುಮಾಡುವ ಮಹಿಮೆಯನ್ನು ಹೊಂದುವುದು. ರಾಜನೆ ಈ ಸೋಮತೀರ್ಥವು ಮಹಾಫಲದಾಯಕವೆಂದು ತ್ರಿಲೋಕಗಳಲ್ಲಿ ಪ್ರಖ್ಯಾತವಾಗಿದೆ

೫೨. ಯಾವ ಮಾನವನು ಸಮಾಧಾನಚಿತ್ತವುಳ್ಳವನಾಗಿ ಆ ಸೋಮತೀರ್ಥದಲ್ಲಿ ಚಾಂದ್ರಾಯಣಪ್ರಾಯಶ್ಚಿತ್ತವನ್ನು ಆಚರಿಸುವನೋ; ಅವನು ತನ್ನ ಸಕಲ ಪಾಪಗಳಿಂದ ಶುದ್ಧವಾದ ಆತ್ಮವುಳ್ಳವನಾಗಿ ಸೋಮಲೋಕಕ್ಕೆ ಸೇರುವನು.

೫೩. ಪ್ರಜಾಪ್ರಭುವೆ! ಯಾವ ಮಾನವನು ಆ ಸೋಮತೀರ್ಥದಲ್ಲಿ ಅಗ್ನಿಪ್ರವೇಶವನ್ನು ಮಾಡುವನೋ; ಅಥವಾ ಜಲದಲ್ಲಿ ಬೀಳುವನೋ; ಅಥವಾ ಮರಣಾಂತೋಪವಾಸ ಮಾಡುವನೋ; ಅಂತಹ ಮಾನವನು ಪುನರ್ಜನ್ಮಕ್ಕೆ ಭಾಗಿಯಾಗುವುದಿಲ್ಲ.

೫೪. ತದನಂತರದಲ್ಲಿ ಸ್ತಂಭತೀರ್ಥಕ್ಕೆ ಹೋಗಬೇಕು. ಮತ್ತು ಅಲ್ಲಿ ಸ್ನಾನವನ್ನು ಆಚರಿಸಬೇಕು. ಸ್ತಂಭತೀರ್ಥದಲ್ಲಿ ಸ್ನಾನವನ್ನು ಮಾಡಿರುವ ಪುಣ್ಯಾತ್ಮನು ಸೋಮಲೋಕದಲ್ಲಿ ಪೂಜ್ಯನಾಗುತ್ತಾನೆ.

ತತೋ ಗಚ್ಛೇತ ರಾಜೇಂದ್ರ ವಿಷ್ಣುತೀರ್ಥಮನುತ್ತಮಮ್ ।
ಯೋಧೀಪುರಮಿತಿ ಖ್ಯಾತಂ ವಿಷ್ಣುಸ್ಥಾನಮನುತ್ತಮಮ್ ॥ ೫೫ ॥

ಅಸುರಾ ಯೋಧಿತಾಸ್ತತ್ರ ವಾಸುದೇವೇನ ಕೋಟಿಶಃ ।
ತತ್ರ ತೀರ್ಥಂ ಸಮುತ್ಪನ್ನಂ ವಿಷ್ಣುಶ್ರೀಕೋ ಭವೇದಿಹ ॥ ೫೬ ॥

ಅಹೋರಾತ್ರೋಪವಾಸೇನ ಬ್ರಹ್ಮಹತ್ಯಾಂ ವ್ಯಪೋಹತಿ ॥ ೫೭ ॥

ನರ್ಮದಾದಕ್ಷಿಣೇ ಕೂಲೇ ತೀರ್ಥಂ ಪರಮಶೋಭನಮ್ ।
ಕಾಮತೀರ್ಥಮಿತಿ ಖ್ಯಾತಂ ಯತ್ರ ಕಾಮೋಽರ್ಚಯದ್ಧರಿಮ್ ॥ ೫೮ ॥

---

೫೫. ರಾಜೇಂದ್ರನೆ ! ಅಲ್ಲಿಂದ ಉತ್ತಮವಾಗಿರುವ ಒಂದು ವಿಷ್ಣುತೀರ್ಥಕ್ಕೆ ಹೋಗಬೇಕು. ಯೋಧೀಪುರವೆಂಬ ಖ್ಯಾತಿಯನ್ನು ಪಡೆದ ತೀರ್ಥವು ಸರ್ವೋತ್ತಮವಾದ ವಿಷ್ಣುತೀರ್ಥವಾಗಿರುವುದು.

೫೬. ಅಲ್ಲಿ ವಾಸುದೇವನಾದ ವಿಷ್ಣುಪರಮಾತ್ಮನಿಂದ ಅನೇಕಸಂಖ್ಯೆಯ ರಾಕ್ಷಸರು ಯುದ್ಧದಿಂದ ನಿಗ್ರಹಿಸಲ್ಪಟ್ಟಿರುವರು. ಆ ಸ್ಥಳದಲ್ಲಿ ವಿಷ್ಣುತೀರ್ಥವು ಉದಯಿಸಿರುವುದು. ಆ ತೀರ್ಥಾಟನೆಯಿಂದ ವಿಷ್ಣುತುಲ್ಯವಾದ ಸಂಪತ್ತಿಯುಳ್ಳವನು ಆಗುವನು.

೫೭. ಮತ್ತು ಆ ವಿಷ್ಣುತೀರ್ಥದಲ್ಲಿ ಒಂದು ಹಗಲು–ಒಂದು ರಾತ್ರಿ, ಹೀಗೆ ಅಹೋರಾತ್ರ ಮಾತ್ರ ಉಪವಾಸವ್ರತವನ್ನು ಆಚರಿಸುವುದರಿಂದ ಬ್ರಹ್ಮಹತ್ಯಾ ಮಹಾಪಾತಕವನ್ನು ಕೂಡ ಕಳೆದುಕೊಳ್ಳುತ್ತಾನೆ.

೫೮. ನರ್ಮದಾನದಿಯ ದಕ್ಷಿಣ ದಿಕ್ಕಿನಲ್ಲಿರುವ ತೀರದಲ್ಲಿ ಉತ್ತಮವೂ ಮಂಗಳದಾಯಕವೂ ಆದ ಒಂದು ತೀರ್ಥವಿರುವುದು. ಅದು ಕಾಮತೀರ್ಥವೆಂಬ ಖ್ಯಾತಿಯನ್ನು ಹೊಂದಿದೆ. ಅಲ್ಲಿ ಕಾಮದೇವನು ನಾರಾಯಣನನ್ನು ಅರ್ಚಿಸಿರುವನು.

ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಉಪವಾಸಪರಾಯಣಃ ।
ಕಾಮರೂಪಧರಃ ಸ್ವೇನ ರುದ್ರಲೋಕೇ ಮಹೀಯತೇ ॥ ೫೯ ॥

ತತೋ ಗಚ್ಛೇತ ರಾಜೇಂದ್ರ ಬ್ರಹ್ಮತೀರ್ಥಮನುತ್ತಮಮ್ ।
ಉಮಾಹಕಮಿತಿ ಖ್ಯಾತಂ ತತ್ರ ಸಂತರ್ಪಯೇತ್ ಪಿತೄನ್ ॥ ೬೦ ॥

ಪೌರ್ಣಮಾಸ್ಯಾಮಮಾವಾಸ್ಯಾಂ ಶ್ರಾದ್ಧಂ ಕುರ್ಯಾದ್ಯಥಾವಿಧಿ ॥ ೬೧ ॥

ಗಜರೂಪಾ ಶಿಲಾ ತತ್ರ ತೋಯಮಧ್ಯೇ ವ್ಯವಸ್ಥಿತಾ ।
ತಸ್ಮಿಂಸ್ತು ದಾಪಯೇತ್ ಪಿಂಡಾನ್ ವೈಶಾಖೇ ತು ಸಮಾಹಿತಃ ॥ ೬೨ ॥

---

೫೯. ಆ ಕಾಮತೀರ್ಥದಲ್ಲಿ ಮಾನವನು ಸ್ನಾನಮಾಡಿದವನೂ ಮತ್ತು ಉಪವಾಸವ್ರತದಲ್ಲಿ ತತ್ಪರತೆಯುಳ್ಳವನೂ ಆದರೆ ಅದರ ಮಹಿಮೆಯಿಂದ ಕಾಮ ದೇವನ ರೂಪದಿಂದ ರುದ್ರಲೋಕವನ್ನು ಹೊಂದಿ ಅಲ್ಲಿ ಪೂಜಿಸಲ್ಪಡುವನು.

೬೦. ರಾಜೇಂದ್ರನೆ! ಅಲ್ಲಿಂದ ಮುಂದೆ ಉಮಾಹಕವೆಂಬ ಸಂಜ್ಞೆಯಿಂದ ಪ್ರಖ್ಯಾತವಾದ ಮತ್ತು ಸರ್ವೋತ್ತಮವಾದ ಬ್ರಹ್ಮತೀರ್ಥವನ್ನು ಕುರಿತು ಹೋಗ ಬೇಕು. ಮತ್ತು ಆ ತೀರ್ಥದಲ್ಲಿ ಪಿತೃಗಳನ್ನು ತರ್ಪಣಾಂಜಲಿಯಿಂದ ತೃಪ್ತಿಗೊಳಿಸ ಬೇಕು.

೬೧. ಮತ್ತು ಪ್ರತಿಮಾಸದಲ್ಲಿ ಬರುವ ಪೌರ್ಣಮಾಸೀ ಮತ್ತು ಅಮಾವಾಸ್ಯಾ ತಿಥಿಗಳಲ್ಲಿ ಪಿತೃದೇವತೆಗಳನ್ನು ಉದ್ದೇಶಮಾಡಿ ಯಥಾವಿಧಿಯಾಗಿ ಶ್ರಾದ್ಧವನ್ನು ಆಚರಿಸಬೇಕು.

೬೨. ಆ ಬ್ರಹ್ಮತೀರ್ಥದಲ್ಲಿ ಜಲದ ಮಧ್ಯದಲ್ಲಿ ಆನೆಯ ಆಕಾರವುಳ್ಳ ಒಂದು ಶಿಲೆಯು ಸ್ಥಿರವಾಗಿರುವುದು. ಆ ಗಜಾಕಾರದಲ್ಲಿ ವೈಶಾಖ ಮಾಸದಲ್ಲಿ ಸಮಾಧಾನ ಚಿತ್ತವುಳ್ಳವನಾಗಿ ಪಿತೃಗಳಿಗೆ ಪಿಂಡಗಳನ್ನು ಅರ್ಪಿಸಬೇಕು.

ಸ್ನಾತ್ವಾ ಸಮಾಹಿತಮನಾ ದಂಭಮಾತ್ಸರ್ಯವರ್ಜಿತಃ ।
ತೃಪ್ಯಂತಿ ಪಿತರಸ್ತಸ್ಯ ಯಾವತ್ತಿಷ್ಠತಿ ಮೇದಿನೀ ॥ ೬೩ ॥

ವಿಶ್ವೇಶ್ವರಂ ತತೋ ಗಚ್ಛೇತ್ ಸ್ನಾನಂ ತತ್ರ ಸಮಾಚರೇತ್ ।
ಸ್ನಾತಮಾತ್ರೋ ನರಸ್ತತ್ರ ಗಾಣಪತ್ಯಪದಂ ಲಭೇತ್ ॥ ೬೪ ॥

ತತೋ ಗಚ್ಛೇತ ರಾಜೇಂದ್ರ ಲಿಂಗೋ ಯತ್ರ ಜನಾರ್ದನಃ ।
ತತ್ರ ಸ್ನಾತ್ವಾ ನರೋ ಭಕ್ತ್ಯಾ ವಿಷ್ಣುಲೋಕೇ ಮಹೀಯತೇ ॥ ೬೫ ॥

ಯತ್ರ ನಾರಾಯಣೋ ದೇವೋ ಮುನೀನಾಂ ಭಾವಿತಾತ್ಮನಾಮ್ ।
ಸ್ವಾತ್ಮಾನಂ ದರ್ಶಯಾಮಾಸ ಲಿಂಗಂ ತತ್ಪರಮಂ ಪದಮ್ ॥ ೬೬ ॥

---

೬೩. ಸ್ನಾನದಿಂದ ಪವಿತ್ರನೂ, ಶಾಂತಚಿತ್ತನೂ ಮತ್ತು ದಂಭ-ಮಾತ್ಸರ್ಯ ಮುಂತಾದ ದೋಷಗಳಿಂದ ವಿಮುಕ್ತನೂ ಆಗಿ ಮಾಡಿದ ಪಿಂಡದಾನದಿಂದ ಅವನ ಪಿತೃಗಳು ಭೂಮಿಯು ಇರುವಷ್ಟು ಶಾಶ್ವತಕಾಲದವರೆಗೆ ತೃಪ್ತಿಯಿಂದ ಇರುವರು.

೬೪. ತರುವಾಯ ವಿಶ್ವೇಶ್ವರತೀರ್ಥಕ್ಕೆ ಪ್ರಯಾಣ ಮಾಡಬೇಕು ಮತ್ತು ಅಲ್ಲಿ ಯಥಾವಿಧಿಯಾಗಿ ಸ್ನಾನವನ್ನು ಆಚರಿಸಬೇಕು. ಅಲ್ಲಿ ಸ್ನಾನವನ್ನು ಮಾತ್ರವೆ ಮಾಡಿರುವ ನರನು ಕೂಡ ಗಣಗಳ ಅಧಿಪತ್ಯಾಧಿಕಾರವನ್ನು ಹೊಂದುವನು.

೬೫. ರಾಜೇಂದ್ರನೆ! ಅಲ್ಲಿಂದ ಮುಂದೆ ಶ್ರೀಮನ್ನಾರಾಯಣನು ಲಿಂಗರೂಪದಿಂದ ಇರುವ ತೀರ್ಥಕ್ಕೆ ಪ್ರಯಾಣಮಾಡಬೇಕು. ಆ ತೀರ್ಥದಲ್ಲಿ ಭಕ್ತಿಯಿಂದ ಸ್ನಾನವನ್ನು ಆಚರಿಸಿದವನು ವಿಷ್ಣುಲೋಕದಲ್ಲಿ ಸೇವಿಸಲ್ಪಡುವನು.

೬೬. ಆ ತೀರ್ಥದಲ್ಲಿ ಶ್ರೀಮನ್ನಾರಾಯಣಸ್ವಾಮಿಯು ಉಪಾಸನೆಯಿಂದ ಪರಿಪಕ್ವವಾದ ಮಾನಸವುಳ್ಳ ಮುನಿಜನರಿಗೆ ಲಿಂಗರೂಪದಿಂದ ಸ್ವರೂಪವನ್ನು ತೋರ್ಪಡಿಸುವನು. ಆ ತೀರ್ಥವು ಸರ್ವೋತ್ತಮವೆನಿಸಿದೆ.

ಅಕೋಲ್ಲಂ ತು ತತೋ ಗಚ್ಛೇತ್ ಸರ್ವಪಾಪವಿನಾಶನಮ್ ॥ ೬೭ ॥

ಸ್ನಾನಂ ದಾನಂ ಚ ತತ್ರೈವ ಬ್ರಾಹ್ಮಣಾನಾಂ ಚ ಭೋಜನಮ್ ।
ಪಿಂಡಪ್ರದಾನಂ ಚ ಕೃತಂ ಪ್ರೇತ್ಯಾನಂತಫಲಪ್ರದಮ್ ॥ ೬೮ ॥

ತ್ರಿಯಂಬಕೇನ ತೋಯೇನ ಯಶ್ಚರುಂ ಶ್ರಪಯೇದ್ದ್ವಿಜಃ ॥ ೬೯ ॥

ಅಕೋಲ್ಲಮೂಲೇ ದದ್ಯಾಚ್ಚ ಪಿಂಡಾಂಶ್ಚೈವ ಯಥಾವಿಧಿ ।
ತಾರಿತಾಃ ಪಿತರಸ್ತೇನ ತೃಪ್ಯಂತ್ಯಾಚಂದ್ರತಾರಕಮ್ ॥ ೭೦ ॥

ತತೋ ಗಚ್ಛೇತ ರಾಜೇಂದ್ರ ತಾಪಸೇಶ್ವರಮುತ್ತಮಮ್ ।
ತತ್ರ ಸ್ನಾತ್ವಾ ತು ರಾಜೇಂದ್ರ ಪ್ರಾಪ್ನುಯಾತ್ತಪಸಃ ಫಲಮ್ ॥ ೭೧ ॥

---

೬೭. ಲಿಂಗತೀರ್ಥ ಯಾತ್ರಾನಂತರದಲ್ಲಿ ಅಕೋಲ್ಲವೆಂಬ ನಾಮಾಂಕನವುಳ್ಳ ತೀರ್ಥಕ್ಕೆ ಪ್ರಯಾಣಮಾಡಬೇಕು. ಆ ತೀರ್ಥವು ಯಾತ್ರಿಕರ ಸಮಸ್ತ ಪಾಪಗಳನ್ನು ಧ್ವಂಸಮಾಡುತ್ತದೆ.

೬೮. ಆ ಅಕೋಲ್ಲ ತೀರ್ಥದಲ್ಲಿ ಆಚರಿಸಿದ ಸ್ನಾನ ದಾನ ಬ್ರಾಹ್ಮಣಭೋಜನ ಮತ್ತು ಪಿಂಡಪ್ರದಾನವೆಂಬ ಸುಕೃತ ಕರ್ಮಗಳೆಲ್ಲವೂ ಕರ್ತೃವು ಮರಣಹೊಂದಿದ ತರುವಾಯ ಅವನಿಗೆ ಅನಂತವಾದ ಫಲವನ್ನು ಕೊಡುವುವು.

೬೯. ತ್ರ್ಯಂಬಕವೆಂಬ ಪದದಿಂದ ಪ್ರಾರಂಭವಾಗುವ, ರುದ್ರದೇವತೆಯನ್ನು ಪ್ರಶಂಸೆಮಾಡುವ ಮಂತ್ರವನ್ನು ಪಠಿಸುತ್ತ ದ್ವಿಜನು ಜಲವನ್ನು ಇಟ್ಟು ಚರುವನ್ನು ಮಾಡಬೇಕು.

೭೦. ಅಕೋಲ್ಲ ತೀರ್ಥದ ಮೂಲದಲ್ಲಿ ವಿಧಿಯನ್ನು ಅನುಸರಿಸಿ ಪಿಂಡಗಳನ್ನು ನಿರ್ವಪನಮಾಡಬೇಕು. ಆ ಪಿಂಡದಾನಮಾಡುವುದರಿಂದ ಚಂದ್ರ ತಾರಕೆಗಳು ರಾಜಿಸುತ್ತಿರುವಷ್ಟು ಶಾಶ್ವತಕಾಲದವರೆಗೆ ಆ ಮಾನವನ ಪಿತೃಗಳು ತೃಪ್ತಿಹೊಂದುತ್ತಿರುವರು.

೭೧. ರಾಜಶ್ರೇಷ್ಠನೆ! ಅನಂತರದಲ್ಲಿ ಶ್ಲಾಘ್ಯವಾದ ತಾಪಸೇಶ್ವರವೆಂಬ ತೀರ್ಥಕ್ಕೆ ಹೋಗಬೇಕು. ಮಹಾರಾಜನೆ! ತಾಪಸೇಶ್ವರದಲ್ಲಿ ಸ್ನಾನಮಾಡುವುದರಿಂದ ಮಹಾತಪಸ್ಸನ್ನು ಮಾಡಿದ ಫಲವನ್ನು ಹೊಂದುತ್ತಾನೆ.

ಶುಕ್ಲತೀರ್ಥಂ ತತೋ ಗಚ್ಛೇತ್ ಸರ್ವಪಾಪವಿನಾಶನಮ್ ।
ನಾಸ್ತಿ ತೇನ ಸಮಂ ತೀರ್ಥಂ ನರ್ಮದಾಯಾಂ ಯುಧಿಷ್ಠಿರ ॥ ೭೨ ॥

ದರ್ಶನಾತ್ ಸ್ಪರ್ಶನಾತ್ತಸ್ಯ ಸ್ನಾನಾದ್ದಾನಾತ್ತಪೋಜಪಾತ್ ।
ಹೋಮಾಚ್ಚೈವೋಪವಾಸಾಚ್ಚ ಶುಕ್ಲತೀರ್ಥೇ ಮಹತ್ಫಲಮ್ ॥ ೭೩ ॥

ಯೋಜನಂ ತತ್ ಸ್ಮೃತಂ ತೀರ್ಥಂ ದೇವಗಂಧರ್ವಸೇವಿತಮ್ ।
ಶುಕ್ಲತೀರ್ಥಮಿತಿ ಖ್ಯಾತಂ ಸರ್ವಪಾಪವಿನಾಶನಮ್ ॥ ೭೪ ॥

ಪಾದಪಾಗ್ರೇಣ ದೃಷ್ಟೇನ ಬ್ರಹ್ಮಹತ್ಯಾಂ ವ್ಯಪೋಹತಿ ।
ದೇವ್ಯಾ ಸಹ ಸದಾ ಭರ್ಗಸ್ತತ್ರ ತಿಷ್ಠತಿ ಶಂಕರಃ ॥ ೭೫ ॥

---

೭೨. ಯುಧಿಷ್ಠಿರನೆ ! ಅಲ್ಲಿಂದ ಮುಂದೆ ಸಮಸ್ತ ಪಾಪಗಳನ್ನು ನಾಶಮಾಡುವ ಶುಕ್ಲತೀರ್ಥವನ್ನು ಕುರಿತು ಹೋಗಬೇಕು. ನರ್ಮದಾನದಿಯಲ್ಲಿ ಶುಕ್ಲತೀರ್ಥಕ್ಕೆ ಸಮಾನವಾಗಿ ಪಾವನತೀರ್ಥವು ಬೇರೊಂದು ಇರುವುದಿಲ್ಲ.

೭೩. ಶುಕ್ಲತೀರ್ಥದಲ್ಲಿ ಆ ತೀರ್ಥದ ದರ್ಶನ ಅಥವಾ ಸ್ಪರ್ಶನ ಸ್ನಾನ ದಾನ ತಪ, ಜಪ, ಹೋಮ, ಮತ್ತು ಉಪವಾಸವೆಂಬ ಸಕಲ ಪುಣ್ಯವ್ರತಗಳು ಅತಿಶಯವಾದ ಫಲವನ್ನು ಕೊಡುವುವು.

೭೪. ಆ ತೀರ್ಥವು ಒಂದುಯೋಜನ ಪರಿಮಾಣದಷ್ಟು ವಿಸ್ತಾರವುಳ್ಳದ್ದೂ, ದೇವಗಂಧರ್ವರಿಂದ ಸೇವಿಸಲ್ಪಟ್ಟಿರುವುದೂ, ಶುಕ್ಲತೀರ್ಥವೆಂದು ಪ್ರಸಿದ್ಧಿಹೊಂದಿರುವುದೂ ಮತ್ತು ಸಕಲ ಪಾಪಗಳನ್ನು ನಿವಾರಣಮಾಡುವುದೂ ಆಗಿದೆ-ಎಂದು ಸ್ಮರಿಸಲ್ಪಟ್ಟಿದೆ.

೭೫. ಆ ತೀರ್ಥದಲ್ಲಿರುವ ಒಂದು ವೃಕ್ಷಾಗ್ರವನ್ನು ನೋಡಿದ ಮಾತ್ರದಿಂದ ಬ್ರಹ್ಮಹತ್ಯೆಯೂ ದೂರವಾಗುವುದು. ಮತ್ತು ಆ ತೀರ್ಥದಲ್ಲಿ ದೇವಿಯೊಡನೆ ಪಾಪಭಂಜಕನಾದ ಶಂಕರನು ಯಾವಾಗಲೂ ವಾಸಮಾಡುತ್ತಿರುವನು.

ಕೃಷ್ಣಪಕ್ಷೇ ಚತುರ್ದಶ್ಯಾಂ ವೈಶಾಖೇ ಮಾಸಿ ಸುವ್ರತ ।
ಲೋಕಾತ್ ಸ್ವಕಾದ್ವಿನಿಷ್ಕ್ರಮ್ಯ ತತ್ರ ಸನ್ನಿಹಿತೋ ಹರಃ ॥ ೭೬ ॥

ದೇವದಾನವಗಂಧರ್ವಾಃ ಸಿದ್ಧವಿದ್ಯಾಧರಾಸ್ತಥಾ ।
ಗಣಾಶ್ಚಾಪ್ಸರಸೋ ನಾಗಾಸ್ತತ್ರ ತಿಷ್ಠಂತಿ ಪುಂಗವಾಃ ॥ ೭೭ ॥

ರಂಜಿತಂ ಹಿ ಯಥಾ ವಸ್ತ್ರಂ ಶುಕ್ಲಂ ಭವತಿ ವಾರಿಣಾ ।
ಆಜನ್ಮಜನಿತಂ ಪಾಪಂ ಶುಕ್ಲತೀರ್ಥೇ ವ್ಯಪೋಹತಿ ॥ ೭೮ ॥

ಸ್ನಾನಂ ದಾನಂ ತಪಃ ಶ್ರಾದ್ಧಮನಂತಂ ತತ್ರ ದೃಶ್ಯತೇ ।
ಶುಕ್ಲತೀರ್ಥಾತ್ಪರಂ ತೀರ್ಥಂ ನ ಭವಿಷ್ಯತಿ ಪಾವನಮ್ ॥ ೭೯ ॥

---

೭೬. ವ್ರತಾನುಷ್ಠಾನಪರನಾದ ರಾಜನೆ ! ವೈಶಾಖಮಾಸದ ಕೃಷ್ಣಪಕ್ಷದಲ್ಲಿ ಚತುರ್ದಶೀ ತಿಥಿಯಲ್ಲಿ ಮಹೇಶ್ವರನು ತನ್ನ ಲೋಕದಿಂದ ಹೊರಟು ಆ ಶುಕ್ಲ ತೀರ್ಥದಲ್ಲಿ ಸನ್ನಿಹಿತನಾಗಿ ವಾಸಮಾಡುವನು.

೭೭. ಆ ಶುಕ್ಲತೀರ್ಥದಲ್ಲಿ ದೇವತೆಗಳು, ದಾನವರು, ಗಂಧರ್ವರು, ಸಿದ್ಧರು ವಿದ್ಯಾಧರರು, ಪ್ರಮಥಗಣಗಳು, ಅಪ್ಸರಾಂಗನೆಯರು, ಮತ್ತು ನಾಗಗಳು ಮುಂತಾಗಿ ಅನೇಕ ಭಕ್ತಾಗ್ರಣಿಗಳು ಅಲ್ಲಿ ವಾಸಮಾಡುತ್ತಲಿರುವರು.

೭೮. ನೀರಿನಿಂದ ಸ್ವಚ್ಛಗೊಳಿಸಿ ರಂಜಿಸಿದ ವಸ್ತ್ರವು ಹೇಗೆ ನಿಷ್ಕಲ್ಮಷವಾಗಿ ಶುಕ್ಲವಾಗುವುದೊ ; ಹಾಗೆ ಜನ್ಮ ಮೊದಲುಗೊಂಡು ಮಾಡಿದ ಸಮಸ್ತ ಪಾಪಕಲ್ಮಷವು ನಾಶವಾಗುವುದು.

೭೯. ಆ ಶುಕ್ಲತೀರ್ಥದಲ್ಲಿ ಸ್ನಾನ-ದಾನ-ತಪಶ್ಚರ್ಯೆ ಮತ್ತು ಶ್ರಾದ್ಧ ಮುಂತಾದ ಸಮಸ್ತ ಸತ್ಕರ್ಮಗಳು ಅನಂತ ಫಲವನ್ನು ಕೊಡುವುದಾಗಿ ಕಾಣುತ್ತವೆ. ಶುಕ್ಲತೀರ್ಥಕ್ಕಿಂತಲೂ ಅಧಿಕವಾಗಿ ಪಾವನವಾದ ಮತ್ತೊಂದು ತೀರ್ಥವು ಇರುವುದಿಲ್ಲ.

ಪೂರ್ವೇ ವಯಸಿ ಕರ್ಮಾಣಿ ಕೃತ್ವಾ ಪಾಪಾನಿ ಮಾನವಃ ।
ಅಹೋರಾತ್ರೋಪವಾಸೇನ ಶುಕ್ಲತೀರ್ಥೇ ವ್ಯಪೋಹತಿ ॥ ೮೦ ॥

ಕಾರ್ತಿಕಸ್ಯ ತು ಮಾಸಸ್ಯ ಕೃಷ್ಣಪಕ್ಷೇ ಚತುರ್ದಶೀ ।
ಘೃತೇನ ಸ್ನಾಪಯೇದ್ದೇವಮುಪೋಷ್ಯ ಪರಮೇಶ್ವರಮ್ ॥ ೮೧ ॥

ಏಕವಿಂಶತ್ಕುಲೋಪೇತೋ ನ ಚ್ಯವೇದೀಶ್ವರಾಲಯಾತ್ ॥ ೮೨ ॥

ತಪಸಾ ಬ್ರಹ್ಮಚರ್ಯೇಣ ಯಜ್ಞೈರ್ದಾನೇನ ವಾ ಪುನಃ ।
ನ ತಾಂ ಗತಿಮವಾಪ್ನೋತಿ ಶುಕ್ಲತೀರ್ಥೇ ತು ಯಾಂ ಲಭೇತ್ ॥ ೮೩ ॥

---

೮೦. ಮಾನವನು ತನ್ನ ಪೂರ್ವ ವಯಸ್ಸಿನಲ್ಲಿ ಲೆಖ್ಖವಿಲ್ಲದಷ್ಟು ಪಾಪಕರ್ಮಗಳನ್ನು ಮಾಡಿದ್ದರೂ ಈ ತೀರ್ಥದ ಸನ್ನಿಧಿಯಲ್ಲಿ ಒಂದು ಅಹೋರಾತ್ರ ಉಪವಾಸ ಮಾಡುವುದರಿಂದ ಸಕಲ ಪಾಪಗಳನ್ನು ಕಳೆದುಕೊಳ್ಳುವನು.

೮೧. ಕಾರ್ತಿಕಮಾಸದಲ್ಲಿ ಕೃಷ್ಣಪಕ್ಷದ ಚತುರ್ದಶೀ ತಿಥಿಯಲ್ಲಿ ಉಪವಾಸವನ್ನು ಮಾಡಿ ಪರಮೇಶ್ವರದೇವನನ್ನು ಘೃತಾಭಿಷೇಕ ಪೂರ್ವಕವಾಗಿ ಸ್ನಾನ ಮಾಡಿಸಬೇಕು.

೮೨. ಹಾಗೆ ಈಶ್ವರನಿಗೆ ಮಾಡಿರುವ ಘೃತಾಭಿಷೇಕದ ಪುಣ್ಯಪ್ರಭಾವದಿಂದ ತನ್ನ ವಂಶದ ಇಪ್ಪತ್ತೊಂದು ಪುರುಷರೊಡನೆ ಈಶ್ವರಲೋಕಕ್ಕೆ ಹೋಗಿ ಅಲ್ಲಿಂದ ಚಲಿಸುವುದಿಲ್ಲ.

೮೩. ಶುಕ್ಲತೀರ್ಥದ ಯಾತ್ರೆಯಿಂದ ಮಾನವನು ಯಾವ ಸದ್ಗತಿಯನ್ನು ಹೊಂದುತ್ತಾನೆಯೊ; ಅಂತಹ ಉತ್ತಮಗತಿಯನ್ನು ತಪಸ್ಸು, ಬ್ರಹ್ಮಚರ್ಯ, ಯಜ್ಞ ಅಥವಾ ದಾನ ಮುಂತಾದ ಯಾವ ಸಾಧನಗಳಿಂದಲೂ ಹೊಂದಲಾರನು.

ಶುಕ್ಲತೀರ್ಥಂ ಮಹಾತೀರ್ಥಮೃಷಿಸಿದ್ಧ ನಿಷೇವಿತಮ್ ।
ತತ್ರ ಸ್ನಾತ್ವಾ ನರೋ ರಾಜನ್ ಪುನರ್ಜನ್ಮ ನ ವಿಂದತಿ ॥ ೮೪ ॥

ಅಯನೇ ವಾ ಚತುರ್ದಶ್ಯಾಂ ಸಂಕ್ರಾಂತೌ ವಿಷುವೇ ತಥಾ ।
ಸ್ನಾತ್ವಾ ತು ಸೋಪವಾಸಃ ಸನ್ ವಿಜಿತಾತ್ಮಾ ಸಮಾಹಿತಃ ॥ ೮೫ ॥

ದಾನಂ ದದ್ಯಾದ್ಯಥಾಶಕ್ತಿ ಪ್ರೀಯೇತಾಂ ಹರಿಶಂಕರೌ ।
ಏತತ್ತೀರ್ಥಪ್ರಭಾವೇಣ ಸರ್ವಂ ಭವತಿ ಚಾಕ್ಷಯಮ್ ॥ ೮೬ ॥

ಅನಾಥಂ ದುರ್ಗತಂ ವಿಪ್ರಂ ನಾಥವಂತಮಥಾಪಿ ವಾ ।
ಉದ್ವಾಹಯತಿ ಯಸ್ತೀರ್ಥೇ ತಸ್ಯ ಪುಣ್ಯಫಲಂ ಶೃಣು ॥ ೮೭ ॥

---

೮೪. ಮಹಾರಾಜನೆ! ಅನೇಕ ಮುನಿಗಳಿಂದಲೂ ಸಿದ್ಧರಿಂದಲೂ ಸೇವಿಸಲ್ಪಟ್ಟಿರುವ ಶುಕ್ಲತೀರ್ಥವು ಮಹಾತೀರ್ಥವಾಗಿರುವುದು. ಮಾನವನು ಆ ತೀರ್ಥದಲ್ಲಿ ಸ್ನಾನಮಾಡಿ ಪುನರ್ಜನ್ಮವನ್ನು ಹೊಂದುವುದಿಲ್ಲ.

೮೫. ಅಯನ ಪುಣ್ಯಕಾಲ, ಚತುರ್ದಶೀ, ಸಂಕ್ರಾಂತಿ ಅಥವಾ ವಿಷುವ ಪುಣ್ಯಕಾಲಗಳಲ್ಲಿ ಮಾನವನು ಆ ತೀರ್ಥದಲ್ಲಿ ಸ್ನಾನಮಾಡಿ, ಉಪವಾಸವ್ರತ, ಇಂದ್ರಿಯ-ಜಯ, ಮತ್ತು ಚಿತ್ತಶಾಂತಿಗಳಿಂದ ಕೂಡಿದವನಾಗಿರಬೇಕು.

೮೬. ಮತ್ತು ಯಥಾಶಕ್ತಿಯಾಗಿ ದ್ವಿಜರಿಗೆ ದಾನವನ್ನು ಮಾಡಬೇಕು. ಅದರಿಂದ ಹರಿ-ಹರರು ಪ್ರೀತಿಸುವರು. ಹಾಗು ಈ ತೀರ್ಥಸನ್ನಿಧಿಯ ಪ್ರಭಾವದಿಂದ ಸಕಲ ಪುಣ್ಯಕರ್ಮಗಳ ಫಲವು ಅಕ್ಷಯವಾಗುವುದು.

೮೭. ಯಾವ ಮಾನವನು ಶುಕ್ಲತೀರ್ಥದಲ್ಲಿ ದರಿದ್ರನಾದ ಅನಾಥನೊ; ಅಥವಾ ನಾಥನುಳ್ಳವನೊ; ಯಾರಿಗಾದರೂ ಕನ್ಯೆಯನ್ನು ದಾನಮಾಡಿ ವಿವಾಹವನ್ನು ಮಾಡಿಸುವುದಾದರೆ ಆ ಸತ್ಕರ್ಮದ ಫಲವನ್ನು ಹೇಳುವೆನು; ಕೇಳು.

ಯಾವತ್ತದ್ರೋಮಸಂಖ್ಯಾ ತು ತತ್ಪ್ರಸೂತಿಕುಲೇಷು ಚ ।
ತಾವದ್ವರ್ಷಸಹಸ್ರಾಣಿ ರುದ್ರಲೋಕೇ ಮಹೀಯತೇ ॥ ೮೮ ॥

ತತೋ ಗಚ್ಛೇತ ರಾಜೇಂದ್ರ ಯಮತೀರ್ಥಮನುತ್ತಮಮ್ ॥ ೮೯ ॥

ಕೃಷ್ಣಪಕ್ಷೇ ಚತುರ್ದಶ್ಯಾಂ ಮಾಘಮಾಸೇ ಯುಧಿಷ್ಠಿರ ।
ಸ್ನಾನಂ ಕೃತ್ವಾ ನಕ್ತಭೋಜೀ ನ ಪಶ್ಯೇದ್ಯೋನಿಸಂಕಟಮ್ ॥ ೯೦ ॥

ತತೋ ಗಚ್ಛೇತ ರಾಜೇಂದ್ರ ಏರಂಡೀತೀರ್ಥಮುತ್ತಮಮ್ ॥ ೯೧ ॥

ಸಂಗಮೇ ತು ನರಃ ಸ್ನಾತ್ವಾ ಉಪವಾಸಪರಾಯಣಃ ।
ಬ್ರಾಹ್ಮಣಂ ಭೋಜಯೇದೇಕಂ ಕೋಟಿರ್ಭವತಿ ಭೋಜಿತಾಃ ॥ ೯೨ ॥

---

೮೮. ದಾನಮಾಡಿರುವ ಕನ್ಯೆಯ ಮತ್ತು ಕನ್ಯೆಯಿಂದ ಬೆಳೆಯುವ ವಂಶಾವಳಿಯ ಸಂತತಿಯಲ್ಲಿ ಎಷ್ಟು ಸಂಖ್ಯೆಯ ರೋಮಗಳು ಇರುತ್ತವೆಯೊ; ಅಷ್ಟು ಸಂಖ್ಯೆಯ ಸಹಸ್ರ ವರ್ಷಗಳವರೆಗೆ ರುದ್ರಲೋಕದಲ್ಲಿ ಮಾನ್ಯನಾಗಿ ವಾಸಮಾಡುತ್ತಾನೆ.

೮೯. ರಾಜಾಧಿರಾಜನೆ ! ಅಲ್ಲಿಂದ ಮುಂದೆ ತನಗಿಂತಲೂ ಉತ್ತಮತೀರ್ಥವು ಬೇರೊಂದು ಇಲ್ಲದಿರುವ ಯಮತೀರ್ಥಕ್ಕೆ ಹೋಗಿ ಯಾತ್ರೆಯನ್ನು ನೆರವೇರಿಸಬೇಕು.

೯೦. ಯುಧಿಷ್ಠಿರನೆ ! ಯಮತೀರ್ಥದಲ್ಲಿ ಮಾಘಮಾಸದ ಕೃಷ್ಣಪಕ್ಷದಲ್ಲಿ ಚತುರ್ದಶೀ ತಿಥಿಯ ದಿನದಲ್ಲಿ ಸ್ನಾನಮಾಡಿ ನಕ್ತಭೋಜನವನ್ನು ಮಾಡಿದ ಮನುಷ್ಯನು ಪುನರ್ಜನ್ಮದಿಂದ ಒದಗುವ ಯೋನಿನಿರ್ಗಮದುಃಖವನ್ನು ಹೊಂದುವುದಿಲ್ಲ.

೯೧ ಮಹಾರಾಜನೆ ! ಯಮತೀರ್ಥದಲ್ಲಿ ಯಾತ್ರೆಯನ್ನು ಸಮಾಪ್ತಿಗೊಳಿಸಿ ಮುಂದೆ ಸರ್ವೋತ್ತಮವಾದ ಏರಂಡೀ ತೀರ್ಥಕ್ಕೆ ಹೋಗಬೇಕು.

೯೨. ಸಂಗಮಸ್ಥಳವಾದ ಏರಂಡೀ ತೀರ್ಥದಲ್ಲಿ ಮಾನವನು ಸ್ನಾನಮಾಡಿ ಉಪವಾಸವ್ರತಪರಾಯಣನಾಗಿ ಒಬ್ಬ ಬ್ರಾಹ್ಮಣನನ್ನು ಮಾತ್ರ ಭೋಜನಮಾಡಿಸಿದರೆ ಒಂದು ಕೋಟಿ ಬ್ರಾಹ್ಮಣರನ್ನು ಭೋಜನಮಾಡಿಸಿದ ಪುಣ್ಯವು ಸಂಭವಿಸುತ್ತದೆ.

ಏರಂಡೀಸಂಗಮೇ ಸ್ನಾತ್ವಾ ಭಕ್ತಿಭಾವಾತ್ತು ರಂಜಿತಃ ।
ಮೃತ್ತಿಕಾಂ ಶಿರಸಿ ಸ್ಥಾಪ್ಯ ಅವಗಾಹ್ಯ ಚ ತಜ್ಜಲಮ್ ॥ ೯೩ ॥

ನರ್ಮದೋದಕಸಂಮಿಶ್ರಂ ಮುಚ್ಯತೇ ಸರ್ವಕಿಲ್ಬಿಷೈಃ ॥ ೯೪ ॥

ತತೋ ಗಚ್ಛೇತ ರಾಜೇಂದ್ರ ತೀರ್ಥಂ ಕಲ್ಲೋಲಕೇಶ್ವರಮ್ ।
ಗಂಗಾವತರತೇ ತತ್ರ ದಿನೇ ಪುಣ್ಯೇ ನ ಸಂಶಯಃ ॥ ೯೫ ॥

ತತ್ರ ಸ್ನಾತ್ವಾ ಚ ಪೀತ್ವಾ ಚ ದತ್ವಾ ಚೈವ ಯಥಾವಿಧಿ ।
ಸರ್ವಪಾಪವಿನಿರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ॥ ೯೬ ॥

---

೯೩. ಪರಮ ಭಕ್ತಿ ಭಾವದಿಂದ ಕೂಡಿದವನಾಗಿ ಸಂಗಮ ರೂಪವಾದ ಏರಂಡೀ ತೀರ್ಥದಲ್ಲಿ ಸ್ನಾನಮಾಡಬೇಕು. ಅದಿಯಲ್ಲಿ ಮೃತ್ತಿಕೆಯನ್ನು ತನ್ನ ಶಿರಸ್ಸಿನಲ್ಲಿ ಧರಿಸಿ ತೀರ್ಥದಲ್ಲಿ ಅವಗಾಹನ ಸ್ನಾನವನ್ನು ಮಾಡಬೇಕು.

೯೪. ಆ ತೀರ್ಥವು ಸಂಗಮಸ್ಥಳರೂಪವಾದುದರಿಂದ ನರ್ಮದಾನದಿಯ ಜಲದಿಂದ ಮಿಶ್ರವಾದ ಏರಂಡೀ ತೀರ್ಥದಲ್ಲಿ ಸ್ನಾನಮಾಡಿದರೆ ಸಮಸ್ತ ಪಾಪಗಳಿಂದ ನಿರ್ಮುಕ್ತನಾಗುತ್ತಾನೆ.

೯೫. ರಾಜಶ್ರೇಷ್ಠನೆ! ಅಲ್ಲಿಂದ ಮುಂದೆ ಕಲ್ಲೋಲಕೇಶ್ವರ ಎಂಬ ನಾಮಾಂಕಿತವಾದ ಉತ್ತಮತೀರ್ಥಕ್ಕೆ ಹೋಗಬೇಕು. ಪುಣ್ಯ ತಿಥಿಗಳಲ್ಲಿ ಕಲ್ಲೋಲಕೇಶ್ವರ ತೀರ್ಥದಲ್ಲಿ ಗಂಗಾದೇವಿಯು ಅವತರಿಸುವಳು. ಇದರಲ್ಲಿ ಸಂಶಯವಿಲ್ಲ.

೯೬. ಕಲ್ಲೋಲಕೇಶ್ವರ ತೀರ್ಥದಲ್ಲಿ ಯಥಾವಿಧಿಯಾಗಿ ಸ್ನಾನ-ಪಾನ-ದಾನಾದಿ ಕರ್ಮಗಳನ್ನು ನೆರವೇರಿಸಿದ ಮನುಜನು ತನ್ನ ಸಮಸ್ತ ಪಾಪಗಳಿಂದ ಬಿಡಲ್ಪಟ್ಟವನಾಗಿ ಬ್ರಹ್ಮಲೋಕದಲ್ಲಿ ಪೂಜಿಸಲ್ಪಡುತ್ತಾನೆ.

ನಂದಿತೀರ್ಥಂ ತತೋ ಗಚ್ಛೇತ್ ತತ್ರ ಸ್ನಾನಂ ಸಮಾಚರೇತ್ ।
ಪ್ರೀಯತೇ ತತ್ರ ನಂದೀಶಃ ಸೋಮಲೋಕೇ ಮಹೀಯತೇ ॥ ೯೭ ॥

ತತೋ ಗಚ್ಛೇತ ರಾಜೇಂದ್ರ ತೀರ್ಥಂ ತ ನರಕಂ ಶುಭಮ್ ।
ತತ್ರ ಸ್ನಾತ್ವಾ ನರೋ ರಾಜನ್ನರಕಂ ನೈವ ಪಶ್ಯತಿ ॥ ೯೮ ॥

ತಸ್ಮಿಂಸ್ತೀರ್ಥೇ ತು ರಾಜೇಂದ್ರ ಸ್ನಾನ್ಯಸ್ಥೀನಿ ವಿನಿಕ್ಷಿಪೇತ್ ।
ರೂಪವಾನ್ ಜಾಯತೇ ಲೋಕೇ ಧನಭೋಗಸಮನ್ವಿತಃ ॥ ೯೯ ॥

ತತೋ ಗಚ್ಛೇತ ರಾಜೇಂದ್ರ ಕಪಿಲಾತೀರ್ಥಮುತ್ತಮಮ್ ।
ತತ್ರ ಸ್ನಾತ್ವಾ ನರೋ ರಾಜನ್ ಗೋಸಹಸ್ರಫಲಂ ಲಭೇತ್ ॥ ೧೦೦ ॥

---

೯೭. ತರುವಾಯ ನಂದಿತೀರ್ಥಕ್ಕೆ ಹೋಗಿ ಆ ನಂದಿತೀರ್ಥದಲ್ಲಿ ವಿಧಿಪೂರ್ವಕ ನಾಗಿ ಸ್ನಾನವನ್ನು ಆಚರಿಸಬೇಕು. ಅಲ್ಲಿ ನಂದೀಶ್ವರನು ಪ್ರಸನ್ನನಾಗುವನು. ನಂದೀಶ್ವರನ ಅನುಗ್ರಹದಿಂದ ಸೋಮಲೋಕದಲ್ಲಿ ಸತ್ಕರಿಸಲ್ಪಡುತ್ತಾನೆ.

೯೮. ಮಹಾರಾಜನೆ ! ತರುವಾಯ ಅನರಕವೆಂಬ ಅನ್ವರ್ಥಸಂಜ್ಞೆಯಿಂದ ಕೂಡಿರುದೂ ಮಂಗಳಪ್ರದವೂ ಆದ ತೀರ್ಥಕ್ಕೆ ಹೋಗಬೇಕು. ಯುಧಿಷ್ಠಿರನೆ ! ಅನರಕ ತೀರ್ಥದಲ್ಲಿ ಸ್ನಾನಮಾಡಿದವನು ನರಕಲೋಕವನ್ನು ನೋಡುವುದಿಲ್ಲ.

೯೯. ರಾಜಾಧಿರಾಜನೆ ! ಅನರಕತೀರ್ಥದಲ್ಲಿ ಮಾನವನು ತನ್ನ ಅಸ್ಥಿಗಳನ್ನು ವಿಸರ್ಜಿಸಬೇಕು. ಅದರಿಂದ ಆ ಪುರುಷನು ಮತ್ತೆ ರೂಪವಂತನೂ, ಧನವಂತನೂ, ಮತ್ತು ಭೋಗಿಯೂ ಆಗಿ ಜನಿಸುವನು.

೧೦೦. ಮಹಾರಾಜನೆ ! ತರುವಾಯ ಉತ್ತಮವಾದ ಕಪಿಲಾತೀರ್ಥಕ್ಕೆ ಹೋಗಬೇಕು. ಯುಧಿಷ್ಠಿರನೆ ! ಮಾನವನು ಆ ಕಪಿಲಾ ತೀರ್ಥದಲ್ಲಿ ವಿಧಿವತ್ತಾಗಿ ಸ್ನಾನಮಾಡುವುದರಿಂದ ಸಹಸ್ರ ಗೋದಾನದ ಫಲವನ್ನು ಅನುಭವಿಸುತ್ತಾನೆ.

ಜ್ಯೇಷ್ಠಮಾಸೇ ತು ಸಂಪ್ರಾಪ್ತೇ ಚತುರ್ದಶ್ಯಾಂ ವಿಶೇಷತಃ ।
ತತ್ರೋಪೋಷ್ಯ ನರೋ ಭಕ್ತ್ಯಾ ದತ್ವಾ ದೀಪಂ ಘೃತೇನ ತು॥ ೧೦೧ ॥

ಘೃತೇನ ಸ್ನಾಪಯೇದ್ರುಗಂ ತತೋ ವೈ ಶ್ರೀಫಲಂ ಲಭೇತ್ ।
ಘಂಟಾಭರಣಸಂಯುಕ್ತಾಂ ಕಪಿಲಾಂ ವೈ ಪ್ರದಾಪಯೇತ್ ॥ ೧೦೨ ॥

ಸರ್ವಾಬರಣಸಂಯುಕ್ತಃ ಸರ್ವದೇವನಮಸ್ಕೃತಃ ।
ಶಿವತುಲ್ಯಬಲೋ ಭೂತ್ವಾ ಶಿವವತ್ ಕ್ರೀಡತೇ ಸದಾ ॥ ೧೦೩ ॥

ಅಂಗಾರಕದಿನೇ ಪ್ರಾಪ್ತೇ ಚತುರ್ಥ್ಯಾಂ ತು ವಿಶೇಷತಃ ।
ಸ್ನಾಪಯಿತ್ವಾ ಶಿವಂ ದದ್ಯಾದ್ಬ್ರಾಹ್ಮಣೇಭ್ಯಸ್ತು ಭೋಜನಮ್ ॥೧೦೪॥

---

೧೦೧ ಜ್ಯೇಷ್ಠಮಾಸವು ಪ್ರಾಪ್ತವಾಗಿ ಆ ಮಾಸದಲ್ಲಿಯೂ ವಿಶೇಷವಾಗಿ ಚತುರ್ದಶೀ ತಿಥಿಯಲ್ಲಿ ಕಪಿಲಾತೀರ್ಥದಲ್ಲಿ ಉಪವಾಸವನ್ನು ಮಾಡಿ ಭಕ್ತಿಯಿಂದ ಸ್ವಾಮಿಗೆ ಘೃತದ ದೀಪವನ್ನು ಅರ್ಪಿಸಬೇಕು.

೧೦೨. ಹಾಗು ಘೃತದಿಂದ ರುದ್ರನಿಗೆ ಅಭಿಷೇಕವನ್ನು ಮಾಡಬೇಕು. ಆ ಪುಣ್ಯದಿಂದ ಸಂಪತ್ತಿಯನ್ನು ಹೊಂದುತ್ತಾನೆ. ಮತ್ತು ಘಂಟೆಯ ಆಭರಣಗಳನ್ನು ಇಡಿಸಿರುವ ಕಪಿಲಾಗೋವಿನ ದಾನವನ್ನು ಮಾಡಬೇಕು.

೧೦೩. ಆಗ ಶಿವಪ್ರಸಾದದಿಂದ ಸಮಸ್ತ ಆಭರಣಗಳಿಂದ ಕೂಡಿದವನೂ ಸರ್ವದೇವತೆಗಳಿಂದ ವಂದಿಸಲ್ಪಟ್ಟವನೂ ಮತ್ತು ಶಿವನಿಗೆ ಸಮಾನವಾದ ಶಕ್ತಿಯುಳ್ಳವನೂ ಆಗಿ ಯಾವಾಗಲೂ ಶಿವನಂತೆ ವಿಹರಿಸುತ್ತಾನೆ.

೧೦೪. ಹಾಗು ಚತುರ್ಥಿಯಿಂದ ಕೂಡಿದ ಅಂಗಾರಕದಿನವು ಬಂದರೆ ಅಂದು ವಿಶೇಷವಾಗಿ ಶಿವನಿಗೆ ಅಭಿಷೇಕವನ್ನು ಮಾಡಿ ಅನೇಕಮಂದಿ ಬ್ರಾಹ್ಮಣರಿಗೆ ಭೋಜನವನ್ನು ನೀಡಬೇಕು.

ಸರ್ವದೇವಸಮಾಯುಕ್ತೋ ವಿಮಾನೇ ಸರ್ವಕಾಮಿಕೇ ।
ಗತ್ವಾ ಶಕ್ರಸ್ಯ ಭವನಂ ಶಕ್ರೇಣ ಸಹ ಮೋದತೇ ॥ ೧೦೫ ॥

ತತಃ ಸ್ವರ್ಗಾತ್ ಪರಿಭ್ರಷ್ಟೋ ಧೃತಿಮಾನ್ ಭೋಗವಾನ್ ಭವೇತ್ ॥

ಅಂಗಾರಕೇನವಮ್ಯಾಂ ತು ಅಮಾವಾಸ್ಯಾಂ ತಥೈವ ಚ ।
ಸ್ನಾಪಯೇತತ್ರ ಯತ್ನೇನ ರೂಪವಾನ್ ಸುಭಗೋ ಭವೇತ್ ॥ ೧೦೭ ॥

ತತೋಽಗಚ್ಛೇತ ರಾಜೇಂದ್ರ ಗಣೇಶ್ವರಮನುತ್ತಮ್ ॥ ೧೦೮ ॥

---

೧೦೫. ಆದರಿಂದ ಸಮಸ್ತ ಇಷ್ಟಾರ್ಥಗಳಿಂದ ಕೂಡಿದ ವಿಮಾನದಲ್ಲಿ ಸಮಸ್ತ ದೇವತೆಗಳೊಡನೆ ಕುಳಿತುಕೊಂಡು ಇಂದ್ರನ ಭವನಕ್ಕೆ ಹೋಗಿ, ಅಲ್ಲಿ ಇಂದ್ರನೊಡನೆ ದಿವ್ಯವಾದ ಭೋಗಗಳನ್ನು ಅನುಭವಿಸುತ್ತಾನೆ.

೧೦೬. ಮತ್ತು ಸ್ವರ್ಗಸುಖವನ್ನು ಭುಂಜಿಸಿ ಪುಣ್ಯಕ್ಷಯದಿಂದ ಸ್ವರ್ಗ ಲೋಕದಿಂದ ಭ್ರಷ್ಟನಾಗಿ ಧೈರ್ಯಶಾಲಿಯೂ, ಅನೇಕ ಸುಖಭೋಗಿಯೂ ಆಗಿಜನಿಸುವನು.

೧೦೭. ಅಂಗಾರಕ ದಿನದಿಂದ ಕೂಡಿದ ನವಮೀ ತಿಥಿಯಲ್ಲಿಯೂ ಅಮಾವಾಸ್ಯಾತಿಥಿಯಲ್ಲಿಯೂ ವಿಶೇಷವಾಗಿ ಅಲ್ಲಿ ಸ್ವಾಮಿಗೆ ಪ್ರಯತ್ನಪೂರ್ವಕವಾಗಿ ಅಭಿಷೇಕವನ್ನು ಮಾಡಿಸಬೇಕು. ಅದರಿಂದ ರೂಪವಂತನೂ ಸುಂದರನೂ ಆಗುವನು.

೧೦೮. ರಾಜಾಧಿರಾಜನೆ ! ಆ ಕಪಿಲಾತೀರ್ಥದಿಂದ ಮುಂದಕ್ಕೆತೀರ್ಥಗಳಲ್ಲೆಲ್ಲ ಸರ್ವೋತ್ತಮವೆನಿಸಿರುವ ಗಣೇಶ್ವರತೀರ್ಥಕ್ಕೆ ಹೋಗಬೇಕು.

ಶ್ರಾವಣೇ ಮಾಸಿ ಸಂಪ್ರಾಪ್ತೇ ಕೃಷ್ಣಪಕ್ಷೇ ಚತುರ್ದಶೀ ।
ಸ್ನಾತಮಾತ್ರೋ ನರಸ್ತತ್ರ ರುದ್ರಲೋಕೇ ಮಹೀಯತೇ ॥ ೧೦೯ ॥

ಪಿತೄಣಾಂ ತರ್ಪಣಂ ಕೃತ್ವಾ ಮುಚ್ಯತೇ ಸ ಋಣತ್ರಯಾತ್ ।
ಗಂಗೇಶ್ವರಸಮೀಪೇ ತು ಗಂಗಾವದನಮುತ್ತಮಮ್ ॥ ೧೧೦ ॥

ಅಕಾಮೋ ವಾ ಸಕಾಮೋ ವಾ ತತ್ರ ಸ್ನಾತ್ವಾ ತು ಮಾನವಃ ।
ಆಜನ್ಮಜನಿತೈಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ॥ ೧೧೧ ॥

ತಸ್ಯ ವೈ ಪಶ್ಚಿಮೇ ಭಾಗೇ ಸಮೀಪೇ ನಾತಿದೂರತಃ ।
ದಶಾಶ್ವಮೇಧಿಕಂ ತೀರ್ಥಂ ತ್ರಿಷು ಲೋಕೇಷು ವಿಶ್ರುತಮ್ ॥ ೧೧೨ ॥

---

೧೦೯. ಆ ಗಣೇಶ್ವರ ತೀರ್ಥದಲ್ಲಿ ಶ್ರಾವಣಮಾಸ ಕೃಷ್ಣಪಕ್ಷದ ಚತುರ್ದಶೀ ತಿಥಿಯು ಬಂದಿರುವ ಸಮಯದಲ್ಲಿ ಮಾನವನು ಸ್ನಾನವನ್ನು ಮಾಡುವುದರಿಂದ ಮಾತ್ರವೆ ರುದ್ರಲೋಕಕ್ಕೆ ಹೋಗಿ ಅಲ್ಲಿ ಸತ್ಕರಿಸಲ್ಪಡುತ್ತಾನೆ.

೧೧೦. ಮತ್ತು ಅಲ್ಲಿ ಪಿತೃಗಳಿಗೆ ತರ್ಪಣವನ್ನು ಕೊಡುವುದರಿಂದ ದೇವ ಋಷಿ, ಪಿತೃ, ಋಣಗಳೆಂಬ ಮೂರು ಋಣಗಳಿಂದ ಮುಕ್ತನಾಗುತ್ತಾನೆ. ಹಾಗು ಗಂಗೇಶ್ವರನ ಸನ್ನಿಧಿಯಲ್ಲಿ ಗಂಗಾವದನವೆಂಬ ಒಂದು ಉತ್ತಮತೀರ್ಥವು ಇರುವುದು.

೧೧೧. ಮಾನವನು ಕಾಮನೆಯಿಂದ ಕೂಡಿದವನಾಗಲಿ, ನಿಷ್ಕಾಮನಾಗಲಿ, ಗಂಗಾವದನವೆಂಬ ತೀರ್ಥದಲ್ಲಿ ಸ್ನಾನಮಾಡುವುದರಿಂದ ಜನನ ಮೊದಲಾಗಿ ತಾನು ಮಾಡಿದ ಸರ್ವಪಾತಕಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ.

೧೧೨. ಗಂಗಾವದನವೆಂಬ ತೀರ್ಥದ ಪಶ್ಚಿಮದಿಕ್ಕಿನ ಕಡೆಗೆ ಹೆಚ್ಚು ದೂರ ವಿಲ್ಲದ ಸಮೀಪಪ್ರದೇಶದಲ್ಲಿ ದಶಾಶ್ವಮೇಧಿಕವೆಂಬ ಒಂದು ಉತ್ತಮ ತೀರ್ಥವು ಮೂರು ಲೋಕಗಳಲ್ಲಿ ಪ್ರಖ್ಯಾತಿಗೊಂಡಿರುವುದು.

ಉಪೋಷ್ಯ ರಜನೀಮೇಕಾಂ ಮಾಸಿ ಭಾದ್ರಪದೇ ಶುಭೇ ।
ಅಮಾವಾಸ್ಯಾಂ ಹರಂ ಸ್ನಾಪ್ಯ ಪೂಜಯೇದ್ಗೋವೃಷಧ್ವಜಮ್ ॥೧೧೩॥

ಕಾಂಚನೇನ ವಿಮಾನೇನ ಕಿಂಕಿಣೀಜಾಲಮಾಲಿನಾ ।
ಗತ್ವಾ ರುದ್ರಪುರಂ ರಮ್ಯಂ ರುದ್ರೇಣ ಸಹ ಮೋದತೇ ॥ ೧೧೪ ॥

ಸರ್ವತ್ರ ಸರ್ವದಿವಸೇ ಸ್ನಾನಂ ತತ್ರ ಸಮಾಚರೇತ್ ।
ಪಿತೄಣಾಂ ತರ್ಪಣಂ ಕೃತ್ವಾ ಚಾಶ್ವಮೇಧಫಲಂ ಲಭೇತ್ ॥ ೧೧೫ ॥

ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇ
ಚತುರ್ನವತಿತಮೋಽಧ್ಯಾಯಃ.

---

೧೧೩. ಮಂಗಳಪ್ರದವಾದ ಭಾದ್ರಪದಮಾಸದ ಅಮಾವಾಸ್ಯಾ ತಿಥಿಯಲ್ಲಿ ಒಂದುರಾತ್ರಿ ಸಂಪೂರ್ಣವಾಗಿ ಉಪವಾಸವನ್ನು ಮಾಡಿ ವೃಷಭಾಂಕಿತಧ್ವಜದಿಂದ ಶೋಭಿಸುವ ಮಹೇಶ್ವರನನ್ನು ಅಭಿಷೇಕದಿಂದ ಸಂತೋಷಪಡಿಸಬೇಕು.

೧೧೪. ಅಂತಹ ಸುಕೃತಮಹಿಮೆಯಿಂದ ಕಿರಿಘಂಟೆಗಳ ಸಾಲಿನಿಂದ ಶೋಭಿಸುತ್ತಿರುವ ಸುವರ್ಣಮಯವಾದ ವಿಮಾನದಿಂದ ರಮ್ಯವಾದ ರುದ್ರಲೋಕಕ್ಕೆ ಹೋಗಿ ರುದ್ರದೇವನೊಡನೆ ಸುಖವನ್ನು ಭುಂಜಿಸುತ್ತಾನೆ.

೧೧೫. ಆ ತೀರ್ಥದ ಸರ್ವಭಾಗಗಳಲ್ಲಿಯೂ ಸಮಸ್ತ ದಿನಗಳಲ್ಲಿಯೂ ಆ ತೀರ್ಥೋದಕದಲ್ಲಿ ಸ್ನಾನವನ್ನು ಮಾಡಬೇಕು. ಮತ್ತು ಪಿತೃಗಳಿಗೆ ತರ್ಪಣಾಂಜಲಿಯನ್ನು ಕೊಡಬೇಕು. ಈ ಧರ್ಮಾಚರಣೆಯಿಂದ ಅಶ್ವಮೇಧಯಾಗದ ಫಲವನ್ನು ಅನುಭವಿಸುತ್ತಾನೆ.

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ತೊಂಭತ್ತನಾಲ್ಕನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

# ಕೂರ್ಮಪುರಾಣಂ

## ಪಂಚನವತಿತಮೋಽಧ್ಯಾಯಃ.

**ಮಾರ್ಕಂಡೇಯ ಉವಾಚ :—**

ತತೋ ಗಚ್ಛೇತ ರಾಜೇಂದ್ರ ಭೃಗುತೀರ್ಥಮನುತ್ತಮಮ್ ।
ತತ್ರ ದೇವೋ ಭೃಗುಃ ಪೂರ್ವಂ ರುದ್ರಮಾರಾಧಯತ್ಪುರಾ ॥ ೧ ॥
ದರ್ಶನಾತ್ತಸ್ಯ ದೇವಸ್ಯ ಸದ್ಯಃ ಪಾಪಾತ್ಪ್ರಮುಚ್ಯತೇ ॥ ೨ ॥

ಏತತ್ ಕ್ಷೇತ್ರಂ ಸುವಿಪುಲಂ ಸರ್ವಪಾಪಪ್ರಣಾಶನಮ್ ।
ತತ್ರ ಸ್ನಾತ್ವಾ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ ॥ ೩ ॥

---

## ತೊಂಭತ್ತೈದನೆಯ ಅಧ್ಯಾಯವು

೧. ಮಾರ್ಕಂಡೇಯಮುನಿಯು ಹೀಗೆ ಹೇಳಿದನು:— ಮಹಾರಾಜನೆ! ತರುವಾಯ ಬೇರೆ ಉತ್ತಮತೀರ್ಥಗಳಿಂದ ವರ್ಜಿತವಾದ ಭೃಗುತೀರ್ಥವೆಂಬ ಪುಣ್ಯ ತೀರ್ಥಕ್ಕೆ ಹೋಗಬೇಕು. ಪೂರ್ವಕಾಲದಲ್ಲಿ ಅಲ್ಲಿ ಭೃಗುಮಹರ್ಷಿಯು ಅನಾದಿ ಯಾದ ರುದ್ರದೇವನನ್ನು ಆರಾಧಿಸಿದನು.

೨. ಮತ್ತು ಭೃಗುತೀರ್ಥದಲ್ಲಿರುವ ರುದ್ರ ಮೂರ್ತಿಯಾದ ಸ್ವಾಮಿಯ ದರ್ಶನಮಾಡುವುದರಿಂದ ಕೂಡಲೆ ಸಮಸ್ತ ಪಾತಕಗಳಿಂದ ಮುಕ್ತನಾಗುತ್ತಾನೆ.

೩. ಬಹು ವಿಸ್ತಾರದಿಂದ ಕೂಡಿದ ಈ ಪುಣ್ಯಕ್ಷೇತ್ರವು ಸರ್ವಪಾಪಭಂಜಕ ವಾಗಿರುವುದು. ಆ ತೀರ್ಥದಲ್ಲಿ ಸ್ನಾನಮಾಡಿದವರು ಸ್ವರ್ಗವನ್ನು ಹೊಂದುತ್ತಾರೆ. ಮತ್ತು ಆ ತೀರ್ಥದ ಸನ್ನಿಧಿಯಲ್ಲಿ ಮರಣಹೊಂದಿದವರಿಗೆ ಪುನರ್ಜನ್ಮವಿಲ್ಲ.

ಉಪಾನಹೌ ತಥಾ ಯುಗ್ಮಂ ದೇಯಮನ್ನಂ ಚ ಕಾಂಚನಮ್ ।
ಭೋಜನಂ ಚ ಯಥಾಶಕ್ತಿ ತಸ್ಯಾಪ್ಯಕ್ಷಯಮುಚ್ಯತೇ ॥ ೪ ॥

ಕ್ಷರಂತಿ ಸರ್ವದಾನಾನಿ ಯಜ್ಞದಾನತಪಃಕ್ರಿಯಾಃ ।
ಅಕ್ಷಯ್ಯಂ ತತ್ತಪಸ್ತಪ್ತಂ ಭೃಗುತೀರ್ಥೇ ಯುಧಿಷ್ಠಿರ ॥ ೫ ॥

ತಸ್ಯೈವ ತಪಸೋಗ್ರೇಣ ರುದ್ರೇಣ ತ್ರಿಪುರಾರಿಣಾ ।
ಸಾನ್ನಿಧ್ಯಂ ತತ್ರ ಕಥಿತಂ ಭೃಗುತೀರ್ಥೇ ಯುಧಿಷ್ಠಿರ ॥ ೬ ॥

ತತೋ ಗಚ್ಛೇತ ರಾಜೇಂದ್ರ ಗೌತಮೇಶ್ವರಮುತ್ತಮಮ್ ।
ಯತ್ರಾರಾಧ್ಯ ತ್ರಿಶೂಲಾಂಕಂ ಗೌತಮಃ ಸಿದ್ಧಿಮಾಪ್ತವಾನ್ ॥ ೭ ॥

---

೪. ಮತ್ತು ಆ ತೀರ್ಥದ ಸನ್ನಿಧಿಯಲ್ಲಿ ಪಾದರಕ್ಷೆ, ಶಕಟ, ಅನ್ನ, ಸುವರ್ಣ ಅಥವಾ ಭೋಜನ ಮುಂತಾದ ವಸ್ತುಗಳನ್ನು ಯಥಾಶಕ್ತಿಯಾಗಿ ದಾನಮಾಡ ಬೇಕು. ಆ ದಾನದ ಪುಣ್ಯವು ಅವನಿಗೆ ಅಕ್ಷಯವಾದ ಫಲವನ್ನು ಕೊಡುತ್ತದೆ.

೫. ಯುಧಿಷ್ಠಿರನೆ ! ಸರ್ವಸ್ವದಾನ, ಯಜ್ಞ, ದಾನ, ತಪಸ್ಸು, ಮುಂತಾದ ಸಮಸ್ತ ಮಹಾಪುಣ್ಯಗಳ ಫಲಗಳು ಅನಿತ್ಯವಾದುವುಗಳು. ಭೃಗುತೀರ್ಥದಲ್ಲಿ ಆಚರಿ ಸಿದ ತಪಸ್ಸು ಅಕ್ಷಯಫಲವನ್ನು ಕೊಡುವುದು.

೬. ಯುಧಿಷ್ಠಿರರಾಜನೆ ! ಅಲ್ಲಿ ಭೃಗುಮುನಿಯು ಆಚರಿಸಿರುವ ಅತಿ ಕಠಿನ ವಾದ ತಪಸ್ಸಿನಿಂದ ಪ್ರತ್ಯಕ್ಷನಾಗಿ ಬಂದಿರುವ ತ್ರಿಪುರಾಸುರಸಂಹಾರಿಯಾದ ಈಶ್ವರ ನಿಂದ ಆ ಭೃಗುತೀರ್ಥದಲ್ಲಿ ತನ್ನ ಸಾನ್ನಿಧ್ಯವು ಪ್ರಕಾಶಗೊಳಿಸಲ್ಪಟ್ಟಿದೆ.

೭. ಮಹಾರಾಜನೆ ! ಅನಂತರದಲ್ಲಿ ಉತ್ತಮವಾದ ಗೌತಮೇಶ್ವರ ತೀರ್ಥ ವೆಂಬ ಹೆಸರಿನಿಂದ ಪ್ರಸಿದ್ಧವಾದ ತೀರ್ಥಕ್ಕೆ ಹೋಗಬೇಕು. ಆ ಗೌತಮ ತೀರ್ಥದಲ್ಲಿ ಗೌತಮಮುನಿಯು ತ್ರಿಶೂಲಧಾರಿಯಾದ ಈಶ್ವರನನ್ನು ಆರಾಧಿಸಿ ಇಷ್ಟಸಿದ್ಧಿಯನ್ನು ಹೊಂದಿರುವನು.

ತತ್ರ ಸ್ನಾತ್ವಾ ನರೋ ರಾಜನ್ನುಪವಾಸಪರಾಯಣಃ ।
ಕಾಂಚನೇನ ವಿಮಾನೇನ ಬ್ರಹ್ಮಲೋಕೇ ಮಹೀಯತೇ ॥ ೮ ॥

ವೃಷೋತ್ಸರ್ಗಂ ತತೋ ಗಚ್ಛೇಚ್ಛಾಶ್ವತಂ ಪದಮಾಪ್ನುಯಾತ್ ।
ನ ಜಾನಂತಿ ನರಾ ಮೂಢಾ ವಿಷ್ಣೋರ್ಮಾಯಾವಿಮೋಹಿತಾಃ ॥ ೯ ॥

ಧೌತಪಾಪಂ ತತೋ ಗಚ್ಛೇದ್ಧೌತಂ ಯತ್ರ ವೃಷೇಣ ತು ।
ನರ್ಮದಾಯಾಂ ಸ್ಥಿತಂ ರಾಜನ್ ಸರ್ವಪಾತಕನಾಶನಮ್ ॥ ೧೦ ॥

ತತ್ರ ತೀರ್ಥೇ ನರಃ ಸ್ನಾತ್ವಾ ಬ್ರಹ್ಮಹತ್ಯಾಂ ವ್ಯಪೋಹತಿ ॥ ೧೧ ॥

---

೮. ರಾಜನೆ ! ಆ ಗೌತಮತೀರ್ಥದಲ್ಲಿ ಸ್ನಾನಮಾಡಿ ಉಪವಾಸವ್ರತವನ್ನು ಮಾಡಿದ ನರನು ಸುವರ್ಣಮಯವಾದ ವಿಮಾನದಲ್ಲಿ ಕುಳಿತುಕೊಂಡು ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಸತ್ಕರಿಸಲ್ಪಡುತ್ತಾನೆ.

೯. ತರುವಾಯ ವೃಷೋತ್ಸರ್ಗವೆಂಬ ಶ್ರೇಷ್ಠ ತೀರ್ಥಕ್ಕೆ ಹೋಗಬೇಕು. ಆ ತೀರ್ಥಸೇವನೆಯಿಂದ ಶಾಶ್ವತವಾದ ಪದವಿಯನ್ನು ಹೊಂದುತ್ತಾನೆ. ವಿಷ್ಣುವಿನ ಮಾಯೆಯಿಂದ ಮೋಹಿಸಲ್ಪಟ್ಟ ಮೂಢ ಜನರು ಆ ಉತ್ತಮ ತೀರ್ಥವನ್ನು ತಿಳಿಯುವುದಿಲ್ಲ.

೧೦. ಮಹಾರಾಜನೆ ! ವೃಷೇಶ್ವರನಿಂದ ಶುದ್ಧಿಮಾಡಲ್ಪಟ್ಟಿರುವುದೂ ನರ್ಮದಾನದಿಯ ತೀರದಲ್ಲಿರುವುದೂ ಆದ ಧೌತಪಾಪ ತೀರ್ಥಕ್ಕೆ ತರುವಾಯ ಪ್ರಯಾಣಮಾಡಬೇಕು. ಆ ತೀರ್ಥವು ಸಮಸ್ತ ಪಾಪಗಳನ್ನು ಧ್ವಂಸಮಾಡುತ್ತದೆ.

೧೧. ಅಂತಹ ಸರ್ವೋತ್ತಮವಾದ ಧೌತಪಾಪತೀರ್ಥವಲ್ಲಿ ಸ್ನಾನಮಾಡಿದ ಮಾನವನು ಸ್ನಾನಪುಣ್ಯ ಮಹಿಮೆಯಿಂದ ಬ್ರಹ್ಮಹತ್ಯಾಮಹಾಪಾತಕದಿಂದ ಬಿಡುಗಡೆ ಹೊಂದುತ್ತಾನೆ.

ತತ್ರ ತೀರ್ಥೇ ತು ರಾಜೇಂದ್ರ ಪ್ರಾಣತ್ಯಾಗಂ ಕರೋತಿ ಯಃ ।
ಚತುರ್ಭುಜಸ್ತ್ರಿನೇತ್ರಶ್ಚ ಹರತುಲ್ಯಬಲೋ ಭವೇತ್ ॥ ೧೨ ॥

ವಸೇತ್ ಕಲ್ಪಾಯುತಂ ಸಾಗ್ರಂ ಶಿವತುಲ್ಯಪರಾಕ್ರಮಃ ।
ಕಾಲೇನ ಮಹತಾ ಜಾತಃ ಪೃಥಿವ್ಯಾಮೇಕರಾಡ್ ಭವೇತ್ ॥ ೧೩ ॥

ತತೋ ಗಚ್ಛೇತ ರಾಜೇಂದ್ರ ಹಸ್ತತೀರ್ಥಮನುತ್ತಮಮ್ ।
ತತ್ರ ಸ್ನಾತ್ವಾ ನರೋ ರಾಜನ್ ಬ್ರಹ್ಮಲೋಕೇ ಮಹೀಯತೇ ॥ ೧೪ ॥

ತತೋ ಗಚ್ಛೇತ ರಾಜೇಂದ್ರ ಯತ್ರ ಸಿದ್ಧೋ ಜನಾರ್ದನಃ ।
ವರಾಹತೀರ್ಥಮಾಖ್ಯಾತಂ ವಿಷ್ಣುಲೋಕಗತಿಪ್ರದಮ್ ॥ ೧೫ ॥

---

೧೨. ಮಹಾರಾಜನೆ! ಆ ಪವಿತ್ರ ತೀರ್ಥದಲ್ಲಿ ಯಾವ ನರನು ಪ್ರಾಣ ತ್ಯಾಗವನ್ನು ಮಾಡುವನೊ; ಅವನು ಅದರ ಮಹಿಮೆಯಿಂದ ನಾಲ್ಕುಭುಜಗಳಿಂದಲೂ ಮೂರು ನೇತ್ರಗಳಿಂದಲೂ ಅಲಂಕರಿಸಲ್ಪಟ್ಟವನಾಗಿ ಈಶ್ವರನಿಗೆ ತುಲ್ಯವಾದ ಶಕ್ತಿಯುಳ್ಳವನಾಗುತ್ತಾನೆ.

೧೩. ಶಿವನಿಗೆ ತುಲ್ಯವಾದ ಮಹಿಮೆಯುಳ್ಳವನಾಗಿ ಸಂಪೂರ್ಣವಾಗಿ ಅಯುತ ಸಂಖ್ಯೆಯುಳ್ಳ ಕಲ್ಪಗಳವರೆಗೆ ಶಿವಲೋಕದಲ್ಲಿ ವಾಸಮಾಡಿ ಬಹುಕಾಲಾನಂತರದಲ್ಲಿ ಪೃಥಿವಿಯಲ್ಲಿ ಜನನಹೊಂದಿ ಸಾರ್ವಭೌಮನಾಗುತ್ತಾನೆ.

೧೪. ರಾಜಾಧಿರಾಜನೆ! ಅಲ್ಲಿಂದ ಮುಂದೆ ಉತ್ತಮವಾದ ದ್ವಿತೀಯ ತೀರ್ಥವಿಲ್ಲದ ಹಸ್ತತೀರ್ಥವನ್ನು ಕುರಿತು ಹೋಗಬೇಕು. ಮಹಾರಾಜನೆ! ಹಸ್ತ ತೀರ್ಥದಲ್ಲಿ ಸ್ನಾನಮಾಡಿದ ಮಾನವನು ಬ್ರಹ್ಮಲೋಕವಾಸಿಯಾಗಿ ಪೂಜಿಸಲ್ಪಡುವನು.

೧೫. ರಾಜೇಂದ್ರನೆ! ಜನಾರ್ದನರೂಪಿಯಾದ ಶ್ರೀಮನ್ನಾರಾಯಣನು ಸನ್ನಿಹಿತನಾಗಿರುವ, ವಿಷ್ಣುಲೋಕಪ್ರಾಪ್ತಿಯೆಂಬ ಸದ್ಗತಿಯನ್ನು ಉಂಟುಮಾಡುವ ಮತ್ತು ವರಾಹತೀರ್ಥವೆಂದು ಪ್ರಸಿದ್ಧವಾದ ಉತ್ತಮ ತೀರ್ಥಕ್ಕೆ ಮುಂದೆ ನಡೆಯಬೇಕು.

ತತೋ ಗಚ್ಛೇತ ರಾಜೇಂದ್ರ ಚಂದ್ರತೀರ್ಥಮನುತ್ತಮಮ್ ।
ಪೌರ್ಣಮಾಸ್ಯಾಂ ವಿಶೇಷೇಣ ಸ್ನಾನಂ ತತ್ರ ಸಮಾಚರೇತ್ ॥ ೧೬ ॥

ಸ್ನಾತಮಾತ್ರೋ ನರಸ್ತತ್ರ ಪೃಥಿವ್ಯಾಮೇಕರಾಡ್ಭವೇತ್ ॥ ೧೭ ॥

ದೇವತೀರ್ಥಂ ತತೋ ಗಚ್ಛೇತ್ ಸರ್ವದೇವನಮಸ್ಕೃತಮ್ ।
ತತ್ರ ಸ್ನಾತ್ವಾ ಚ ರಾಜೇಂದ್ರ ದೈವತೈಃ ಸಹ ಮೋದತೇ ॥ ೧೮ ॥

ತತೋ ಗಚ್ಛೇತ ರಾಜೇಂದ್ರ ಶಂಖತೀರ್ಥಮನುತ್ತಮಮ್ ।
ಯತ್ತತ್ರ ದೀಯತೇ ದಾನಂ ಸರ್ವಂ ಕೋಟಿಗುಣಂ ಭವೇತ್ ॥ ೧೯ ॥

---

೧೬. ರಾಜಶ್ರೇಷ್ಠನೆ! ತರುವಾಯ ಸರ್ವೋತ್ತಮವೆನಿಸಿರುವ ಚಂದ್ರತೀರ್ಥವೆಂಬ ಪುಣ್ಯತೀರ್ಥಕ್ಕೆ ಹೋಗಬೇಕು. ಆ ಚಂದ್ರತೀರ್ಥದಲ್ಲಿ ಪೂರ್ಣಿಮಾ ತಿಥಿಯಲ್ಲಿ ವಿಶೇಷವಾಗಿ ಸ್ನಾನವಿಧಿಯನ್ನು ಆಚರಿಸಬೇಕು.

೧೭. ಹಾಗೆ ಚಂದ್ರತೀರ್ಥದಲ್ಲಿ ಪೂರ್ಣಿಮಾ ತಿಥಿಯಲ್ಲಿ ಸ್ನಾನಮಾಡಿದ ಮಾತ್ರದಿಂದ ಅದರ ಪುಣ್ಯಪ್ರಭಾವದಿಂದ ಪೃಥಿವಿಯಲ್ಲಿ ಏಕಚಕ್ರಾಧಿಪತಿಯಾಗುತ್ತಾನೆ.

೧೮. ತರುವಾಯ ಸಮಸ್ತ ದೇವತೆಗಳಿಂದ ವಂದಿಸಲ್ಪಟ್ಟ ದೇವತೀರ್ಥವೆಂಬ ಶ್ರೇಷ್ಠವಾದ ತೀರ್ಥಕ್ಕೆ ಹೋಗಬೇಕು. ರಾಜೇಂದ್ರನೆ! ಆ ತೀರ್ಥದಲ್ಲಿ ಸ್ನಾನ ಮಾಡಿದ ಮಾನವನು ದೇವತೆಗಳೊಡನೆ ಸಂತೋಷದಿಂದ ಇರುತ್ತಾನೆ.

೧೯. ಮಹಾರಾಜನೆ! ತರುವಾಯ ಅಲ್ಲಿಂದ ಮುಂದೆ ಸರ್ವೋತ್ತಮವಾದ ಶಂಖತೀರ್ಥಕ್ಕೆ ಹೋಗಬೇಕು. ಆ ಶಂಖತೀರ್ಥದಲ್ಲಿ ಕೊಡುವ ಸಮಸ್ತ ದಾನಗಳಿಂದ ಕೋಟಿಗುಣವಾದ ದಾನಫಲಗಳನ್ನು ಹೊಂದುತ್ತಾನೆ.

ತತೋ ಗಚ್ಛೇತ ರಾಜೇಂದ್ರ ತೀರ್ಥಂ ಪೈತಾಮಹಂ ಶುಭಮ್ ।
ಯತ್ತತ್ರ ದೀಯತೇ ಶ್ರಾದ್ಧಂ ಸರ್ವಂ ತಸ್ಯಾಕ್ಷಯಂ ಭವೇತ್ ॥ ೨೦ ॥

ಸಾವಿತ್ರೀತೀರ್ಥಮಾಸಾದ್ಯ ಯಸ್ತು ಪ್ರಾಣಾನ್ ಪರಿತ್ಯಜೇತ್ ।
ವಿಧೂಯ ಸರ್ವಪಾಪಾನಿ ಬ್ರಹ್ಮಲೋಕೇ ಮಹೀಯತೇ ॥ ೨೧ ॥

ಮನೋಹರಂ ತು ತತ್ರೈವ ತೀರ್ಥಂ ಪರಮಶೋಭನಮ್ ।
ತತ್ರ ಸ್ನಾತ್ವಾ ನರೋ ರಾಜನ್ ರುದ್ರಲೋಕೇ ಮಹೀಯತೇ ॥ ೨೨ ॥

ತತೋ ಗಚ್ಛೇತ ರಾಜೇಂದ್ರ ಕನ್ಯಾತೀರ್ಥಮನುತ್ತಮಮ್ ।
ಸ್ನಾತ್ವಾ ತತ್ರ ನರೋ ರಾಜನ್ ಸರ್ವಪಾಪೈಃ ಪ್ರಮುಚ್ಯತೇ ॥ ೨೩ ॥

---

೨೦. ರಾಜಾಧಿರಾಜನೆ! ಅಲ್ಲಿಂದ ಮುಂದೆ ಮಂಗಲಪ್ರದವಾದ, ಲೋಕ ಪಿತಾಮಹನಾದ ಬ್ರಹ್ಮದೇವನ ಪೈತಾಮಹತೀರ್ಥಕ್ಕೆ ಹೋಗಬೇಕು. ಆ ತೀರ್ಥದಲ್ಲಿ ದಾನಮಾಡಿದ ಶ್ರಾದ್ಧಾಂಗವಾದ ಕವ್ಯವು ಅಕ್ಷಯವಾದ ಫಲಕ್ಕೆ ಸಾಧನವಾಗುವುದು.

೨೧. ಯಾವ ಮಾನವನು ಮುಂದೆ ಸಾವಿತ್ರೀತೀರ್ಥವನ್ನು ಹೊಂದಿ ಪ್ರಾಣ ಗಳನ್ನು ತ್ಯಜಿಸುವನೊ; ಅವನು ತನ್ನ ಸಮಸ್ತ ಪಾಪಗಳನ್ನು ಕಳೆದುಕೊಂಡು ಬ್ರಹ್ಮಲೋಕದಲ್ಲಿ ಸತ್ಕರಿಸಲ್ಪಡುತ್ತಾನೆ.

೨೨. ಆ ಪ್ರದೇಶದಲ್ಲಿಯೇ ಸರ್ವಶ್ರೇಷ್ಠವೂ ಮಂಗಳಕರವೂ ಆದ ಮನೋಹರ ತೀರ್ಥವೆಂಬ ಒಂದು ತೀರ್ಥವು ಇರುವುದು. ರಾಜನೆ! ಆ ತೀರ್ಥದಲ್ಲಿ ಸ್ನಾನಮಾಡಿದ ನರನು ರುದ್ರಲೋಕದಲ್ಲಿ ಗಣ್ಯನಾಗುತ್ತಾನೆ.

೨೩. ಮಹಾರಾಜನೆ! ಆ ಸ್ಥಳದಲ್ಲಿರುವ, ಪವಿತ್ರವಾದ ಮತ್ತು ಸರ್ವೋ ತ್ತಮವಾದ ಕನ್ಯಾತೀರ್ಥಕ್ಕೆ ಅವಶ್ಯವಾಗಿ ಹೋಗಬೇಕು. ರಾಜನೆ! ಕನ್ಯಾತೀರ್ಥದಲ್ಲಿ ಮನುಜನು ವಿಧಿವತ್ತಾಗಿ ಸ್ನಾನಮಾಡಿ ಸರ್ವಪಾತಕಗಳಿಂದ ಮುಕ್ತನಾಗುತ್ತಾನೆ.

ಶುಕ್ಲಪಕ್ಷೇ ತೃತೀಯಾಯಾಂ ಸ್ನಾನಮಾತ್ರಂ ಸಮಾಚರೇತ್ ।
ಸ್ನಾತಮಾತ್ರೋ ನರಸ್ತತ್ರ ಪೃಥಿವ್ಯಾಮೇಕರಾಡ್ಭವೇತ್ ॥ ೨೪ ॥

ಸರ್ಗಬಿಂದುಂ ತತೋ ಗಚ್ಛೇತ್ ತೀರ್ಥಂ ದೇವನಮಸ್ಕೃತಮ್ ।
ತತ್ರ ಸ್ನಾತ್ವಾ ನರೋ ರಾಜನ್ ದುರ್ಗತಿಂ ವೈ ನ ಪಶ್ಯತಿ ॥ ೨೫ ॥

ಅಪ್ಸರೇಶಂ ತತೋ ಗಚ್ಛೇತ್ ಸ್ನಾನಂ ತತ್ರ ಸಮಾಚರೇತ್ ।
ಕ್ರೀಡತೇ ನಾಕಲೋಕಸ್ಥೋ ಹ್ಯಪ್ಸರೋಭಿಃ ಸ ಮೋದತೇ ॥ ೨೬ ॥

ತತೋ ಗಚ್ಛೇತ ರಾಜೇಂದ್ರ ಭಾರಭೂತಿಮನುತ್ತಮಮ್ ।
ಉಪೋಷಿತೋ ಯಜೇತೇಶಂ ರುದ್ರಲೋಕೇ ಮಹೀಯತೇ ॥ ೨೭ ॥

---

೨೪. ಕನ್ಯಾತೀರ್ಥದಲ್ಲಿ ಶುಕ್ಲಪಕ್ಷಗಲ್ಲಿ ತೃತೀಯಾ ದಿನದಲ್ಲಿ ಸ್ನಾನಮಾತ್ರವನ್ನು ಆಚರಿಸಬೇಕು. ಕೇವಲ ಸ್ನಾನವನ್ನು ಮಾಡಿದ ನರನು ಅದರ ಮಹಿಮೆಯಿಂದ ಪೃಥಿವಿಯಲ್ಲಿ ಏಕಚಕ್ರಾಧಿಪತಿಯಾಗುವನು.

೨೫. ರಾಜೇಂದ್ರನೆ ! ಆ ಸ್ಥಳದಲ್ಲಿರುವ, ದೇವರಿಂದ ವಂದಿಸಲ್ಪಟ್ಟ, ಸರ್ಗಬಿಂದು ಎಂಬ ಮತ್ತೊಂದು ತೀರ್ಥವನ್ನು ಸೇವಿಸಬೇಕು. ಸರ್ಗಬಿಂದು ಎಂಬ ತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ದಾರಿದ್ರ್ಯಕ್ಲೇಶವನ್ನು ಅನುಭವಿಸುವುದಿಲ್ಲ.

೨೬. ಅಲ್ಲಿಂದ ಮುಂದೆ ಅಪ್ಸರೇಶವೆಂಬ ತೀರ್ಥಕ್ಕೆ ಹೋಗಬೇಕು. ಮತ್ತು ಆ ತೀರ್ಥದಲ್ಲಿ ಸ್ನಾನವನ್ನು ಮಾಡಬೇಕು. ಅಂತಹ ಸುಕೃತಿಯು ಸ್ವರ್ಗಲೋಕದಲ್ಲಿರುವವನಾಗಿ ಅಪ್ಸರಾಂಗನೆಯರೊಡನೆ ವಿಹರಿಸುತ್ತ ಪ್ರೀತಿಯಿಂದ ಇರುವನು.

೨೭. ಮಹಾರಾಜನೆ ! ಅಲ್ಲಿಂದ ಮುಂದೆ ಉತ್ತಮತೀರ್ಥವು ಬೇರೊಂದು ಇಲ್ಲದಿರುವ ಭಾರಭೂತಿ ಎಂಬ ತೀರ್ಥಕ್ಕೆ ಹೋಗಬೇಕು. ಅಲ್ಲಿ ಉಪವಾಸವ್ರತದಿಂದ ಇದ್ದು ಈಶ್ವರನನ್ನು ಅರ್ಚಿಸಬೇಕು. ಇದರಿಂದ ರುದ್ರಲೋಕದಲ್ಲಿ ಗಣ್ಯನಾಗುತ್ತಾನೆ.

ಅಸ್ಮಿಂಸ್ತೀರ್ಥೇ ಮೃತೋ ರಾಜನ್ ಗಾಣಪತ್ಯಮವಾಪ್ನುಯಾತ್॥೨೮॥

ಕಾರ್ತಿಕೇ ಮಾಸಿ ದೇವೇಶಮರ್ಚಯೇತ್ ಪಾರ್ವತೀಪತಿಮ್ ।
ಅಶ್ವಮೇಧಾದ್ದಶಗುಣಂ ಪ್ರವದಂತಿ ಮನೀಷಿಣಃ ॥ ೨೯ ॥

ವೃಷಭಂ ಯಃ ಪ್ರಯಚ್ಛೇತ ತತ್ರ ಕುಂದೇಂದುಸಪ್ರಭಮ್ ।
ವೃಷಯುಕ್ತೇನ ಯಾನೇನ ರುದ್ರಲೋಕಂ ಸ ಗಚ್ಛತಿ ॥ ೩೦ ॥

ಏತತ್ತೀರ್ಥಂ ಸಮಾಸಾದ್ಯ ಯಸ್ತು ಪ್ರಾಣಾನ್ ಪರಿತ್ಯಜೇತ್ ।
ಸರ್ವಪಾಪವಿನಿರ್ಮುಕ್ತೋ ರುದ್ರಲೋಕಂ ಸ ಗಚ್ಛತಿ ॥ ೩೧ ॥

---

೨೮. ಮಹೀಪತಿಯೆ! ಭಾರಭೂತಿ ಎಂಬ ಪುಣ್ಯತೀರ್ಥದಲ್ಲಿ ಮರಣ ಹೊಂದಿರುವ ನರನು ತಾನು ಮಾಡಿದ ಈ ಸುಕೃತದಿಂದ ಗಣಗಳಿಗೆ ಅಧಿಪತಿಯಾಗುತ್ತಾನೆ.

೨೯. ಈ ತೀರ್ಥದಲ್ಲಿ ಕಾರ್ತಿಕಮಾಸದಲ್ಲಿ ವಿಶೇಷವಾಗಿ ದೇವತೆಗಳಿಗೆ ಈಶ್ವರನೂ ಮತ್ತು ಪಾರ್ವತೀರಮಣನೂ ಆದ ಮಹೇಶ್ವರನನ್ನು ಪೂಜಿಸಬೇಕು. ಆದರಿಂದ ಅಶ್ವಮೇಧಯಾಗಕ್ಕಿಂತಲೂ ದಶಗುಣ ಅಧಿಕವಾಗಿ ಫಲವನ್ನು ಹೊಂದುವನೆಂದು ವಿದ್ವಾಂಸರು ಹೇಳುತ್ತಾರೆ.

೩೦. ಮತ್ತು ಈ ತೀರ್ಥದಲ್ಲಿ ಮಾಘಮಲ್ಲಿಗೆ ಅಥವಾ ಚಂದ್ರಬಿಂಬಗಳಂತೆ ಬೆಳ್ಳಗಿರುವ ವೃಷಭವನ್ನು ಯಾವ ಮಾನವನು ದಾನಮಾಡುವನೊ; ಅವನು ವೃಷಭದಿಂದ ಕೂಡಿದ ವಾಹನದಿಂದ ರುದ್ರಲೋಕಕ್ಕೆ ಹೋಗುತ್ತಾನೆ.

೩೧. ಹಾಗು ಯಾವ ಮಾನವನು ಈ ಉತ್ತಮತೀರ್ಥಕ್ಕೆ ಬಂದು ಪ್ರಾಣಗಳನ್ನು ತ್ಯಜಿಸುವನೊ; ಅವನು ತನ್ನ ಸಮಸ್ತ ದುಷ್ಕೃತಗಳಿಂದ ವರ್ಜಿತನಾಗಿ ರುದ್ರಲೋಕವನ್ನು ಹೊಂದುತ್ತಾನೆ.

ಜಲಪ್ರವೇಶಂ ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।
ಹಂಸಯುಕ್ತೇನ ಯಾನೇನ ಸ್ವರ್ಗಲೋಕಂ ಸ ಗಚ್ಛತಿ ॥ ೩೨ ॥

ಏರಂಡ್ಯಾ ನರ್ಮದಾಯಾಸ್ತು ಸಂಗಮಂ ಲೋಕವಿಶ್ರುತಮ್ ।
ತಚ್ಚ ತೀರ್ಥಂ ಮಹಾಪುಣ್ಯಂ ಸರ್ವಪಾಪಪ್ರಣಾಶನಮ್ ॥ ೩೩ ॥

ಉಪವಾಸಕೃಶೋ ಭೂತ್ವಾ ನಿತ್ಯಂ ವ್ರತಪರಾಯಣಃ ।
ತತ್ರ ಸ್ನಾತ್ವಾ ತು ರಾಜೇಂದ್ರ ಮುಚ್ಯತೇ ಬ್ರಹ್ಮಹತ್ಯಯಾ ॥ ೩೪ ॥

ತತೋ ಗಚ್ಛೇತ ರಾಜೇಂದ್ರ ನರ್ಮದೋದಧಿಸಂಗಮಮ್ ।
ಜಮದಗ್ನಿಮಿತಿ ಖ್ಯಾತಂ ಸಿದ್ಧೋ ಯತ್ರ ಜನಾರ್ದನಃ ॥ ೩೫ ॥

---

೩೨. ಭೂಪತಿಯೆ ! ಆ ತೀರ್ಥದಲ್ಲಿ ಯಾವ ನರನು ಜಲಪ್ರವೇಶವನ್ನು ಮಾಡಿ ಮರಣಹೊಂದುವನೊ; ಆ ಮಾನವನು ಹಂಸಗಳಿಂದ ಕೂಡಿರುವ ವಾಹನವನ್ನು ಏರಿಕೊಂಡು ಸ್ವರ್ಗಲೋಕಕ್ಕೆ ಹೋಗುವನು.

೩೩. ಏರಂಡೀ ಎಂಬ ನದಿ ಹಾಗು ನರ್ಮದಾನದಿ ಈ ಎರಡು ನದಿಗಳ ಲೋಕಪ್ರಸಿದ್ಧವಾದ ಸಂಗಮಕ್ಷೇತ್ರವು ಅತ್ಯುತ್ತಮತೀರ್ಥವಾಗಿದೆ. ಆ ತೀರ್ಥವು ಮಹತ್ತಾದ ಪುಣ್ಯವನ್ನು ಕೊಡುವುದೂ, ಸಕಲ ಪಾಪಗಳನ್ನು ದಹಿಸುವುದೂ ಆಗಿದೆ.

೩೪. ರಾಜೇಂದ್ರನೆ ! ಆ ತೀರ್ಥದ ಸನ್ನಿಧಿಯಲ್ಲಿ ಉಪವಾಸ ವ್ರತದಿಂದ ಅತಿಕೃಶನೂ, ಪ್ರತಿದಿನದಲ್ಲಿ ವ್ರತಾನುಷ್ಠಾನತತ್ಪರನೂ ಆದ ಮಾನವನು ಆ ತೀರ್ಥದಲ್ಲಿ ಸ್ನಾನಮಾಡಿ ಬ್ರಹ್ಮಹತ್ಯಾಪಾತಕದಿಂದ ಮುಕ್ತನಾಗುತ್ತಾನೆ.

೩೫. ರಾಜಾಧಿರಾಜನೆ ! ತರುವಾಯ ನರ್ಮದಾನದಿಯು ಸಮುದ್ರವನ್ನು ಸೇರುವ ಸಂಗಮತೀರ್ಥಕ್ಕೆ ಹೋಗಬೇಕು. ಆ ತೀರ್ಥದಲ್ಲಿ ಜನಾರ್ದನಸ್ವಾಮಿಯು ಸಿದ್ಧಿಯನ್ನು ಹೊಂದಿರುವನು. ಮತ್ತು ಆ ತೀರ್ಥವು ಜಮದಗ್ನಿ ತೀರ್ಥವೆಂದು ಖ್ಯಾತಿಯನ್ನು ಪಡೆದಿದೆ.

ತತ್ರ ಸ್ನಾತ್ವಾ ನರೋ ರಾಜನ್ನರ್ಮದೋದಧಿಸಂಗಮೇ ।
ತ್ರಿಗುಣಂ ಚಾಶ್ವಮೇಧಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೩೬ ॥

ತತೋ ಗಚ್ಛೇತ ರಾಜೇಂದ್ರ ಪಿಂಗಲೇಶ್ವರಮುತ್ತಮಮ್ ।
ತತ್ರ ಸ್ನಾತ್ವಾ ನರೋ ರಾಜನ್ ಬ್ರಹ್ಮಲೋಕೇ ಮಹೀಯತೇ ॥ ೩೭ ॥

ತತ್ರೋಪವಾಸಂ ಯಃ ಕೃತ್ವಾ ಪಶ್ಯೇತ ವಿಮಲೇಶ್ವರಮ್ ।
ಸಪ್ತಜನ್ಮಕೃತಂ ಪಾಪಂ ಹಿತ್ವಾ ಯಾತಿ ಶಿವಾಲಯಮ್ ॥ ೩೮ ॥

ತತೋ ಗಚ್ಛೇತ ರಾಜೇಂದ್ರ ಅಲಿತೀರ್ಥಮನುತ್ತಮಮ್ ।
ಉಪೋಷ್ಯ ರಜನೀಮೇಕಾಂ ನಿಯತೋ ನಿಯತಾಶನಃ ॥ ೩೯ ॥

---

೩೬. ರಾಜನೆ ! ನರ್ಮದಾನದಿ ಸಮುದ್ರಗಳ ಸಂಗಮರೂಪವಾದ ಆ ಮಹಾತೀರ್ಥದಲ್ಲಿ ಮಾನವನು ಸ್ನಾನಮಾಡಬೇಕು. ಅಂತಹ ಮಾನವನು ತ್ರಿಗುಣವಾದ ಅಶ್ವಮೇಧಯಾಗದ ಫಲವನ್ನು ಹೊಂದುತ್ತಾನೆ.

೩೭. ರಾಜನೆ ! ತರುವಾಯ ಪಿಂಗಲೇಶ್ವರವೆಂಬ ಪುಣ್ಯತೀರ್ಥಕ್ಕೆ ಅವಶ್ಯಕವಾಗಿ ಹೋಗಬೇಕು. ರಾಜೇಂದ್ರನೆ ! ಮಾನವನು ಪಿಂಗಲೇಶ್ವರತೀರ್ಥದಲ್ಲಿ ಮಾಡಿದ ಸ್ನಾನ ಪುಣ್ಯಪ್ರಭಾವದಿಂದ ಬ್ರಹ್ಮಲೋಕದಲ್ಲಿ ಮಾನ್ಯನಾಗುತ್ತಾನೆ.

೩೮. ಪಿಂಗಲೇಶ್ವರತೀರ್ಥದಲ್ಲಿ ಯಾವ ಮಾನವನು ಉಪವಾಸವನ್ನು ಮಾಡಿ ವಿಮಲೇಶ್ವರ ಸಂದರ್ಶನವನ್ನು ಮಾಡುವನೋ; ಅವನು ಏಳುಜನ್ಮಗಳಲ್ಲಿ ಮಾಡಿದ ಪಾಪಪುಂಜವನ್ನು ಕಳೆದುಕೊಂಡು ಶಿವಲೋಕವನ್ನು ಹೊಂದುತ್ತಾನೆ.

೩೯. ಮಹಾರಾಜನೆ ! ಮುಂದೆ ನಿರುಪಮವೆನಿಸಿಕೊಂಡಿರುವ ಅಲಿತೀರ್ಥವೆಂಬ ತೀರ್ಥವನ್ನು ಸೇವಿಸಬೇಕು. ಆ ತೀರ್ಥಸನ್ನಿಧಿಯಲ್ಲಿ ನಿಯಮವಂತನೂ ನಿಯತವಾದ ಅಶನವುಳ್ಳವನೂ ಆಗಿ ಒಂದು ರಾತ್ರಿಯಲ್ಲಿ ಉಪವಾಸವನ್ನು ಮಾಡಬೇಕು.

ಅಸ್ಯ ತೀರ್ಥಸ್ಯ ಮಹಾತ್ಮ್ಯಾನ್ಮುಚ್ಯತೇ ಬ್ರಹ್ಮಹತ್ಯಯಾ ॥ ೪೦ ॥

ಏತಾನಿ ತವ ಸಂಕ್ಷೇಪಾತ್ ಪ್ರಾಧಾನ್ಯಾತ್ ಕಥಿತಾನಿ ಚ ।
ನ ಶಕ್ಯಾ ವಿಸ್ತರಾದ್ವಕ್ತುಂ ಸಂಖ್ಯಾ ತೀರ್ಥೇಷು ಪಾಂಡವ ॥ ೪೧ ॥

ಏಷಾ ಪವಿತ್ರಾ ವಿಪುಲಾ ನದೀ ತ್ರೈಲೋಕ್ಯವಿಶ್ರುತಾ ।
ನರ್ಮದಾ ಸರಿತಾಂ ಶ್ರೇಷ್ಠಾ ಮಹಾದೇವಸ್ಯ ವಲ್ಲಭಾ ॥ ೪೨ ॥

ಮನಸಾ ಸಂಸ್ಮರೇದ್ಯಸ್ತು ನರ್ಮದಾಂ ವೈ ಯುಧಿಷ್ಠಿರ ।
ಚಾಂದ್ರಾಯಣಶತಂ ಸಾಗ್ರಂ ಲಭತೇ ನಾತ್ರ ಸಂಶಯಃ ॥ ೪೩ ॥

---

೪೦. ಈ ತೀರ್ಥಸೇವೆಯ ಮಹಿಮೆಯಿಂದ ಬ್ರಹ್ಮಹತ್ಯಾ ಮಹಾಪಾತಕದಿಂದ ಮುಕ್ತನಾಗುತ್ತಾನೆ. ಯುಧಿಷ್ಠಿರನೆ ! ಹೀಗೆ ಮುಖ್ಯವಾಗಿರುವ ಕೆಲವು ತೀರ್ಥಗಳು ಸಂಕ್ಷೇಪವಾಗಿ ನಿನಗೆ ನನ್ನಿಂದ ಹೇಳಲ್ಪಟ್ಟವೆ.

೪೧. ಯುಧಿಷ್ಠಿರರಾಜನೆ ! ನರ್ಮದಾನದಿಯ ತೀರದಲ್ಲಿರುವ ಸಮಸ್ತಪುಣ್ಯತೀರ್ಥಗಳ ಸಂಪೂರ್ಣಸಂಖ್ಯೆಯನ್ನು ವಿಸ್ತಾರವಾಗಿ ಹೇಳಲು ಯಾರಿಗೂ ಸಾಧ್ಯವಿಲ್ಲ.

೪೨. ಪವಿತ್ರವೂ, ವಿಸ್ತಾರವುಳ್ಳದ್ದೂ ಮೂರುಲೋಕಗಳಲ್ಲಿ ಪ್ರಸಿದ್ಧಿಯನ್ನು ಹೊಂದಿರುವುದೂ, ನದಿಗಳಲ್ಲೆಲ್ಲಾ ಉತ್ತಮವೂ ಆದ ಈ ನರ್ಮದಾನದಿಯು ಮಹೇಶ್ವರನಿಗೆ ಅತ್ಯಂತ ಪ್ರಿಯವಾದುದು.

೪೩. ಯುಧಿಷ್ಠಿರಮಹಾರಾಜನೆ ! ಯಾವ ಮಾನವನು ಮಾನಸದಲ್ಲಿ ನರ್ಮದಾನದಿಯನ್ನು ಸ್ಮರಿಸಿಕೊಳ್ಳುವನೊ; ಅವನು ನೂರಾರು ಸಂಖ್ಯೆಯುಷ್ಟು ಚಾಂದ್ರಾಯಣ ವ್ರತಗಳ ಫಲವನ್ನು ಅನುಭವಿಸುತ್ತಾನೆ. ಇದರಲ್ಲಿ ಸಂಶಯವಿಲ್ಲ.

ಅಶ್ರದ್ದಧಾನಾಃ ಪುರುಷಾ ನಾಸ್ತಿಕ್ಯಂ ಘೋರಮಾಶ್ರಿತಾಃ ।
ಪತಂತಿ ನರಕೇ ಘೋರ ಇತ್ಯಾಹ ಪರಮೇಶ್ವರಃ ॥ ೪೪ ॥

ನರ್ಮದಾಂ ಸೇವತೇ ನಿತ್ಯಂ ಸ್ವಯಂ ದೇವೋ ಮಹೇಶ್ವರಃ ।
ತೇನ ಪುಣ್ಯಾ ನದೀ ಜ್ಞೇಯಾ ಬ್ರಹ್ಮಹತ್ಯಾಪಹಾರಿಣೀ ॥ ೪೫ ॥

ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇ
ಪಂಚನವತಿತಮೋಽಧ್ಯಾಯಃ.

---

೪೪. ಶ್ರದ್ಧೆಯಿಲ್ಲದವರೂ, ಕಡುನಾಸ್ತಿಕ್ಯವನ್ನು ಹೊಂದಿದವರೂ, ಆದ ಮಾನವರು ಘೋರವಾದ ನರಕದಲ್ಲಿ ಬಿದ್ದು ಯಾತನೆಯನ್ನು ಅನುಭವಿಸುವರೆಂಬುದು ಪರಮೇಶ್ವರನ ಉಪದೇಶವಾಗಿದೆ.

೪೫. ಸರ್ವೇಶ್ವರನಾದ ಈಶ್ವರನು ತಾನಾಗಿ ಈ ನರ್ಮದಾನದಿಯನ್ನು ಸರ್ವಕಾಲಗಳಲ್ಲಿ ಸೇವಿಸುತ್ತಾನೆ. ಹಾಗೆ ಈಶ್ವರನಿಗೆ ಪ್ರಿಯವಾದುದರಿಂದ ಈ ನದಿಯು ಪವಿತ್ರವೂ, ಬ್ರಹ್ಮಹತ್ಯೆಯನ್ನು ದೂರಮಾಡುವುದೂ ಆಗಿದೆ.

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ತೊಂಭತ್ತೈದನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

# ಕೂರ್ಮಪುರಾಣಂ

---

## ಷಣ್ಣವತಿತಮೋऽಧ್ಯಾಯಃ.

**ಸೂತ ಉವಾಚ :—**

**ಇದಂ ತ್ರೈಲೋಕ್ಯವಿಖ್ಯಾತಂ ತೀರ್ಥಂ ನೈಮಿಷಮುತ್ತಮಮ್ ।**
**ಮಹಾದೇವಪ್ರಿಯತರಂ ಮಹಾಪಾತಕನಾಶನಮ್ ॥ ೧ ॥**

**ಮಹಾದೇವಂ ದಿದೃಕ್ಷೂಣಾಮೃಷೀಣಾಂ ಪರಮೇಷ್ಠಿನಾ ।**
**ಬ್ರಹ್ಮಣಾ ನಿರ್ಮಿತಂ ಸ್ಥಾನಂ ತಪಸ್ತಪ್ತುಂ ದ್ವಿಜೋತ್ತಮಾಃ ॥ ೨ ॥**

---

## ತೊಂಭತ್ತಾರನೆಯ ಅಧ್ಯಾಯವು

೧. ಸೂತಮುನಿಯು ಇಂತೆಂದನು:— ನೈಮಿಷಾರಣ್ಯವೆಂಬ ಉತ್ತಮ ತೀರ್ಥವು ಮೂರುಲೋಕಗಳಲ್ಲಿ ಖ್ಯಾತಿಗೊಂಡಿರುವುದೂ, ಮಹೇಶ್ವರನಿಗೆ ವಿಶೇಷ ವಾಗಿ ಪ್ರಿಯವೂ ಮತ್ತು ಮಹಾಪಾತಕಗಳನ್ನು ನಾಶಮಾಡುವುದೂ ಆಗಿದೆ.

೨. ದ್ವಿಜಶ್ರೇಷ್ಠನೆ! ಪರಮೇಶ್ವರನನ್ನು ಸಂದರ್ಶಿಸಬೇಕೆಂಬ ಅಭಿಲಾಷೆ ಯುಳ್ಳ ಮಹರ್ಷಿಗಳಿಗೆ ಪರಮಪದದಲ್ಲಿರುವ ಬ್ರಹ್ಮದೇವನಿಂದ ಮುನಿಗಳು ತಪ ಶ್ಚರ್ಯೆ ಮಾಡುವುದಕ್ಕೋಸ್ಕರ ಈ ಸ್ಥಾನವು ನಿರ್ಮಿಸಲ್ಪಟ್ಟಿದೆ.

ಮರೀಚಿರಥೋಽತ್ರಿ ಯೇ ವಿಪ್ರಾ ವಸಿಷ್ಠಾಃ ಕ್ರತವಸ್ತಥಾ ।
ಭೃಗವೋಽಂಗಿರಸಃ ಪೂರ್ವಂ ಬ್ರಹ್ಮಾಣಂ ಕಮಲೋದ್ಭವಮ್ ॥ ೩ ॥
ಸಮೇತ್ಯ ಸರ್ವವರದಂ ಚತುರ್ಮೂರ್ತಿಂ ಚತುರ್ಮುಖಮ್ ।
ಪೃಚ್ಛಂತಿ ಪ್ರಣಿಪತ್ಯೈನಂ ವಿಶ್ವಕರ್ಮಾಣಮವ್ಯಯಮ್ ॥ ೪ ॥

ಷಟ್ಕುಲೀಯಾ ಊಚುಃ :—

ಭಗವನ್ ದೇವಮೀಶಾನಂ ತಮೇಕಂ ಕಪರ್ದಿನಮ್ ।
ಕೇನೋಪಾಯೇನ ಪಶ್ಯಾಮೋ ಬ್ರೂಹಿ ದೇವ ನಮಸ್ತವ ॥ ೫ ॥

ಬ್ರಹ್ಮೋವಾಚ :—

ಸತ್ರಂ ಸಹಸ್ರಮಾಸಧ್ವಂ ವಾಙ್ಮನೋದೋಷವರ್ಜಿತಾಃ ।
ದೇಶಂ ಚ ವಃ ಪ್ರವಕ್ಷ್ಯಾಮಿ ಯಸ್ಮಿನ್ ದೇಶೇ ಚರಿಷ್ಯಥ ॥ ೬ ॥

೩. ಪೂರ್ವಕಾಲದಲ್ಲಿ ವಾಸಮಾಡುತ್ತಲಿದ್ದ ಮರೀಚಿ, ವಸಿಷ್ಠ, ಭೃಗು ಅಂಗಿರ, ಪುಲಹ ಮತ್ತು ಕ್ರತು ಎಂಬ ಮಹಾಮುನಿಗಳ ವಂಶೋತ್ಪನ್ನರಾದ ಬ್ರಹ್ಮರ್ಷಿಗಳು ಕಮಲದಲ್ಲಿ ಜನಿಸಿರುವ ಬ್ರಹ್ಮದೇವನನ್ನು ಕೇಳಿಕೊಂಡರು.

೪. ಮುನಿಗಳು ಸರ್ವರೂ ಸೇರಿಕೊಂಡು ಸಮಸ್ತ ವರಗಳನ್ನು ನೀಡುವ ನಾಲ್ಕು ಮೂರ್ತಿಗಳುಳ್ಳ, ನಾಲ್ಕು ಮುಖಗಳಿಂದ ಶೋಭಿಸುವ ವಿಶ್ವಕರ್ಮಗಳಿಗೆ ಅಧಿಪತಿಯಾದ ಮತ್ತು ವ್ಯಯರಹಿತನಾದ ಬ್ರಹ್ಮದೇವನನ್ನು ಪ್ರಾರ್ಥಿಸಿಕೊಂಡರು.

೫. ಆರು ಕುಲಗಳ ಮುನಿಗಳು ಹೀಗೆ ಪ್ರಾರ್ಥಿಸಿದರು :—ಪೂಜ್ಯನಾದ ಬ್ರಹ್ಮದೇವನೆ! ಲೋಕಪ್ರಸಿದ್ಧನೂ, ಜಟಾಧಾರಿಯೂ, ಅದ್ವಿತೀಯನೂ ಮತ್ತು ಸರ್ವೇಶ್ವರನೂ ಆದ ಶಂಕರನನ್ನು ನಾವು ಯಾವ ಉಪಾಯದಿಂದ ನೋಡಬಹುದು. ಅಂತಹ ಉಪಾಯವನ್ನು ಹೇಳು, ನಿನಗೆ ವಂದಿಸುವೆನು.

೬. ಬ್ರಹ್ಮದೇವನು ಇಂತೆಂದನು :—ನೀವು ವಾಕ್ಕು ಮಾನಸಗಳ ದೋಷಗಳಿಂದ ವರ್ಜಿತರಾಗಿ ಸಹಸ್ರ ಸಂವತ್ಸರಗಳವರೆಗೆ ಸತ್ರಯಾಗವನ್ನು ಆಚರಿಸಿರಿ. ಯಾವ ಸ್ಥಳದಲ್ಲಿ ಆ ಸತ್ರವನ್ನು ಆಚರಿಸಬಹುದೊ; ಅಂತಹ ಸ್ಥಳವನ್ನು ನಾನು ನಿಮಗೆ ಹೇಳುತ್ತೇನೆ.

ಮುಕ್ತ್ವಾ ಮನೋಮಯಂ ಚಕ್ರಂ ಸಂಸ್ಪೃಶ್ಯ ತಾನುವಾಚ ಹ ।
ಕ್ಷಿಪ್ತನೇತನ್ಮಯಾ ಚಕ್ರಮನುವ್ರಜತ ಮಾ ಚಿರಮ್ ॥ ೭ ॥

ಯತ್ರಾಸ್ಯ ನೇಮಿಃ ಶೀರ್ಯೇತ ಸ ದೇಶಸ್ತಪಸಃ ಶುಭಃ ।
ತತೋ ಮುಮೋಚ ತಚ್ಚಕ್ರಂ ತೇ ಚ ತತ್ಸಮನುವ್ರಜನ್ ॥ ೮ ॥

ತಸ್ಯ ವೈ ವ್ರಜತಃ ಕ್ಷಿಪ್ರಂ ಯತ್ರ ನೇಮಿರಶೀರ್ಯತ ।
ನೈಮಿಷಂ ತತ್ ಸ್ಮೃತಂ ನಾಮ್ನಾ ಪುಣ್ಯಂ ಸರ್ವತ್ರ ಪೂಜಿತಮ್॥ ೯ ॥

ಸಿದ್ಧಚಾರಣಸಂಪೂರ್ಣಂ ಯಕ್ಷಗಂಧರ್ವಸೇವಿತಮ್ ।
ಸ್ಥಾನಂ ಭಗವತಃ ಶಂಭೋರೇತನ್ನೈಮಿಷ ಮುತ್ತಮಮ್ ॥ ೧೦ ॥

---

೭. ಆಗ ಮನೋಮಯವಾದ ಒಂದು ಚಕ್ರವನ್ನು ಉರುಳಿಸಿ ಆ ಮುನಿಗಳನ್ನು ಸಂಧಿಸಿ ಬ್ರಹ್ಮದೇವನು ಹೇಳಿದನು—ನನ್ನಿಂದ ಉರುಳಿಸಲ್ಪಟ್ಟ ಈ ಮನೋಮಯ ಚಕ್ರವನ್ನು ನೀವು ಹಿಂಬಾಲಿಸಿ ಹೋಗಿರಿ. ವಿಳಂಬಮಾಡಬೇಡಿ.

೮. ಯಾವ ಸ್ಥಳದಲ್ಲಿ ಈ ಚಕ್ರದ ಪಟ್ಟಿಯು ಜೀರ್ಣವಾಗಿ ಬೀಳುವುದೊ, ಆ ಸ್ಥಳವು ತಪಸ್ಸಿಗೆ ಯೋಗ್ಯವೂ, ಮಂಗಳಪ್ರದವೂ ಆಗಿರುವುದು. ಹೀಗೆಂದುಹೇಳಿ ಆ ಚಕ್ರವನ್ನು ಬ್ರಹ್ಮದೇವನು ಬಿಟ್ಟನು. ಮುನಿಗಳು ಅದನ್ನು ಹಿಂಬಾಲಿಸಿ ನಡೆದರು.

೯. ಶೀಘ್ರವಾಗಿ ನಡೆಯುತ್ತಿದ್ದ ಆ ಚಕ್ರದ ಪಟ್ಟಿಯು ಎಲ್ಲಿ ಜೀರ್ಣವಾಯಿತೊ; ಆ ಸ್ಥಳವು ನೈಮಿಷ ಎಂಬ ಯಥಾರ್ಥನಾಮದಿಂದ ಸ್ಮರಿಸಲ್ಪಟ್ಟಿದೆ. ಅದು ಸರ್ವದೇಶಗಳಲ್ಲಿ ಪೂಜ್ಯವೂ ಮತ್ತು ಪವಿತ್ರವೂ ಆಗಿರುವುದು.

೧೦. ಸಿದ್ಧ-ಚಾರಣ ಮುಂತಾದವರಿಂದ ಸಂಪೂರ್ಣವೂ ಯಕ್ಷ-ಗಂಧರ್ವರಿಂದ ಆಶ್ರಯಿಸಲ್ಪಟ್ಟಿರುವುದೂ ಮತ್ತು ಸರ್ವೋತ್ತಮವೂ ಆದ ಈ ನೈಮಿಷ ಅರಣ್ಯವು ಷಡ್ಗುಣೈಶ್ವರ್ಯಸಂಪೂರ್ಣನೂ, ಸುಖಕಾರಕನೂ ಆದ ಈಶ್ವರನ ಸ್ಥಾನವಾಗಿದೆ.

ಅತ್ರ ದೇವಾಃ ಸಗಂಧರ್ವಾಃ ಸಯಕ್ಷೋರಗರಾಕ್ಷಸಾಃ ।
ತಪಸ್ತಪ್ತ್ವಾ ಪುರಾ ದೇವಾ ಲೇಭಿರೇ ಪ್ರವರಾನ್ ವರಾನ್ ॥ ೧೧ ॥

ಇಮಂ ದೇಶಂ ಸಮಾಶ್ರಿತ್ಯ ಷಟ್ಕುಲೀಯಾಃ ಸಮಾಹಿತಾಃ ।
ಸತ್ರೇಣಾರಾಧ್ಯ ದೇವೇಶಂ ದೃಷ್ಟವಂತೋ ಮಹೇಶ್ವರಮ್ ॥ ೧೨ ॥

ಅನ್ನದಾನಂ ತಪಸ್ತಪ್ತಂ ಶ್ರಾದ್ಧಯಾಗಾದಿಕಂ ಚ ಯತ್ ।
ಏಕೈಕಂ ನಾಶಯೇತ್ ಪಾಪಂ ಸಪ್ತಜನ್ಮಕೃತಂ ತಥಾ ॥ ೧೩ ॥

ಅತ್ರ ಪೂರ್ವಂ ಸ ಭಗವಾನ್ನೃಷೀಣಾಂ ಸತ್ರಮಾಸತಾಮ್ ।
ಸ ವೈ ಪ್ರೋವಾಚ ಬ್ರಹ್ಮಾಂಡಂ ಪುರಾಣಂ ಬ್ರಹ್ಮಭಾವಿತಮ್ ॥ ೧೪ ॥

---

೧೧. ಈ ನೈಮಿಷಾರಣ್ಯದಲ್ಲಿ ಪೂರ್ವಕಾಲದಲ್ಲಿ ವಿಹರಣ ಶೀಲವುಳ್ಳ ಗಂಧರ್ವ, ಯಕ್ಷ, ನಾಗ, ರಾಕ್ಷಸ ಮತ್ತು ದೇವತೆಗಳು ತಪವನ್ನು ಆಚರಿಸಿ ಶ್ರೇಷ್ಠವಾದ ವರಗಳನ್ನು ಹೊಂದಿದರು.

೧೨. ಹಾಗು ಸಮಾಧಾನಚಿತ್ತದಿಂದ ಕೂಡಿದ ಷಟ್ಕುಲೀಯರಾದ ಮಹರ್ಷಿಗಳು ಈ ಸ್ಥಳವನ್ನು ಆಶ್ರಯಿಸಿ ಸತ್ರಯಾಗದ ಅನುಷ್ಠಾನದಿಂದ ದೇವಪ್ರಭುವಾದ ಈಶ್ವರನನ್ನು ಆರಾಧಿಸಿ ಸಾಕ್ಷಾತ್ಕರಿಸಿದರು.

೧೩. ಈ ಪವಿತ್ರಕ್ಷೇತ್ರದಲ್ಲಿ ಆಚರಿಸಿದ ಅನ್ನದಾನ, ತಪಶ್ಚರ್ಯೆ, ಶ್ರಾದ್ಧ, ಯಜ್ಞ ಮುಂತಾದ ಸಕಲ ಧರ್ಮಗಳಲ್ಲಿ ಒಂದೊಂದು ಕೂಡ ಏಳು ಜನ್ಮಗಳಲ್ಲಿ ಮಾಡಿರುವ ಪಾತಕಗಳನ್ನು ನಾಶಮಾಡುತ್ತವೆ.

೧೪. ಈ ನೈಮಿಷಾರಣ್ಯದಲ್ಲಿ ಪೂರ್ವದಲ್ಲಿ ಸತ್ರಯಾಗವನ್ನು ಆಚರಿಸುತ್ತಲಿರುವ ಮಹರ್ಷಿಗಳಿಗೆ ಪರಮಪೂಜ್ಯನಾದ ಮಹೇಶ್ವರನು ಪರಬ್ರಹ್ಮಭಾವನೆಯನ್ನು ಉಂಟುಮಾಡುವ ಬ್ರಹ್ಮಾಂಡಪುರಾಣವನ್ನು ಉಪದೇಶಿಸಿರುವನು.

ಅತ್ರ ದೇವೋ ಮಹಾದೇವೋ ರುದ್ರಾಣ್ಯಾ ಕಿಲ ವಿಶ್ವದೃಕ್ ।
ರಮತೇಽದ್ಯಾಪಿ ಭಗವಾನ್ ಪ್ರಮಥೈಃ ಪರಿವಾರಿತಃ ॥ ೧೫ ॥

ಅತ್ರ ಪ್ರಾಣಾನ್ ಪರಿತ್ಯಜ್ಯ ನಿಯಮೇನ ದ್ವಿಜಾತಯಃ ।
ಬ್ರಹ್ಮಲೋಕಂ ಗಮಿಷ್ಯಂತಿ ಯತ್ರ ಗತ್ವಾ ನ ಜಾಯತೇ ॥ ೧೬ ॥

ಅನ್ಯಚ್ಚ ತೀರ್ಥಪ್ರವರಂ ಜಾಪ್ಯೇಶ್ವರಮಿತಿ ಶ್ರುತಮ್ ।
ಜಜಾಪ ರುದ್ರಮನಿಶಂ ಯತ್ರಾನಂದೀ ಮಹಾಗಣಃ ॥ ೧೭ ॥

ಪ್ರೀತಸ್ತಸ್ಯ ಮಹಾದೇವೋ ದೇವ್ಯಾ ಸಹ ಪಿನಾಕಧೃಕ್ ।
ದದಾವಾತ್ಮಸಮಾನತ್ವಂ ಮೃತ್ಯುವಂಚನಮೇವ ಚ ॥ ೧೮ ॥

---

೧೫. ಮಹಾದೇವನೂ, ಸರ್ವಜ್ಞನೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ಶಂಕರನು ಪ್ರಮಥಗಣಗಳ ಪರಿವಾರದಿಂದ ಕೂಡಿ ಪಾರ್ವತೀದೇವಿಯೊಡನೆ ಈಗಲೂ ಈ ಕ್ಷೇತ್ರದಲ್ಲಿ ರಮಿಸುತ್ತಿರುವನು.

೧೬. ದ್ವಿಜರು ನಿಯಮವಂತರಾಗಿದ್ದು ಈ ಕ್ಷೇತ್ರದಲ್ಲಿ ಪ್ರಾಣವನ್ನು ಪರಿತ್ಯಾಗ ಮಾಡಿದರೆ ಬ್ರಹ್ಮಲೋಕವನ್ನು ಹೊಂದುತ್ತಾರೆ. ಅಲ್ಲಿಂದ ಕ್ರಮವಾಗಿ ಕೈವಲ್ಯವನ್ನು ಹೊಂದುವುದರಿಂದ ಅಲ್ಲಿಂದ ಮತ್ತೆ ಜನ್ಮವೆತ್ತುವುದಿಲ್ಲ.

೧೭. ಜಾಪ್ಯೇಶ್ವರವೆಂದು ನಾಮಾಂಕಿತವಾಗಿ ಪ್ರಸಿದ್ಧವಾಗಿರುವ ಮತ್ತೊಂದು ಉತ್ತಮತೀರ್ಥವು ಇರುವುದು. ಆ ತೀರ್ಥದಲ್ಲಿ ಆನಂದಪೂರ್ಣನಾಗಿ ಒಂದು ಗಣವು ಸಂತತವಾಗಿ ರುದ್ರನನ್ನು ಜಪಿಸಿದನು.

೧೮. ಪಿನಾಕಾಯುಧವನ್ನು ಧರಿಸಿದ ಮಹೇಶ್ವರನು ದೇವಿಯೊಡನೆ ಅವನ ವಿಷಯದಲ್ಲಿ ಪ್ರಸನ್ನನಾಗಿ ಅವನಿಗೆ ತನ್ನ ಸಾಮ್ಯವನ್ನೂ, ಮೃತ್ಯು ವಂಚನೆಯಿಂದ ಅಮರತ್ವವನ್ನೂ ಕೊಟ್ಟನು.

ಅಭೂದೃಷಿಃ ಸ ಧರ್ಮಾತ್ಮಾ ಶಿಲಾದೋ ನಾಮ ಧರ್ಮವಿತ್ ।
ಆರಾಧಯನ್ಮಹಾದೇವಂ ಪ್ರಸಾದಾರ್ಥಂ ವೃಷಧ್ವಜಮ್ ॥ ೧೯ ॥

ತಸ್ಯ ವರ್ಷಸಹಸ್ರಾಂತೇ ತಪ್ಯಮಾನಸ್ಯ ವಿಶ್ವಧೃಕ್ ।
ಶರ್ವಃ ಸೋಮೋ ಗಣವೃತೋ ವರದೋಽಸ್ಮೀತ್ಯಭಾಷತ ॥ ೨೦ ॥

ಸ ವವ್ರೇ ವರಮೀಶಾನಂ ವರೇಣ್ಯಂ ಗಿರಿಜಾಪತಿಮ್ ।
ಅಯೋನಿಜಂ ಮೃತ್ಯುಹೀನಂ ಯಾಚೇ ಪುತ್ರಂ ತ್ವಯಾ ಸಮಮ್ ॥

ತಥಾಸ್ತ್ವಿತ್ಯಾಹ ಭಗವಾನ್ ದೇವ್ಯಾ ಸಹ ಮಹೇಶ್ವರಃ ।
ಪಶ್ಯತಸ್ತಸ್ಯ ವಿಪ್ರರ್ಷೇರಂತರ್ಧಾನಂ ಗತೋ ಹರಃ ॥ ೨೨ ॥

---

೧೯. ಧರ್ಮಾಚರಣಶೀಲವುಳ್ಳ ಆ ಗಣವು ಧರ್ಮಜ್ಞನೂ ಶಿಲಾದ ಎಂಬ ನಾಮಾಂಕನವುಳ್ಳವನೂ ಆದ ಮುನಿಯಾಗಿ ಜನಿಸಿದನು. ಆ ಮುನಿಯು ವೃಷಭ ಚಿಹ್ನದಿಂದ ಅಲಂಕರಿಸಲ್ಪಟ್ಟವನೂ ದೇವೋತ್ತಮನೂ ಆದ ಶಂಕರನನ್ನು ಅವನ ಅನುಗ್ರಹಲಾಭಕ್ಕೋಸ್ಕರವಾಗಿ ಆರಾಧಿಸಿದನು.

೨೦. ಶಿಲಾದಮುನಿಯು ತಪಸ್ಸನ್ನು ಆಚರಿಸುತ್ತ ಸಹಸ್ರ ಸಂವತ್ಸರಗಳು ಕಳೆದ ತರುವಾಯ ವಿಶ್ವವನ್ನು ಧರಿಸಿದ ಶಂಕರನು ಪ್ರಮಥ ಪರಿವಾರದಿಂದ ಕೂಡಿ ದೇವಿಯೊಡನೆ ಪ್ರತ್ಯಕ್ಷನಾಗಿ ಬಂದು ಮುನಿಗೆ ವರವನ್ನು ನೀಡಲು ಬಂದಿರುವೆನೆಂದು ಹೇಳಿದನು.

೨೧. ಆಗ ಶಿಲಾದಮುನಿಯು ಭಕ್ತರಿಗೆ ಸೇವ್ಯನೂ, ಗಿರಿಜೆಯ ರಮಣನೂ ಆದ ಈಶ್ವರನನ್ನು ಕುರಿತು ಈ ವರವನ್ನು ಕೇಳಿದನು:— ಸ್ವಾಮಿಯೆ ! ಅಯೋನಿಜನೂ, ಅಮರನೂ, ಮತ್ತು ಪ್ರಭಾವದಲ್ಲಿ ನಿನಗೆ ತುಲ್ಯನೂ ಆದ ಪುತ್ರನನ್ನು ಪ್ರಾರ್ಥಿಸುವೆನು ಎಂದು ಹೇಳಿದನು.

೨೨. ಷಡ್ಗುಣೈಶ್ವರ್ಯಸಂಪನ್ನನಾದ ಮಹೇಶ್ವರನು ಹಾಗೆ ಆಗಲಿ ಎಂದು ಪಾರ್ವತೀದೇವಿಯೊಡನೆ ಹೇಳಿ ಅನುಗ್ರಹಿಸಿದನು. ಮತ್ತು ಈಶ್ವರನು ಬ್ರಹ್ಮರ್ಷಿಯಾದ ಆ ಶಿಲಾದಮುನಿಯು ನೋಡುತ್ತಿರುವಂತೆ ಅದೃಶ್ಯನಾದನು.

ತತೋ ಯುಯೋಜ ತಾಂ ಭೂಮಿಂ ಶಿಲಾದೋ ಧರ್ಮವಿತ್ತಮಃ ।
ಚಕರ್ಷ ಲಾಂಗಲೇನೋರ್ವೀಂ ಭಿತ್ತ್ವಾದೃಶ್ಯತ ಶೋಭನಃ　॥ ೨೩ ॥

ಸಂವರ್ತಕೋಽನಲಪ್ರಖ್ಯಃ ಕುಮಾರಃ ಪ್ರಹಸನ್ನಿಹ ।
ರೂಪಲಾವಣ್ಯಸಂಪನ್ನಸ್ತೇಜಸಾ ಭಾಸಯನ್ ದಿಶಃ　॥ ೨೪ ॥

ಕುಮಾರತುಲ್ಯೋಽಪ್ರತಿಮೋ ಮೇಘಗಂಭೀರಯಾ ಗಿರಾ ।
ಶಿಲಾದಂ ತಾತ ತಾತೇತಿ ಪ್ರಾಹ ನಂದೀ ಪುನಃ ಪುನಃ　॥ ೨೫ ॥

ತಂ ದೃಷ್ಟ್ವಾ ನಂದನಂ ಜಾತಂ ಶಿಲಾದಃ ಪರಿಷಸ್ವಜೇ ।
ಮುನೀನಾಂ ದರ್ಶಯಾಮಾಸ ತತ್ರಾಶ್ರಮನಿವಾಸಿನಾಮ್　॥ ೨೬ ॥

---

೨೩. ತರುವಾಯ ಧರ್ಮಜ್ಞರಲ್ಲಿ ಶ್ರೇಷ್ಠನಾದ ಆ ಶಿಲಾದಮುನಿಯು ಆ ಭೂಮಿಯು ಸಂಗವನ್ನು ಹೊಂದಿ ನೇಗಿಲದಿಂದ ಭೂಮಿಯನ್ನು ಉತ್ತನು. ಮತ್ತು ಭೂಮಿಯನ್ನು ಭೇದಿಸಿ ನೋಡಲಾಗಿ ಸುಂದರವಾದ ಶಿಶುವು ಕಾಣಿಸಿತು.

೨೪. ಪ್ರಲಯಕಾಲದ ಅಗ್ನಿಯಂತೆ ಜ್ವಲಿಸುವವನೂ, ರೂಪ-ಲಾವಣ್ಯಗಳಿಂದ ಕೂಡಿದವನೂ, ತೇಜಸ್ಸಿನಿಂದ ದಶದಿಕ್ಕುಗಳನ್ನು ಉಜ್ವಲಿಸುವವನೂ ಆದ ಕುಮಾರನು ನಗುಮುಖದಿಂದ ಇರುವುದು ಕಾಣಿಸಿತು.

೨೫. ಕುಮಾರಸ್ವಾಮಿಗೆ ತುಲ್ಯನಾದ ನಂದಿ ಎಂಬ ಪುತ್ರನು ಮೇಘಧ್ವನಿಯಂತೆ ಗಂಭೀರವಾದ ವಚನದಿಂದ ಶಿಲಾದಮುನಿಯನ್ನು ತಂದೆ, ತಂದೆ ಎಂದು ಮತ್ತೆ ಮತ್ತೆ ಕೂಗಿಕೊಂಡನು.

೨೬. ಶಿಲಾದ ಮುನಿಯು ಈ ರೀತಿಯಾಗಿ ಜನಿಸಿರುವ ಆ ಪುತ್ರನನ್ನು ಕಂಡು ಆಲಿಂಗಿಸಿಕೊಂಡನು. ಮತ್ತು ಅಲ್ಲಿ ಆಶ್ರಮಗಳಲ್ಲಿ ವಾಸಮಾಡಿಕೊಂಡಿರುವ ಮುನಿಜನರಿಗೆ ಪುತ್ರನನ್ನು ತೋರಿಸಿದನು.

ಜಾತಕರ್ಮಾದಿಕಾಃ ಸರ್ವಾಃ ಕ್ರಿಯಾಸ್ತಸ್ಯ ಚಕಾರ ಹ ।
ಉಪನೀಯ ಯಥಾಶಾಸ್ತ್ರಂ ವೇದಮಧ್ಯಾಪಯತ್ ಸ್ವಯಮ್ ॥ ೨೭ ॥

ಅಧೀತವೇದೋ ಭಗವಾನ್ನಂದೀ ಮತಿಮನುತ್ತಮಾಮ್ ।
ಚಕ್ರೇ ಮಹೇಶ್ವರಂ ದೃಷ್ಟ್ವಾ ಜೇಷ್ಯೇ ಮೃತ್ಯುಮಿವ ಪ್ರಭುಮ್ ॥ ೨೮ ॥

ಸ ಗತ್ವಾ ಸಾಗರಂ ಪುಣ್ಯಮೇಕಾಗ್ರಃ ಶ್ರದ್ಧಯಾನ್ವಿತಃ ।
ಜಜಾಪ ರುದ್ರಮನಿಶಂ ಮಹೇಶಾಸಕ್ತಮಾನಸಃ ॥ ೨೯ ॥

ತಸ್ಯ ಕೋಟ್ಯಾಂ ಚ ಪೂರ್ಣಾಯಾಂ ಶಂಕರೋ ಭಕ್ತವತ್ಸಲಃ ।
ಆಗತಃ ಸರ್ವಸಗಣೋ ವರದೋಽಸ್ಮೀತ್ಯಭಾಷತ ॥ ೩೦ ॥

---

೨೭. ಮತ್ತು ಆ ಕುಮಾರನಿಗೆ ಜಾತಕರ್ಮ ಮುಂತಾದ ಸಕಲ ಸಂಸಾರ ಕರ್ಮಗಳನ್ನು ನೆರವೇರಿಸಿದನು. ಮತ್ತು ಶಾಸ್ತ್ರವಿಧಿಯಂತೆ ಅವನಿಗೆ ಉಪನಯನವನ್ನು ಮಾಡಿ ತಾನೆ ವೇದವನ್ನು ಕಲಿಸಿಕೊಟ್ಟನು.

೨೮. ವೇದಾಧ್ಯಯನವನ್ನು ನೆರವೇರಿಸಿದವನೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ನಂದಿಯು ಪ್ರಭುವಾದ ಮಹೇಶ್ವರನನ್ನು ಸಾಕ್ಷಾತ್ಕರಿಸಿ ಮೃತ್ಯುವನ್ನು ಗೆದ್ದಂತೆ ಜಯಶಾಲಿಯಾಗುವೆನೆಂಬ ಸರ್ವೋತ್ತಮವಾದ ಸಂಕಲ್ಪವನ್ನು ಮಾಡಿದನು.

೨೯. ಅವನು ಪವಿತ್ರ ಸಮುದ್ರತೀರಕ್ಕೆ ಹೋಗಿ ಏಕಾಗ್ರತೆಯುಳ್ಳವನೂ, ಮಹೇಶ್ವರನಲ್ಲಿ ಅಂಟಿಹೋದ ಮಾನಸವುಳ್ಳವನೂ ಮತ್ತು ಶ್ರದ್ಧೆಯಿಂದ ಕೂಡಿದವನೂ ಆಗಿ ಸಂತತವಾಗಿ ರುದ್ರನನ್ನು ಜಪಮಾಡಿದನು.

೩೦. ಅವನ ರುದ್ರಪಾರಾಯಣದ ಆವೃತ್ತಿಯು ಒಂದು ಕೋಟಿ ಸಂಖ್ಯೆಯಷ್ಟು ಪೂರ್ತಿಯಾಗಲು ಭಕ್ತರಲ್ಲಿ ಪ್ರೇಮಿಯಾದ ಶಂಕರನು ತನ್ನ ಪರಿವಾರದೊಡನೆ ಎದುರಿಗೆ ಬಂದು ವರವನ್ನು ಕೊಡಲು ಬಂದಿರುವೆನೆಂದು ಹೇಳಿದನು.

ಸ ವವ್ರೇ ಪುನರೇವೇಶಂ ಜಪೇಯಂ ಕೋಟಿಮೀಶ್ವರಸ್ |
ಭವದಾಹಂ ಮಹಾದೇವಂ ದೇಹೀತಿ ಪರಮೇಶ್ವರಮ್ || ೩೧ ||

ಏವಮಸ್ತ್ವಿತಿ ಸಂಪ್ರೋಚ್ಯ ದೇವೋಽಪ್ಯಂತರಧೀಯತ |
ಜಜಾಪ ಕೋಟಿಂ ಭಗವಾನ್ ಭೂಯಸ್ತದ್ಗತಮಾನಸಃ || ೩೨ ||

ದ್ವಿತೀಯಾಯಾಂ ಚ ಕೋಟ್ಯಾಂ ವೈ ಪೂರ್ಣಾಯಾಂ ಚ ವೃಷಧ್ವಜಃ |
ಆಗತ್ಯ ವರದೋಽಸ್ಮೀತಿ ಪ್ರಾಹ ಭೂತಗಣೈರ್ವೃತಃ || ೩೩ ||

ತೃತೀಯಾಂ ಜಪ್ತುಮಿಚ್ಛಾಮಿ ಕೋಟಿಂ ಭೂಯೋಽಪಿ ಶಂಕರಃ |
ತಥಾಸ್ತ್ವಿತ್ಯಾಹ ವಿಶ್ವಾತ್ಮಾ ದೇವ್ಯಾ ಚಾಂತರಧೀಯತ || ೩೪ ||

---

೩೧. ಆಗ ಆ ನಂದಿಯು ಈಶ್ವರನಲ್ಲಿ ಈ ವರವನ್ನು ಪ್ರಾರ್ಥಿಸಿಕೊಂಡ... ನಾನು ಮತ್ತೆ ಒಂದು ಕೋಟಿಯಷ್ಟು ರುದ್ರಜಪವನ್ನು ಮಾಡುವೆನು. ಅದು ... ವ ತರುವಾಯ ನಿನ್ನಿಂದ ನಾನು ಅನುಗ್ರಹಿಸಲ್ಪಡಬೇಕು. ಹೀಗೆಂಬುದಾಗಿ ದೇವೋತ್ತಮನಾದ ಪರಮೇಶ್ವರನಲ್ಲಿ ಪ್ರಾರ್ಥಿಸಿದನು.

೩೨. ಈಶ್ವರನು ಕೂಡ " ಹಾಗೆ ಆಗಲಿ " ಹೀಗೆಂದು ಹೇಳಿ ಅಂತರ್ಧಾನವನ್ನು ಹೊಂದಿದನು. ಪರಮಶಕ್ತಿಯಿಂದ ಕೂಡಿದ ನಂದಿಯು ಮತ್ತೆ ಈಶ್ವರನಲ್ಲಿ ಆಸಕ್ತವಾದ ಮಾನಸವುಳ್ಳವನಾಗಿ ಒಂದು ಕೋಟಿ ಆವೃತ್ತಿಯಾಗಿ ರುದ್ರವನ್ನು ಜಪಿಸಿದನು.

೩೩. ಹಾಗೆ ಎರಡನೆಯ ಸಲ ಒಂದು ಕೋಟಿ ಆವೃತ್ತಿಯು ಪೂರ್ತಿಯಾಗಿ ಮುಗಿಯಲು ವೃಷಭಾಂಕಿತವಾದ ಧ್ವಜವುಳ್ಳ ಈಶ್ವರನು ತನ್ನ ಭೂತವೃಂದಪರಿವಾರದ ಸಂಗಡ ಬಂದು ವರವನ್ನು ಕೊಡುವೆನೆಂದು ಹೇಳಿದನು.

೩೪. ಶಂಕರನೇ ! ಮೂರನೆಯ ಕೋಟಿ ಸಂಖ್ಯೆಯ ರುದ್ರಾವೃತ್ತಿಯನ್ನು ಮತ್ತೆ ಜಪಿಸಲು ಇಷ್ಟವುಳ್ಳವನಾಗಿದ್ದೇನೆ. ಎಂದು ನಂದಿಯು ಕೇಳಲು ವಿಶ್ವರೂಪಿಯಾದ ಪರಮೇಶ್ವರನು ಹಾಗೆ ಆಗಲಿ ಎಂದು ಹೇಳಿ ದೇವಿಯೊಡನೆ ಅಂತರ್ಧಾನವನ್ನು ಹೊಂದಿದನು.

ಕೋಟಿತ್ರಯೇಽಥ ಸಂಪೂರ್ಣೇ ದೇವಃ ಪ್ರೀತಮನಾ ಭೃಶಮ್ ।
ಆಗತ್ಯ ವರದೋಽಸ್ಮೀತಿ ಪ್ರಾಹ ಭೂತಗಣೈರ್ವೃತಃ ॥ ೩೫ ॥

ಜಪೇಯಂ ಕೋಟಿಮನ್ಯಾಂ ವೈ ಭೂಯೋಽಪಿ ತವ ತೇಜಸಾ ।
ಇತ್ಯುಕ್ತೇ ಭಗವಾನಾಹ ನ ಜಪ್ತವ್ಯಂ ತ್ವಯಾ ಪುನಃ ॥ ೩೬ ॥

ಅಮರೋ ಜರಯಾ ತ್ಯಕ್ತೋ ಮಮ ಪಾರ್ಶ್ವೇ ಗತಃ ಸದಾ ।
ಮಹಾಗಣಪತಿರ್ದೇವ್ಯಾಃ ಪುತ್ರೋ ಭವ ಮಹೇಶ್ವರಃ ॥ ೩೭ ॥

ಯೋಗೇಶ್ವರೋ ಮಹಾಯೋಗೀ ಗಣಾನಾಮೀಶ್ವರೇಶ್ವರಃ ।
ಸರ್ವಲೋಕಾಧಿಪಃ ಶ್ರೀಮಾನ್ ಸರ್ವಯಜ್ಞಮಯೋ ಹಿತಃ ॥ ೩೮ ॥

---

೩೫. ಮೂರು ಕೋಟಿ ಸಂಖ್ಯೆಯಷ್ಟು ಆವೃತ್ತಿ ರುದ್ರಜಪವು ಪೂರ್ಣವಾದ ಮೇಲೆ ಈಶ್ವರನು ಅತಿಶಯವಾಗಿ ಸಂತುಷ್ಟವಾದ ಮಾನಸವುಳ್ಳವನಾಗಿ ಭೂತ ಸಂಘದಿಂದ ಕೂಡಿ ಬಂದು ವರಕೊಡುವೆನೆಂದು ಹೇಳಿದನು.

೩೬. ಸ್ವಾಮಿಯೆ ! ನಿನ್ನ ತೇಜೋಬಲ ಸಹಾಯದಿಂದ ಇನ್ನೊಂದು ಕೋಟಿ ರುದ್ರಾವೃತ್ತಿಯನ್ನು ಮತ್ತೆ ಜಪಿಸುವೆನು. ಹೀಗೆಂದು ನಂದಿಯು ಹೇಳಲು ಈಶ್ವರನು ಮತ್ತೆ ನೀನು ಜಪಮಾಡುವುದು ಬೇಡ ಎಂದು ಹೇಳಿದನು.

೩೭. ನೀನು ಅಮರನೂ, ಜರೆಯಿಂದ ವರ್ಜಿತನೂ, ಸರ್ವಕಾಲಗಳಲ್ಲಿಯೂ ನನ್ನ ಪಾರ್ಶ್ವದಲ್ಲಿರುವವನೂ, ಮಹತ್ತಾದ ಗಣ ಸಂಘಕ್ಕೆ ಅಧಿಪತಿಯೂ ಸರ್ವಶಕ್ತಿ ಸಮೇತನೂ ಮತ್ತು ದೇವಿಗೆ ಪುತ್ರನೂ ಆಗಿದ್ದೀಯೆ.

೩೮. ಮತ್ತು ನೀನು ಯೋಗೇಶ್ವರನೂ ಮಹಾಯೋಗಿಯೂ, ಗಣಗಳ ಅಧಿಪತಿಗಳಿಗೆಲ್ಲ ಅಧಿಪತಿಯೂ, ಸರ್ವ ಲೋಕಗಳಿಗೆ ಅಧಿಪನೂ, ಶ್ರೀಮಂತನೂ, ಸರ್ವಯಜ್ಞಸ್ವರೂಪನೂ ಮತ್ತು ಹಿತಕರನೂ ಆಗಿದ್ದೀಯೆ.

ಜ್ಞಾನಂ ತನ್ಮಾಮಕಂ ದಿವ್ಯಂ ಹಸ್ತಾಮಲಕಸಂಜ್ಞಿತಮ್ ।
ಅಭೂತಸಂಪ್ಲವಸ್ಥಾಯೀ ತತೋ ಯಾಸ್ಯಸಿ ತತ್ಪರಮ್ ॥ ೩೯ ॥

ಏತದುಕ್ತ್ವಾ ಮಹಾದೇವೋ ಗಣಾನಾಹೂಯ ಶಂಕರಃ ।
ಅಭಿಷೇಕೇಣ ಯುಕ್ತೇನ ನಂದೀಶ್ವರಮಯೋಜಯತ್ ॥ ೪೦ ॥

ಉದ್ವಾಹಯಾಮಾಸ ಚ ತಂ ಸ್ವಯಮೇವ ಪಿನಾಕಧೃಕ್ ।
ಮರುತಾಂ ಚ ಶುಭಾಂ ಕನ್ಯಾಂ ಸ್ವಯಮೇತಿ ಚ ವಿಶ್ರುತಾಮ್॥ ೪೧ ॥

ಏತಜ್ಜಪ್ಯೇಶ್ವರಂ ಸ್ಥಾನಂ ದೇವದೇವಸ್ಯ ಶೂಲಿನಃ ।
ಯತ್ರ ತತ್ರಮೃತೋ ಮರ್ತ್ಯೋ ರುದ್ರಲೋಕೇ ಮಹೀಯತೇ ॥೪೨॥

---

೩೯. ಮಹೇಶ್ವರನಾದ ನನ್ನ ಸಂಬಂಧವಾದ ದಿವ್ಯಜ್ಞಾನವು ನಿನಗೆ ಕರತಲಾಮಲಕದಂತೆ ಇರುವುದು. ನೀನು ಪ್ರಲಯಪರ್ಯಂತವಾಗಿ ನಿನ್ನ ಕರ್ಮಾಧಿಕಾರದಲ್ಲಿದ್ದು ತರುವಾಯ ಪರಮಪದವನ್ನು ಹೊಂದಿತ್ತೀಯೆ.

೪೦. ದೇವತಾಪ್ರಭುವಾದ ಶಂಕರನು ಈ ವಚನವನ್ನು ಹೇಳಿ ತನ್ನ ಗಣ ಪರಿವಾರವನ್ನು ಕರೆದು ಪ್ರಭುತ್ವಾಧಿಕಾರಕ್ಕೆ ಯೋಗ್ಯವಾದ ಪಟ್ಟಾಭಿಷೇಕವನ್ನು ನಂದೀಶ್ವರನಿಗೆ ಕಲ್ಪಿಸಿದನು.

೪೧. ಪಿನಾಕಧಾರಿಯಾದ ಶಂಕರನು ತಾನಾಗಿಯೇ ವಿಶ್ವತ್ವವನ್ನು ಹೊಂದುವ ಮರುದ್ದೇವತೆಗಳ ಮಾನಸಕನ್ಯೆಯನ್ನು ತಂದು ನಂದೀಶ್ವರನಿಗೆ ತಾನೆ ವಿವಾಹವನ್ನು ಮಾಡಿಸಿದನು.

೪೨ ಇಂತಹ ಮಹಿಮೆಯುಳ್ಳ ಈ ಜಪ್ಯೇಶ್ವರ ಸ್ಥಾನವು ದೇವೋತ್ತಮನೂ ತ್ರಿಶೂಲಧಾರಿಯೂ ಆದ ಶಂಕರನ ಸನ್ನಿಧಿಯಿಂದ ಕೂಡಿದೆ. ಈ ಕ್ಷೇತ್ರದಲ್ಲಿ ಯಾವ ಭಾಗದಲ್ಲಿ ಮರಣಹೊಂದಿದರೂ ಮಾನವನು ರುದ್ರಲೋಕಕ್ಕೆ ಹೋಗಿ ಪೂಜ್ಯನಾಗುತ್ತಾನೆ.

ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇ
ಷಣ್ಣವತಿತಮೋಽಧ್ಯಾಯಃ.

---

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ತೊಂಭತ್ತಾರನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

# ಕೂರ್ಮಪುರಾಣಂ



## ಸಪ್ತನವತಿತಮೋಽಧ್ಯಾಯಃ.

ಸೂತ ಉವಾಚ ;—

ಅನ್ಯಚ್ಚ ತೀರ್ಥಪ್ರವರಂ ಜಪ್ಯೇಶ್ವರಸಮೀಪತಃ ।
ನಾಮ್ನಾ ಪಂಚನದಂ ಪುಣ್ಯಂ ಸರ್ವಪಾಪಪ್ರಣಾಶನಮ್ ॥ ೧ ॥

ತ್ರಿರಾತ್ರಮುಷಿತಸ್ತತ್ರ ಪೂಜಯಿತ್ವಾ ಮಹೇಶ್ವರಮ್ ।
ಸರ್ವಪಾಪವಿಶುದ್ಧಾತ್ಮಾ ರುದ್ರಲೋಕೇ ಮಹೀಯತೇ ॥ ೨ ॥

---

## ತೊಂಭತ್ತೇಳನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು :— ಈ ಜಪ್ಯೇಶ್ವರ ತೀರ್ಥದ ಸನ್ನಿಧಿಯಲ್ಲಿ ಸಮಸ್ತ ಪಾಪಗಳನ್ನು ನಾಶಗೊಳಿಸುವುದೂ, ಪವಿತ್ರವೂ, ಪಂಚನದ ತೀರ್ಥ ಎಂಬ ನಾಮಾಂಕಿತವೂ ಆದ ಮತ್ತೊಂದು ತೀರ್ಥವು ಇರುವುದು.

೨. ಆ ಪಂಚನದತೀರ್ಥದಲ್ಲಿ ತ್ರಿರಾತ್ರೋಪವಾಸವನ್ನು ಮಾಡಿ ಮಹೇಶ್ವರನನ್ನು ಪೂಜೆಮಾಡಿದ ಮಾನವನು ಸಮಸ್ತ ಪಾಪಧ್ವಂಸದಿಂದ ಶುದ್ಧವಾದ ಆತ್ಮವುಳ್ಳವನಾಗಿ ರುದ್ರಲೋಕದಲ್ಲಿ ಪೂಜ್ಯನಾಗುತ್ತಾನೆ.

ಅನ್ಯಚ್ಚ ತೀರ್ಥಪ್ರವರಂ ಶಕ್ರಸ್ಯಾಮಿತತೇಜಸಃ ।
ಮಹಾಭೈರವಮಿತ್ಯುಕ್ತಂ ಮಹಾಪಾತಕನಾಶನಮ್ ॥ ೩ ॥

ತೀರ್ಥಾನಾಂ ಚ ಪರಂ ತೀರ್ಥಂ ವಿತಸ್ತಾ ಪರಮಾ ನದೀ ।
ಸರ್ವಪಾಪಹರಾ ಪುಣ್ಯಾ ಸ್ವಯಮೇವ ಗಿರೀಂದ್ರಜಾ ॥ ೪ ॥

ತೀರ್ಥಂ ಪಂಚತಪೋ ನಾಮ ಶಂಭೋರಮಿತತೇಜಸಃ ।
ಯತ್ರ ದೇವಾಧಿದೇವೇನ ಶಕ್ರಾರ್ಥೇ ಪೂಜಿತೋ ಭವಃ ॥ ೫ ॥

ಪಿಂಡದಾನಾದಿಕಂ ತತ್ರ ಪ್ರೇತ್ಯಾನಂತಫಲಪ್ರದಮ್ ।
ಮೃತಸ್ತತ್ರಾಥ ನಿಯಮಾದ್ಬ್ರಹ್ಮಲೋಕೇ ಮಹೀಯತೇ ॥ ೬ ॥

---

೩. ಅಪಾರವಾದ ಮಹಿಮೆಯುಳ್ಳ ಇಂದ್ರನ ಸಾನ್ನಿಧ್ಯವುಳ್ಳ ಮತ್ತೊಂದು ಪುಣ್ಯತೀರ್ಥವು ಇರುವುದು. ಮಹಾಭೈರವತೀರ್ಥವೆಂದು ಕರೆಯಲ್ಪಟ್ಟ ಆ ತೀರ್ಥವು ಸರ್ವ ಪಾತಕಗಳನ್ನು ಭಂಜನಮಾಡುವುದು.

೪. ವಿತಸ್ತಾ ಎಂಬ ಸಂಜ್ಞೆಯಿಂದ ಕರೆಯಲ್ಪಡುವ ಶ್ರೇಷ್ಠವಾದ ನದಿಯು ತೀರ್ಥಗಳಲ್ಲಿ ಉತ್ತಮವಾದ ತೀರ್ಥವಾಗಿದೆ. ಪರ್ವತರಾಜನಿಂದ ಹುಟ್ಟಿದ ಆ ನದಿಯು ತಾನಾಗಿ ಪವಿತ್ರವೂ, ಸರ್ವಪಾಪನಿಯಾಮಕವೂ ಆಗಿದೆ.

೫ ಅಪಾರವಾದ ಪ್ರಭಾವವುಳ್ಳ ಶಂಕರನಿಗೆ ಪ್ರಿಯವಾದ ಪಂಚತಪ ಎಂಬ ಮತ್ತೊಂದು ತೀರ್ಥವು ಇರುವುದು. ಅಲ್ಲಿ ದೇವಾಧಿಪತಿಯಾದ ಬ್ರಹ್ಮದೇವನಿಂದ ಇಂದ್ರನಿಗೋಸ್ಕರ ದೇವನು ಆರಾಧಿಸಲ್ಪಟ್ಟಿರುವನು.

೬. ಆ ತೀರ್ಥದಲ್ಲಿ ಮಾಡಿದ ಪಿಂಡದಾನಾದಿ ಕರ್ಮಗಳಿಂದ ಮರಣಾನಂತರ ಅನಂತ ಫಲಗಳನ್ನು ಹೊಂದುತ್ತಾನೆ. ಅಲ್ಲಿ ನಿಯಮವಂತನಾಗಿದ್ದು ಮರಣವನ್ನು ಹೊಂದಿದ ಮಾನವನು ಬ್ರಹ್ಮಲೋಕದಲ್ಲಿ ಪೂಜ್ಯನಾಗುತ್ತಾನೆ.

ಕಾಯಾವರೋಹಣಂ ನಾಮ ಮಹಾದೇವಾಲಯಂ ಶುಭಮ್ ।
ಯತ್ರ ಮಾಹೇಶ್ವರಾ ಧರ್ಮಾ ಮುನಿಭಿಃ ಸಂಪ್ರವರ್ತಿತಾಃ ॥ ೭ ॥

ಶ್ರಾದ್ಧಂ ದಾನಂ ತಪೋ ಹೋಮ ಉಪವಾಸಸ್ತಥಾಕ್ಷಯಃ ।
ಪರಿತ್ಯಜತಿ ಯಃ ಪ್ರಾಣಾನ್ ರುದ್ರಲೋಕಂ ಸ ಗಚ್ಛತಿ ॥ ೮ ॥

ಅನ್ಯಚ್ಚ ತೀರ್ಥಪ್ರವರಂ ಕನ್ಯಾತೀರ್ಥಮನುತ್ತಮಮ್ ।
ತತ್ರ ಗತ್ವಾ ತ್ಯಜೇತ್ ಪ್ರಾಣಾನ್ ಲೋಕಾನ್ ಪ್ರಾಪ್ನೋತಿ ಶಾಶ್ವತಾನ್

ಜಾಮದಗ್ನ್ಯಸ್ಯ ಚ ಶುಭಂ ರಾಮಸ್ಯಾಕ್ಲಿಷ್ಟಕರ್ಮಣಃ ।
ತತ್ರ ಸ್ನಾತ್ವಾ ತೀರ್ಥವರೇ ಗೋಸಹಸ್ರಫಲಂ ಲಭೇತ್ ॥ ೧೦ ॥

---

೭. ಮತ್ತೊಂದು ಕಾಯಾವರೋಹಣವೆಂಬ ತೀರ್ಥವು ಮಂಗಳಪ್ರದವೂ, ಮಹಾದೇವನಾದ ಶಂಕರನಿಗೆ ಪ್ರಿಯವೂ ಆಗಿ ಪ್ರಸಿದ್ಧವಾಗಿದೆ. ಆ ತೀರ್ಥದ ಸನ್ನಿಧಿಯಲ್ಲಿ ಮುನಿಗಳಿಂದ ಮಹೇಶ್ವರ ಧರ್ಮಗಳು ಸ್ಥಾಪಿಸಲ್ಪಟ್ಟಿವೆ.

೮. ಆ ತೀರ್ಥದಲ್ಲಿ ಮಾಡಿದ ಸ್ನಾನ, ಶ್ರಾದ್ಧ, ದಾನ, ತಪಸ್ಸು, ಹೋಮ ಮತ್ತು ಉಪವಾಸ ಎಂಬ ಪುಣ್ಯಕರ್ಮಗಳೆಲ್ಲವೂ ಅಕ್ಷಯವಾದ ಫಲಕ್ಕೆ ಸಾಧನವಾಗಿವೆ. ಆ ತೀರ್ಥಸನ್ನಿಧಿಯಲ್ಲಿ ಪ್ರಾಣತ್ಯಾಗಮಾಡಿದವನು ರುದ್ರಲೋಕಕ್ಕೆ ಹೋಗುತ್ತಾನೆ.

೯. ಕನ್ಯಾತೀರ್ಥವೆಂದು ಕರೆಯಲ್ಪಡುವುದೊಂದು ತೀರ್ಥವಿದೆ. ಆ ತೀರ್ಥಕ್ಕಿಂತಲೂ ಉತ್ತಮವಾದ ತೀರ್ಥವು ಬೇರೊಂದು ಇಲ್ಲ. ಆ ಕನ್ಯಾತೀರ್ಥಕ್ಕೆ ಹೋಗಿ ಪ್ರಾಣಗಳ ಪರಿತ್ಯಾಗವನ್ನು ಮಾಡಿದವನು ಶಾಶ್ವತಲೋಕವನ್ನು ಹೊಂದುತ್ತಾನೆ.

೧೦. ಲೀಲಾಜಾಲದಂತೆ ಅನೇಕವ್ಯಾಪಾರಗಳುಳ್ಳ, ಜಮದಗ್ನಿ ಪುತ್ರನಾದ ಪರಶುರಾಮನ ತೀರ್ಥವು ಮಂಗಳತೀರ್ಥವಾಗಿದೆ. ಆ ಪುಣ್ಯತೀರ್ಥದಲ್ಲಿ ಸ್ನಾನಮಾಡಿದವನು ಸಹಸ್ರ ಗೋದಾನದ ಫಲವನ್ನು ಹೊಂದುತ್ತಾನೆ

ಮಹಾಕಾಲಮಿತಿ ಖ್ಯಾತಂ ತೀರ್ಥಂ ಲೋಕೇಷು ವಿಶ್ರುತಮ್ ।
ಗತ್ವಾ ಪ್ರಾಣಾನ್ ಪರಿತ್ಯಜ್ಯ ಗಾಣಪತ್ಯಮವಾಪ್ನುಯಾತ್ ॥ ೧೧ ॥

ಗುಹ್ಯಾದ್ಗುಹ್ಯತಮಂ ತೀರ್ಥಂ ನಕುಲೀಶ್ವರಮುತ್ತಮಮ್ ।
ತತ್ರ ಸನ್ನಿಹಿತಃ ಶ್ರೀಮಾನ್ ಭಗವಾನ್ ನಕುಲೀಶ್ವರಃ ॥ ೧೨ ॥

ಹಿಮವಚ್ಛಿಖರೇ ರಮ್ಯೇ ಗಂಗಾದ್ವಾರೇ ಸುಶೋಭನೇ ।
ದೇವ್ಯಾ ಸಹ ಮಹಾದೇವೋ ನಿತ್ಯಂ ಶಿಷ್ಯೈಶ್ಚ ಸಂಭೃತಃ ॥ ೧೩ ॥

ತತ್ರ ಸ್ನಾತ್ವಾ ಮಹಾದೇವಂ ಪೂಜಯಿತ್ವಾ ವೃಷಧ್ವಜಮ್ ।
ಸರ್ವಪಾಪೈರ್ವಿಮುಚ್ಯೇತ ಮೃತಸ್ತಜ್ಜ್ಞಾನಮಾಪ್ನುಯಾತ್ ॥ ೧೪ ॥

---

೧೧. ಮಹಾಕಾಲವೆಂಬ ನಾಮಾಂಕನದಿಂದ ಪ್ರಸಿದ್ಧಿಹೊಂದಿದ ಮತ್ತೊಂದು ತೀರ್ಥವು ಮೂರುಲೋಕಗಳಲ್ಲಿ ಪ್ರಖ್ಯಾತಿಯನ್ನು ಹೊಂದಿದೆ. ಅಲ್ಲಿಗೆ ಹೋಗಿ ಮರಣವನ್ನು ಹೊಂದಿದರೆ ಗಣಾಧಿಪತ್ಯಾಧಿಕಾರವನ್ನು ಹೊಂದುತ್ತಾನೆ.

೧೨. ನಕುಲೀಶ್ವರವೆಂದು ಕರೆಯಲ್ಪಡುವ ಉತ್ತಮವಾದ ತೀರ್ಥವು ಎಲ್ಲ ರಹಸ್ಯವಸ್ತುಗಳಿಗಿಂತ ರಹಸ್ಯವಾಗಿದೆ. ಷಡ್ಗುಣೈಶ್ವರ್ಯ ಸಂಪನ್ನನಾದ ಮತ್ತು ಮಹಿಮೆಯಿಂದ ಕೂಡಿದ ನಕುಲೀಶ್ವರನು ಅಲ್ಲಿ ಸನ್ನಿಹಿತನಾಗಿರುವನು.

೧೩. ಹಿಮಾಲಯಪರ್ವತದ ಶಿಖರದಲ್ಲಿ ಪರಮಮಂಗಳಮಯವಾದ ಗಂಗಾದ್ವಾರದಲ್ಲಿ ದೇವೋತ್ತಮನಾದ ಶಂಕರನು ಪಾರ್ವತೀದೇವಿಯೊಡನೆ ಅನೇಕ ಮಂದಿ ಶಿಷ್ಯಜನರಿಂದ ಸೇವಿಸಲ್ಪಡುತ್ತಿರುವನು.

೧೪. ಆ ತೀರ್ಥದಲ್ಲಿ ಸ್ನಾನಮಾಡಿ ವೃಷಭಾಂಕಿತವಾದ ಧ್ವಜವುಳ್ಳ ಮಹಾದೇವನನ್ನು ಪೂಜಿಸಿದ ನರನು ಸರ್ವಪಾತಕಗಳಿಂದ ಶುದ್ಧಿಹೊಂದುವನು. ಮತ್ತು ಮರಣಾನಂತರದಲ್ಲಿ ಮಹೇಶ್ವರಜ್ಞಾನವನ್ನು ಹೊಂದುತ್ತಾನೆ.

ಅನ್ಯಚ್ಚ ದೇವದೇವಸ್ಯ ಸ್ಥಾನಂ ಪುಣ್ಯತಮಂ ಶುಭಮ್ ।
ಭೀಮೇಶ್ವರಮಿತಿ ಖ್ಯಾತಂ ಗತ್ವಾ ಮುಂಚತಿ ಪಾತಕಮ್ ॥ ೧೫ ॥

ತಥಾನ್ಯಚ್ಚಂಡವೇಗಾಯಾಃ ಸಂಭೇದಃ ಪಾಪನಾಶನಃ ।
ತತ್ರ ಸ್ನಾತ್ವಾ ಚ ಪೀತ್ವಾ ಚ ಮುಚ್ಯತೇ ಬ್ರಹ್ಮಹತ್ಯಯಾ ॥ ೧೬ ॥

ಸರ್ವೇಷಾಮಪಿ ಚೈತೇಷಾಂ ತೀರ್ಥಾನಾಂ ಪರಮಾ ಪುರೀ ।
ನಾಮ್ನಾ ವಾರಾಣಸೀ ದಿವ್ಯಾ ಕೋಟಿಕೋಟ್ಯಯುತಾಧಿಕಾ ॥ ೧೭ ॥

ತಸ್ಯಾಃ ಪುರಸ್ತಾನ್ಮಾಹಾತ್ಮ್ಯಂ ಭಾಷಿತಂ ವೋ ಮಯಾ ತ್ವಿಹ ।
ನಾನ್ಯತ್ರ ಲಭತೇ ಮುಕ್ತಿಂ ಯೋಗೇನಾಪ್ಯೇಕಜನ್ಮನಾ ॥ ೧೮ ॥

---

೧೫. ಅತ್ಯಂತ ಪವಿತ್ರವೂ, ಮಂಗಳದಾಯಕವೂ ಆದ ದೇವೋತ್ತಮನಾದ ಮಹಾದೇವನ ಮತ್ತೊಂದು ಕ್ಷೇತ್ರವಿರುವುದು. ಅದು ಭೀಮೇಶ್ವರ ತೀರ್ಥವೆಂದು ಖ್ಯಾತಿಯನ್ನು ಹೊಂದಿದೆ. ಅಲ್ಲಿ ತೀರ್ಥಾಟನವನ್ನು ಮಾಡಿದವನು ಪಾಪರಾಶಿಯನ್ನು ಕಳೆದುಕೊಳ್ಳುತ್ತಾನೆ.

೧೬. ಹಾಗು ಚಂಡವೇಗಾ ಎಂಬ ನದಿಯ ಸಂಗಮವೂ ಒಂದು ಪಾಪಗಳನ್ನು ಧ್ವಂಸಮಾಡುವುದಾಗಿದೆ. ಆ ಸಂಗಮತೀರ್ಥದಲ್ಲಿ ಸ್ನಾನ ಮತ್ತು ಪಾನಗಳನ್ನು ಮಾಡಿದ ನರನು ಬ್ರಹ್ಮಹತ್ಯಾಮಹಾಪಾತಕದಿಂದ ಬಿಡುಗಡೆ ಹೊಂದುತ್ತಾನೆ.

೧೭. ಹೀಗೆ ಹೇಳಿದ ಸಮಸ್ತ ತೀರ್ಥಗಳಲ್ಲಿಯೂ ವಾರಣಸೀ ಎಂಬ ನಾಮಾಂಕನವುಳ್ಳದ್ದೂ, ದಿವ್ಯವೂ ಮತ್ತು ಪ್ರಶಸ್ತವೂ ಆದ ನಗರಿಯು ಕೋಟಿ ಸಂಖ್ಯೆ ಹಾಗು ಅಯುತ ಸಂಖ್ಯಾಗುಣಿತವಾದ ಮಹಿಮೆಯುಳ್ಳದ್ದಾಗಿದೆ.

೧೮. ಇಲ್ಲಿಯೇ ನನ್ನಿಂದ ಆ ವಾರಾಣಸೀಪುರಿಯ ಮಾಹಾತ್ಮ್ಯವು ನಿಮಗೆ ಕೀರ್ತಿಸಲ್ಪಟ್ಟಿದೆ. ಬೇರೊಂದು ಸ್ಥಳದಲ್ಲಿ ಯೋಗಾಭ್ಯಾಸದಿಂದಲೂ ಕೂಡ ಒಂದೇ ಜನ್ಮದಲ್ಲಿ ಕೈವಲ್ಯವನ್ನು ಹೊಂದಲು ಸಾಧ್ಯವಿಲ್ಲ.

ಏತೇ ಪ್ರಾಧಾನ್ಯತಃ ಪ್ರೋಕ್ತಾ ದೇಶಾಃ ಪಾಪಹರಾ ನೃಣಾಮ್ ।
ಗತ್ವಾ ಸಂಕ್ಷಾಲಯೇತ್ಪಾಪಂ ಜನ್ಮಾಂತರಶತೈರಪಿ ॥ ೧೯ ॥

ಯಃ ಸ್ವಧರ್ಮಾನ್ ಪರಿತ್ಯಜ್ಯ ತೀರ್ಥಸೇವಾಂ ಕರೋತಿ ಹಿ ।
ನ ತಸ್ಯ ಫಲತೇ ತೀರ್ಥಮಿಹ ಲೋಕೇ ಪರತ್ರ ಚ ॥ ೨೦ ॥

ಪ್ರಾಯಶ್ಚಿತ್ತೀ ಚ ವಿಧುರಸ್ತಥಾ ಯಾಯಾವರೋ ಗೃಹೀ ।
ಪ್ರಕುರ್ಯಾತ್ತೀರ್ಥಸಂಸೇವಾಂ ಯಶ್ಚಾನ್ಯಸ್ತಾದೃಶೋ ಜನಃ ॥ ೨೧ ॥

ಸಹಾಗ್ನಿರ್ವಾ ಸಪತ್ನೀಕೋ ಗಚ್ಛೇತ್ತೀರ್ಥಾನಿ ಯತ್ನತಃ ।
ಸರ್ವಪಾಪವಿನಿರ್ಮುಕ್ತೋ ಯಥೋಕ್ತಾಂ ಗತಿಮಾಪ್ನುಯಾತ್ ॥ ೨೨ ॥

---

೧೯. ಹೀಗೆ ಮನುಷ್ಯರಿಗೆ ಪಾಪಭಂಜನೆಗೆ ಕಾರಣವಾದ ಪವಿತ್ರ ದೇಶಗಳು ಮುಖ್ಯವಾಗಿರುವುವುಗಳು ಮಾತ್ರ ನನ್ನಿಂದ ಹೇಳಲ್ಪಟ್ಟಿವೆ. ಈ ಪುಣ್ಯದೇಶದಲ್ಲಿ ಅಟನಮಾಡಿ ನೂರಾರು ಜನ್ಮಗಳಿಂದ ಮಾಡಿದ ಪಾಪಗಳನ್ನು ಶೋಧನಮಾಡಿಕೊಳ ಬೇಕು.

೨೦. ಆದರೆ ಯಾವ ನರನು ತನಗೆ ವಿಹಿತವಾದ ಧರ್ಮಗಳನ್ನು ಬಿಟ್ಟು ತೀರ್ಥಯಾತ್ರೆಯನ್ನು ಮಾಡುವನೋ; ಅವನಿಗೆ ತೀರ್ಥಯಾತ್ರೆಯು ಇಹಲೋಕದಲ್ಲಿ ಯಾಗಲಿ, ಪರಲೋಕದಲ್ಲಿಯಾಗಲಿ ಫಲದಾಯಕವಾಗುವುದಿಲ್ಲ.

೨೧. ಪ್ರಾಯಶ್ಚಿತ್ತಾನುಷ್ಠಾನಕ್ಕೆ ಅರ್ಹನಾದವನೂ, ವಿಧುರನೂ, ಯಾಯಾವರ ಯತಿಯೂ ಮತ್ತು ಗೃಹಸ್ಥಾಶ್ರಮಿಯೂ ಆ ದೇಶಗಳಲ್ಲಿ ಸಂಚರಿಸಿ ತೀರ್ಥಸೇವೆಯನ್ನು ಮಾಡಬೇಕು. ಅಂತಹ ಮಾನವನು ಯಾರೇ ಆಗಲಿ ತೀರ್ಥಾಟನೆಯನ್ನು ಮಾಡಬೇಕು.

೨೨. ಮಾನವನು ಅಗ್ನಿ ಮತ್ತು ಪತ್ನೀಸಮೇತನಾಗಿ ಯತ್ನಪೂರ್ವಕವಾಗಿ ತೀರ್ಥಾಟನೆಯನ್ನು ಮಾಡಬೇಕು. ಅದರಿಂದ ಸಮಸ್ತ ಪಾಪಸಂಗದಿಂದ ನಿರ್ಮುಕ್ತನಾಗಿ ಹಿಂದೆ ಹೇಳಿದ ಉತ್ತಮಗತಿಯನ್ನು ಹೊಂದುವನು.

ಋಣಾನಿ ತ್ರೀಣ್ಯಪಾಕೃತ್ಯ ಯಃ ಕುರ್ಯಾತ್ ತೀರ್ಥಸೇವನಮ್ ।
ವಿಧಾಯ ವೃತ್ತಿಂ ಪುತ್ರಾಣಾಂ ಭಾರ್ಯಾಂ ತೇಷು ವಿಧಾಯ ಚ ॥

ಪ್ರಾಯಶ್ಚಿತ್ತಪ್ರಸಂಗೇನ ತೀರ್ಥಮಾಹಾತ್ಮ್ಯಮೀರಿತಮ್ ।
ಯಃ ಪಠೇಚ್ಛೃಣುಯಾದ್ವಾಪಿ ಸರ್ವಪಾಪೈಃ ಪ್ರಮುಚ್ಯತೇ ॥ ೨೪ ॥

ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇ
ಸಪ್ತನವತಿತಮೋಽಧ್ಯಾಯಃ.

---

೨೩. ಗೃಹಸ್ಥಾಶ್ರಮಿಯು ಪುತ್ರರಿಗೆ ವೃತ್ತಿಯನ್ನು ಮಾಡಿಟ್ಟು ಪತ್ನಿಯನ್ನು ಅವರ ಅಧೀನದಲ್ಲಿ ರಕ್ಷಣೆಯಾಗುವಂತೆ ಇರಿಸಿ ಯಾರೇ ಆಗಲಿ ತೀರ್ಥಾಟನೆಯನ್ನು ಮಾಡುತ್ತ ಋಣತ್ರಯವನ್ನು ಕಳೆದುಕೊಳ್ಳಬೇಕು.

೨೪. ಹೀಗೆ ಪ್ರಾಯಶ್ಚಿತ್ತ ವಿಧಿಯನ್ನು ಹೇಳುವ ಪ್ರಸಂಗದಿಂದ ತೀರ್ಥಗಳ ಮಾಹಾತ್ಮ್ಯವು ಹೇಳಲ್ಪಟ್ಟಿತು. ಯಾವ ನರನು ಈ ತೀರ್ಥಮಾಹಾತ್ಮ್ಯವನ್ನು ಶ್ರವಣ ಅಥವಾ ಪಠನಗಳನ್ನು ಮಾಡುವನೊ ಅವನು ಸರ್ವ ಪಾಪಗಳಿಂದ ಮುಕ್ತ ವಾಗುತ್ತಾನೆ.

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ತೊಂಭತ್ತೇಳನೆಯ ಅಧ್ಯಾಯವು
ಮುಗಿದುದು.

---

॥ ಶ್ರೀಃ ॥

# ಕೂರ್ಮಪುರಾಣಂ

---

## ಅಷ್ಟಾನವತಿತಮೋಽಧ್ಯಾಯಃ.

**ಸೂತ ಉವಾಚ :—**

**ಏತದಾಕರ್ಣ್ಯ ವಿಜ್ಞಾನಂ ನಾರಾಯಣಮುಖೇರಿತಮ್ ।**
**ಕೂರ್ಮರೂಪಧರಂ ದೇವಂ ಪಪ್ರಚ್ಛುರ್ಮುನಯಃ ಪ್ರಭುಮ್ ॥ ೧ ॥**

**ಮುನಯ ಊಚುಃ :—**

**ಕಥಿತೋ ಭವತಾ ಧರ್ಮೋ ಮೋಕ್ಷಜ್ಞಾನಂ ಸವಿಸ್ತರಮ್ ।**
**ಲೋಕಾನಾಂ ಸರ್ಗವಿಸ್ತಾರೋ ವಂಶೋ ಮನ್ವಂತರಾಣಿ ಚ ॥ ೨ ॥**

---

## ತೊಂಭತ್ತೆಂಟನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು :— ಮುನಿಗಳು ಶ್ರೀಮನ್ ನಾರಾಯಣನ ಮುಖದಿಂದ ಉಪದೇಶಿಸಲ್ಪಟ್ಟ ಈ ವಿಜ್ಞಾನಮಾರ್ಗವನ್ನು ಕೇಳಿ ಪ್ರಭುವೂ, ಕೂರ್ಮರೂಪವನ್ನು ಧರಿಸಿದವನೂ ಆದ ಸ್ವಾಮಿಯನ್ನು ಕುರಿತು ಪ್ರಶ್ನಿಸಿದರು.

೨. ಮುನಿಗಳು ಹೀಗೆಂದರು :—ಸ್ವಾಮಿಯೆ ! ನಿನ್ನಿಂದ ಇದುವರೆಗೆ ಧರ್ಮಶಾಸ್ತ್ರವೂ, ಮೋಕ್ಷಸಾಧನವಾದ ಜ್ಞಾನವೂ, ಲೋಕಗಳ ಸನ್ನಿವೇಶ-ಸೃಷ್ಟಿಗಳ ಪ್ರಪಂಚವೂ ಅನೇಕ ವಂಶಗಳೂ ಮತ್ತು ಮನ್ವಂತರಗಳೂ ವಿಸ್ತಾರವಾಗಿ ಹೇಳಲ್ಪಟ್ಟುವು.

ಇದಾನೀಂ ದೇವದೇವೇಶ ಪ್ರಲಯಂ ವಕ್ತುಮರ್ಹಸಿ ।
ಭೂತಾನಾಂ ಭೂತಭವ್ಯೇಶ ಯಥಾ ಪೂರ್ವಂ ತ್ವಯೋದಿತಮ್ ॥ ೩ ॥

ಸೂತ ಉವಾಚ —

ಶ್ರುತ್ವಾ ತೇಷಾಂ ತದಾ ವಾಕ್ಯಂ ಭಗವಾನ್ ಕೂರ್ಮರೂಪಧೃಕ್ ।
ವ್ಯಾಜಹಾರ ಮಹಾಯೋಗೀ ಭೂತಾನಾಂ ಪ್ರತಿಸಂಚರಮ್ ॥ ೪ ॥

ಕೂರ್ಮ ಉವಾಚ :—

ನಿತ್ಯೋ ನೈಮಿತ್ತಿಕಶ್ಚೈವ ಪ್ರಾಕೃತೋಽತ್ಯಂತಿಕಸ್ತಥಾ ।
ಚತುರ್ಧಾಯಂ ಪುರಾಣೇಽಸ್ಮಿನ್ ಪ್ರೋಚ್ಯತೇ ಪ್ರತಿಸಂಚರಃ ॥ ೫ ॥

ಯೋಽಯಂ ಸಂದೃಶ್ಯತೇ ನಿತ್ಯಂ ಲೋಕೇ ಭೂತಕ್ಷಯಸ್ತಥಾ ।
ನಿತ್ಯಃ ಸಂಕೀರ್ತ್ಯತೇ ನಾಮ್ನಾ ಮುನಿಭಿಃ ಪ್ರತಿಸಂಚರಃ ॥ ೬ ॥

---

೩. ಭೂತ-ಭವಿಷ್ಯವೆಂಬ ಸಕಲ ವಸ್ತುಗಳಿಗೆ ಈಶ್ವರನೆ ! ದೇವತೆಗಳ ಅಧಿಪತಿಗಳಿಗೆ ಸ್ವಾಮಿಯೆ ! ನಿನ್ನಿಂದ ಪೂರ್ವದಲ್ಲಿ ಹೇಳಲ್ಪಟ್ಟಿರುವಂತೆ ಸರ್ವ ಭೂತಗಳ ಪ್ರಲಯಾವಸ್ಥೆಯನ್ನು ಈಗ ವರ್ಣಿಸಲು ಅರ್ಹನಾಗಿದ್ದೀಯೆ.

೪. ಸೂತಮುನಿಯು ಈ ರೀತಿಯಾಗಿ ಹೇಳಿದನು :—ಆಗ ಕೂರ್ಮರೂಪವನ್ನು ಧರಿಸಿದವನೂ, ಮಹಾಯೋಗೇಶ್ವರನೂ ಆದ ಸ್ವಾಮಿಯು ಮುನಿಗಳ ವಚನವನ್ನು ಕೇಳಿ ಸರ್ವ ಭೂತಗಳ ಪ್ರಲಯ ಕ್ರಮವನ್ನು ಹೇಳಲಾರಂಭಿಸಿದನು.

೫. ನಿತ್ಯ, ನೈಮಿತ್ತಿಕ, ಪ್ರಾಕೃತ ಮತ್ತು ಆತ್ಯಂತಿಕವೆಂದು ಪ್ರಲಯವು ನಾಲ್ಕು ವಿಧವುಳ್ಳದ್ದಾಗಿ ಈ ಪುರಾಣದ ಹೇಳಲ್ಪಟ್ಟಿದೆ.

೬. ಈ ಲೋಕದಲ್ಲಿ ಯಾವ ಪ್ರಾಣಿಗಳ ಕ್ಷಯವು ಪ್ರತಿದಿನದಲ್ಲಿಯೂ ಆಗುವುದಾಗಿ ಕಾಣಿಸುವುದೊ ; ಮಹರ್ಷಿಗಳಿಂದ ಆ ಪ್ರಲಯವು ನಿತ್ಯಪ್ರಲಯವೆಂಬ ಹೆಸರಿನಿಂದ ಕರೆಯಲ್ಪಟ್ಟಿದೆ.

ಬ್ರಹ್ಮನ್ನೈಮಿತ್ತಿಕೋ ನಾಮ ಕಲ್ಪಾಂತೇ ಯೋ ಭವಿಷ್ಯತಿ ।
ತ್ರೈಲೋಕ್ಯಸ್ಯಾಸ್ಯ ಕಥಿತಃ ಪ್ರತಿಸರ್ಗೋ ಮನೀಷಿಭಿಃ ॥ ೭ ॥

ಮಹದಾದ್ಯಂ ವಿಶೇಷಾಂತಂ ಯದಾ ಸಂಯಾತಿ ಸಂಕ್ಷಯಮ್ ।
ಪ್ರಾಕೃತಃ ಪ್ರತಿಸರ್ಗೋಽಯಂ ಪ್ರೋಚ್ಯತೇ ಕಾಲಚಿಂತಕೈಃ ॥ ೮ ॥

ಜ್ಞಾನಾದಾತ್ಯಂತಿಕಃ ಪ್ರೋಕ್ತೋ ಯೋಗಿನಃ ಪರಮಾತ್ಮನಿ ।
ಪ್ರಲಯಃ ಪ್ರತಿಸರ್ಗೋಽಯಂ ಕಾಲಚಿಂತಾಪರೈರ್ದ್ವಿಜೈಃ ॥ ೯ ॥

ಆತ್ಯಂತಿಕಸ್ತು ಪ್ರಲಯಃ ಕಥಿತೋ ಜ್ಞಾನಸಾಧನಃ ।
ನೈಮಿತ್ತಿಕಮಿದಾನೀಂ ವಃ ಕಥಯಿಷ್ಯೇ ಸಮಾಸತಃ ॥ ೧೦ ॥

---

೭. ಕಲ್ಪಾವಧಿಕಾಲದ ಅವಸಾನದಲ್ಲಿ ಬ್ರಹ್ಮನ ಜಾಗರಣ ಮುಗಿದ ನಿಮಿತ್ತದಿಂದ ಈ ತ್ರಿಲೋಕಗಳಿಗೆ ಯಾವ ಪ್ರಲಯವು ಉಂಟಾಗುವುದೋ; ಆ ಪ್ರಲಯವನ್ನು ಜ್ಞಾನಿಗಳು ನೈಮಿತ್ತಿಕಪ್ರಲಯವೆಂದು ಹೇಳುವರು.

೮. ಮಹತ್ತತ್ತ್ವದಿಂದ ಮೊದಲ್ಗೊಂಡು ವಿಕೃತಿ ತತ್ತ್ವದವರೆಗೆ ಸಮಸ್ತ ತತ್ತ್ವಗಳು ಯಾವ ದಶೆಯಲ್ಲಿ ನಾಶವನ್ನು ಹೊಂದುವುವೊ ; ಕಾಲಾವಸ್ಥೆಯನ್ನು ಚಿಂತಿಸುತ್ತಿದ್ದ ಜ್ಞಾನಿಗಳಿಂದ ಅದು ಪ್ರಾಕೃತ ಪ್ರಲಯವೆಂದು ಹೇಳಲ್ಪಟ್ಟಿದೆ.

೯. ಯೋಗಾಭ್ಯಾಸದಿಂದ ಸಿದ್ಧಿಯುಳ್ಳವನಿಗೆ ಜ್ಞಾನನಿಷ್ಠೆಯಿಂದ ಪರಮಾತ್ಮನಲ್ಲಿ ಆಗುವ ಏಕೀಭಾವವೆಂಬ ಪ್ರಲಯವು ಕಾಲದಶಾವಿಮರ್ಶಕರಾದ ತತ್ತ್ವಜ್ಞ ಮುನಿಗಳಿಂದ ಆತ್ಯಂತಿಕಪ್ರಲಯವೆಂದು ಕೀರ್ತಿಸಲ್ಪಟ್ಟಿರುವುದು.

೧೦. ಜ್ಞಾನಯೋಗವೆಂಬ ಸಾಧನವುಳ್ಳ ಪ್ರಲಯವು ಆತ್ಯಂತಿಕಪ್ರಲಯವೆಂದು ಹೇಳಲ್ಪಟ್ಟಿದೆ. ಮುಂದೆ ಈಗ ಇವುಗಳಲ್ಲಿ ನೈಮಿತ್ತಿಕಪ್ರಲಯವನ್ನು ನಿಮಗೆ ಸಂಗ್ರಹವಾಗಿ ಹೇಳುತ್ತೇನೆ, ಕೇಳಿರಿ.

ಚತುರ್ಯುಗಸಹಸ್ರಾಂತೇ ಸಂಪ್ರಾಪ್ತೇ ಪ್ರತಿಸಂಚರೇ ।
ಸ್ವಾತ್ಮಸಂಸ್ಥಾಃ ಪ್ರಜಾಃ ಕರ್ತುಂ ಪ್ರತಿಪೇದೇ ಪ್ರಜಾಪತಿಃ ॥ ೧೧ ॥

ತತೋಽಭವತ್ತ್ವನಾವೃಷ್ಟಿಸ್ತೀವ್ರಾ ಸಾ ಶತವಾರ್ಷಿಕೀ ।
ಭೂತಕ್ಷಯಕರೀ ಘೋರಾ ಸರ್ವಭೂತಕ್ಷಯಂಕರೀ ॥ ೧೨ ॥

ತತೋ ಯಾನ್ಯಲ್ಪಸಾರಾಣಿ ಸತ್ತ್ವಾನಿ ಪೃಥಿವೀಪತೇ ।
ತಾನಿ ಚಾಗ್ರೇ ಪ್ರಲೀಯಂತೇ ಭೂಮಿತ್ವಮುಪಯಾಂತಿ ಚ ॥ ೧೩ ॥

ಸಪ್ತರಶ್ಮಿರಥೋ ಭೂತ್ವಾ ಸಮುತ್ತಿಷ್ಠನ್ ದಿವಾಕರಃ ।
ಅಸಹ್ಯರಶ್ಮಿರ್ಭವತಿ ಪಿಬನ್ನಂಭೋ ಗಭಸ್ತಿಭಿಃ ॥ ೧೪ ॥

---

೧೧. ಸಹಸ್ರ ಆವೃತ್ತಿಯಾಗಿ ಚತುರ್ಯುಗಗಳು ಕಳೆದ ತರುವಾಯ ಪ್ರಲಯದಶೆಯು ಸಂಭವಿಸಿರಲು ಪ್ರಜಾಪತಿಯು ಸಮಸ್ತ ಪ್ರಜೆಗಳನ್ನು ತನ್ನಲ್ಲಿ ಅಡಗಿಸಿಕೊಳ್ಳಬೇಕೆಂದು ಸಂಕಲ್ಪಿಸಿದನು.

೧೨. ತರುವಾಯ ತೀವ್ರವಾದ ಅನಾವೃಷ್ಟಿಯು ಲೋಕದಲ್ಲಿ ಉಂಟಾಯಿತು. ಆ ಅನಾವೃಷ್ಟಿಯು ನೂರಾರು ವರ್ಷಗಳವರೆಗೆ ಇರುವುದೂ ಭೂತಗಳನ್ನು ಕ್ಷಯಿಸ ಲೋಸ್ಕರ ಪ್ರಾದುರ್ಭಾವವನ್ನು ಹೊಂದಿದುದೂ ಮತ್ತು ಸರ್ವಭೂತಗಳನ್ನು ಕ್ಷಯ ಹೊಂದಿಸುವುದೂ ಆಗಿತ್ತು.

೧೩. ಭೂಪತಿಯಾದ ಯುಧಿಷ್ಠಿರನೆ! ತರುವಾಯ ಯಾವ ವಸ್ತುಗಳು ಅಲ್ಪಸಾರದಿಂದ ಕೂಡಿದ್ದುವೊ; ಮೊದಲು ಅವುಗಳೆಲ್ಲ ನಾಶಹೊಂದಿ ಪ್ರಲಯವನ್ನು ಹೊಂದಿ ಭೂಮಿಯಲ್ಲಿ ಐಕ್ಯವನ್ನು ಹೊಂದುತ್ತವೆ.

೧೪. ಆಗ ತನ್ನ ಸಪ್ತರಶ್ಮಿಗಳಿಂದ ಕೂಡಿದ ರಥವನ್ನು ಏರಿಕೊಂಡು ಸೂರ್ಯನು ಉದಯಿಸಿ ತನ್ನ ಕಿರಣಗಳಿಂದ ಜಲವನ್ನು ಸ್ವೀಕರಿಸುತ್ತ ತಪಿಸಲಾಗಿ ಸಹಿಸಲಾಗದಷ್ಟು ತಾಪವನ್ನು ಕೊಡುವ ರಶ್ಮಿಯುಳ್ಳವನಾಗುತ್ತಾನೆ.

ತಸ್ಯ ತೇ ರಶ್ಮಯಃ ಸಪ್ತ ಪಿಬಂತ್ಯಂಬು ಮಹಾರ್ಣವೇ ।
ತೇನಾಹಾರೇಣ ತಾ ದೀಪ್ತಾಃ ಸಪ್ತಸೂರ್ಯಾ ಭವಂತ್ಯುತ ॥ ೧೫ ॥

ತತಸ್ತೇ ರಶ್ಮಯಃ ಸಪ್ತ ಶೋಷಯಿತ್ವಾ ಚತುರ್ದಿಶಮ್ ।
ಚತುರ್ಲೋಕಮಿಮಂ ಸರ್ವಂ ದಹಂತಿ ಶಿಖಿನೋ ಯಥಾ ॥ ೧೬ ॥

ವ್ಯಾಪ್ನುವಂತಶ್ಚ ತೇ ದೀಪ್ತಾ ಊರ್ಧ್ವಂ ಚಾಧಃ ಸ್ವರಶ್ಮಿಭಿಃ ।
ದೀಪ್ಯಂತೇ ಭಾಸ್ಕರಾಃ ಸಪ್ತ ಯುಗಾಂತಾಗ್ನಿಪ್ರದೀಪಿತಾಃ ॥ ೧೭ ॥

ತೇ ಸೂರ್ಯಾ ವಾರಿಣಾ ದೀಪ್ತಾ ಬಹುಸಾಹಸ್ರರಶ್ಮಯಃ ।
ಖಂ ಸಮಾವೃತ್ಯ ತಿಷ್ಠಂತಿ ಪ್ರದಹಂತೋ ವಸುಂಧರಾಮ್ ॥ ೧೮ ॥

೧೫. ಆ ಸೂರ್ಯದೇವನ ಆ ಏಳು ರಶ್ಮಿಗಳು ಮಹಾಸಮುದ್ರದಲ್ಲಿ ಜಲವನ್ನು ಪಾನಮಾಡುತ್ತವೆ. ಆ ಸಮುದ್ರಜಲದ ಆಹಾರದಿಂದ ರಶ್ಮಿಗಳು ಜ್ವಲಿಸುತ್ತ ಸಪ್ತಸಂಖ್ಯೆಯಷ್ಟು ಸೂರ್ಯರಾಗುತ್ತವೆ.

೧೬. ತರುವಾಯ ಸೂರ್ಯರೂಪವನ್ನು ಹೊಂದಿದ ಆ ಸಪ್ತರಶ್ಮಿಗಳು ಲೋಕದ ನಾಲ್ಕುದಿಕ್ಕುಗಳನ್ನು ಶೋಷಣಮಾಡಿ ಜ್ವಾಲಾಮಯವಾದ ಅಗ್ನಿಗಳಂತೆ ಈ ನಾಲ್ಕು ದಿಕ್ಕುಗಳನ್ನು ದಹನಮಾಡುತ್ತವೆ.

೧೭. ಮತ್ತು ಆ ಸೂರ್ಯರು ಜ್ವಲಿಸುತ್ತ ತಮ್ಮ ರಶ್ಮಿಗಳಿಂದ ಮೇಲೆ-ಕೆಳಗೆ ಸರ್ವ ಭಾಗಗಳಲ್ಲಿಯೂ ವ್ಯಾಪಿಸಿ ಪ್ರಲಯಾಗ್ನಿಯಿಂದ ದೀಪ್ತಿಗೊಳಿಸಲ್ಪಟ್ಟವರಾಗಿ ಮತ್ತಷ್ಟು ಹೆಚ್ಚಾಗಿ ಜ್ವಲಿಸುವರು.

೧೮. ಆ ಸೂರ್ಯರು ಜಲರೂಪವಾದ ಇಂಧನದಿಂದ ಜ್ವಲಿಸುವವರೂ ಅನೇಕ ಸಹಸ್ರ ಸಂಖ್ಯೆಯ ರಶ್ಮಿಗಳಿಂದ ಕೂಡಿದವರೂ ಆಗಿ ಆಕಾಶವನ್ನು ಮುಚ್ಚಿಕೊಂಡು ಭೂಮಿಯನ್ನು ದಹಿಸುತ್ತಲಿರುವರು.

ತತಸ್ತೇಷಾಂ ಪ್ರತಾಪೇನ ದಹ್ಯಮಾನಾ ವಸುಂಧರಾ ।
ಸಾದ್ರಿನದ್ಯರ್ಣವದ್ವೀಪಾ ನಿಃಸ್ನೇಹಾ ಸಂಪ್ರಪದ್ಯತೇ　　　॥ ೧೯ ॥

ದೀಪ್ತಾಭಿಃ ಸಂತತಾಭಿಶ್ಚ ರಶ್ಮಿಭಿರ್ವೈ ಸಮಂತತಃ ।
ಅಧಶ್ಚೋರ್ಧ್ವಂ ಚ ಲಗ್ನಾಭಿಸ್ತಿರ್ಯಕ್ ಚೈವ ಸಮಾವೃತಮ್ ॥ ೨೦ ॥

ಸೂರ್ಯಾಗ್ನಿನಾ ಪ್ರಮೃಷ್ಟಾನಾಂ ಸಂಸೃಷ್ಟಾನಾಂ ಪರಸ್ಪರಮ್ ।
ಏಕತ್ವಮುಪಯಾತಾನಾಮೇಕಜ್ವಾಲಂ ಭವತ್ಯುತ　　　॥ ೨೧ ॥

ಸರ್ವಲೋಕಪ್ರಣಾಶಶ್ಚ ಸೋಽಗ್ನಿರ್ಭೂತ್ವಾ ತು ಮಂಡಲೀ ।
ಚತುರ್ಲೋಕಮಿಮಂ ಸರ್ವಂ ನಿರ್ದಹತ್ಯಾಶು ತೇಜಸಾ　　　॥ ೨೨ ॥

---

೧೯. ತರುವಾಯ ಆ ಸೂರ್ಯರ ಪ್ರತಾಪದಿಂದ ಹೆಚ್ಚಾಗಿ ದಹಿಸಲ್ಪಡುವ ಅದ್ರಿ-ನದಿ-ಸಮುದ್ರ ಮತ್ತು ದ್ವೀಪಗಳಿಂದ ಕೂಡಿದ ಸಮಸ್ತ ಭೂಮಿಯು ಶುಷ್ಕವಾಗಿ ಸ್ವಲ್ಪ ಮಾತ್ರವೂ ಸ್ನೇಹಗುಣವಿಲ್ಲದಂತೆ ಆಗುತ್ತದೆ.

೨೦. ಕೆಳಭಾಗ ಮತ್ತು ಅಡ್ಡಲಾಗಿರುವ ಪ್ರದೇಶಗಳಲ್ಲಿ ಅಂಟಿಕೊಂಡು ಜ್ವಲಿಸುತ್ತ ಇರುವುವೂ ವ್ಯಾಪಕವೂ ಆದ ಸೂರ್ಯರಶ್ಮಿಗಳಿಂದ ಜಗತ್ತಿನ ಸುತ್ತಲೂ ಆವರಣ ಮಾಡಲ್ಪಡುವುದು.

೨೧. ಸೂರ್ಯರು ಮತ್ತು ಅಗ್ನಿಗಳು ಪರಸ್ಪರವಾಗಿ ಸೇರಿ ದಹಿಸಿರುವ ಸಮಸ್ತ ಭೂತಗಳೂ ಒಂದಕ್ಕೊಂದು ಸೇರಿ ಏಕತ್ವವನ್ನು ಹೊಂದಿ ಎಲ್ಲೆಲ್ಲಿಯೂ ಜ್ವಾಲೆಯಿಂದ ಉರಿಯುತ್ತಿರುವಂತೆ ಆಗುವುದು.

೨೨. ಮಂಡಲಾಕಾರವಾದ ಆ ಅಗ್ನಿಯು ಸರ್ವ ಲೋಕಗಳನ್ನು ನಾಶ ಮಾಡಲು ಕಾರಣವಾಗಿ ಈ ಸಮಸ್ತ ಚತುರ್ಲೋಕಗಳ ಸಮಷ್ಟಿಯನ್ನು ಶೀಘ್ರವಾಗಿ ತನ್ನ ತೇಜಸ್ಸಿನಿಂದ ದಹಿಸಿ ಭಸ್ಮಮಾಡುತ್ತದೆ.

ತತಃ ಪ್ರಲೀನೇ ಸರ್ವಸ್ಮಿನ್ ಜಂಗಮೇ ಸ್ಥಾವರೇ ತಥಾ ।
ನಿರ್ವೃಕ್ಷಾ ನಿಸ್ತೃಣಾ ಭೂಮಿಃ ಕೂರ್ಮಪೃಷ್ಠಾ ಪ್ರಕಾಶತೇ ॥ ೨೩ ॥

ಅಂಬರೀಷಮಿವಾಭಾತಿ ಸರ್ವಮಾಪೂರಿತಂ ಜಗತ್ ।
ಸರ್ವಮೇವ ತದರ್ಚಿರ್ಭಿಃ ಪೂರ್ಣಂ ಜಾಜ್ವಲ್ಯತೇ ಪುನಃ ॥ ೨೪ ॥

ಪಾತಾಲೇ ಯಾನಿ ಸತ್ತ್ವಾನಿ ಮಹೋದಧಿಗತಾನಿ ಚ ।
ತತಸ್ತಾನಿ ಪ್ರಲೀಯಂತೇ ಭೂಮಿತ್ವಮುಪಯಾಂತಿ ಚ । ॥ ೨೫ ॥

ದ್ವೀಪಾಂಶ್ಚ ಪರ್ವತಾಂಶ್ಚೈವ ವರ್ಷಾಣ್ಯಥ ಮಹೋದಧೀನ್ ।
ತಾನ್ ಸರ್ವಾನ್ ಭಸ್ಮಸಾಚ್ಚಕ್ರೇ ಸಪ್ತಾತ್ಮಾ ಪಾವಕಃ ಪ್ರಭುಃ ॥ ೨೬ ॥

---

೨೩. ತರುವಾಯ ಸ್ಥಾವರ-ಜಂಗಮರೂಪವಾದ ಸರ್ವ ಭೂತಗಳು ಲಯ ಹೊಂದಿ ವೃಕ್ಷಗಳಿಂದಲೂ ಹುಲ್ಲುಕಡ್ಡಿಯಿಂದಲೂ ಶೂನ್ಯವಾದ ಭೂಮಿಯು ಆಮೆಯ ಬೆನ್ನಿನಂತೆ ಶೂನ್ಯವಾಗಿ ಪ್ರಕಾಶಿಸುತ್ತದೆ.

೨೪. ಹೀಗೆ ಒಂದು ಕಡೆ ತೇಜದಿಂದ ತುಂಬಿದಂತಿರುವ ಸಂಪೂರ್ಣವಾದ ಜಗತ್ತು ಹುರಿಯುವ ಹೆಂಚಿನಂತೆ ಪ್ರಕಾಶಿಸುತ್ತದೆ. ಆಗ ಆ ತೇಜೋಜ್ವಾಲೆಯು ಮತ್ತೆ ಆ ಎಲ್ಲ ಭೂಮಿಯನ್ನು ಜ್ವಲಿಸುತ್ತದೆ.

೨೫. ಪಾತಾಲದಲ್ಲಿ ಯಾವ ಪ್ರಾಣಿಗಳು ಇರುವುವೊ; ಅಥವಾ ಸಮುದ್ರದಲ್ಲಿ ಯಾವ ಸತ್ವಗಳಿವೆಯೊ; ಅವೆಲ್ಲವೂ ಪ್ರಲಯವನ್ನು ಹೊಂದಿ ಭೂಮಿಯಲ್ಲಿ ಐಕ್ಯವನ್ನು ಹೊಂದುತ್ತವೆ.

೨೬. ಏಳು ಮೂರ್ತಿಗಳನ್ನು ಧರಿಸಿರುವ ಮತ್ತು ಪ್ರಭುವಾದ ಸೂರ್ಯನೆಂಬ ಅಗ್ನಿಯು ದ್ವೀಪಗಳನ್ನೂ, ಪರ್ವತಗಳನ್ನೂ, ವರ್ಷಖಂಡಗಳನ್ನೂ, ಹಾಗು ಮಹಾಸಮುದ್ರಗಳನ್ನೂ ಸುಟ್ಟು ಸಂಪೂರ್ಣವಾಗಿ ಭಸ್ಮಮಾಡುವುದು.

ಸಮುದ್ರೇಭ್ಯೋ ನದೀಭ್ಯಶ್ಚ ಆಪಃ ಶುಷ್ಕಾಶ್ಚ ಸರ್ವಶಃ ।
ಪಿಬನ್ನಪಃ ಸಮಿದ್ಧೋಽಗ್ನಿಃ ಪೃಥಿವೀಮಾಶ್ರಿತೋ ಜ್ವಲನ್ ॥ ೨೭ ॥

ತತಃ ಸಂವರ್ತಕಃ ಶೈಲಾನತಿಕ್ರಮ್ಯ ಮಹಾಂಸ್ತಥಾ ।
ಲೋಕಾನ್ ದಹತಿ ದೀಪ್ತಾತ್ಮಾ ಮಾರುತೇಭ್ಯೋ ವಿಜೃಂಭಿತಃ ॥ ೨೮ ॥

ಸ ದಗ್ಧ್ವಾ ಪೃಥಿವೀಂ ದೇವೋ ರಸಾತಲಮಶೋಷಯತ್ ।
ಅಧಸ್ತಾತ್ ಪೃಥಿವೀಂ ದಗ್ಧ್ವಾ ದಿವಮೂರ್ಧ್ವಂ ದಹಿಷ್ಯತಿ ॥ ೨೯ ॥

ಯೋಜನಾನಾಂ ಶತಾನೀಹ ಸಹಸ್ರಾಣ್ಯಯುತಾನಿ ಚ ।
ಉತ್ತಿಷ್ಠಂತಿ ಶಿಖಾಸ್ತಸ್ಯ ವಹ್ನೇಃ ಸಂವರ್ತಕಸ್ಯ ತು ॥ ೩೦ ॥

---

೨೭. ಸಮುದ್ರಗಳಲ್ಲಿಯೂ, ನದಿಗಳಲ್ಲಿಯೂ ಇರುವ ಸಂಪೂರ್ಣಜಲವು ಒಣಗಿಹೋಗುವುದು. ಅಂತಹ ಜಲವನ್ನು ಪಾನಮಾಡುತ್ತ ಜ್ವಲಿಸುವ ಅಗ್ನಿಯು ಭೂಮಿಯನ್ನು ಆಶ್ರಯಿಸಿ ಜ್ವಲಿಸುವುದು.

೨೮. ತರುವಾಯ ಮಹತ್ತಾದ ಪ್ರಲಯಾಗ್ನಿಯು ಗಾಳಿಯಿಂದ ಅಭಿವೃದ್ಧಿಯನ್ನು ಹೊಂದಿ ದೀಪ್ತವಾದ ಸ್ವರೂಪವುಳ್ಳದ್ದಾಗಿ ಪರ್ವತಗಳನ್ನು ಸುಟ್ಟು ಮುಂದೆ ಲೋಕಗಳನ್ನು ದಹಿಸುತ್ತದೆ.

೨೯. ಆ ಪ್ರಲಯಾಗ್ನಿದೇವನು ಪೃಥಿವಿಯನ್ನು ಭಸ್ಮಮಾಡಿ ಕೆಳಭಾಗದಲ್ಲಿರುವ ಪಾತಾಳವನ್ನು ಶೋಷಣಮಾಡಿದನು. ಹಾಗು ಪೃಥಿವಿಯ ಕೆಳಭಾಗವಾದ ಪಾತಾಳವನ್ನು ದಹಿಸಿ ಊರ್ಧ್ವಲೋಕವಾದ ದ್ಯುಲೋಕವನ್ನು ದಹಿಸಿದನು.

೩೦. ಆಗ ಆ ಪ್ರಲಯಾಗ್ನಿಯ ಜ್ವಾಲೆಗಳು ಸುತ್ತಲೂ ಶತ-ಸಹಸ್ರ-ಅಯುತವೆಂಬ ಹೆಚ್ಚುಸಂಖ್ಯೆಯ ಪರಿಮಾಣದಿಂದ ಲೋಕವನ್ನು ದಹಿಸುತ್ತ ಪ್ರಾದುರ್ಭವಿಸುತ್ತವೆ.

ಗಂಧರ್ವಾಂಶ್ಚ ಪಿಶಾಚಾಂಶ್ಚ ಸಯಕ್ಷೋರಗರಾಕ್ಷಸಾನ್ ।
ತದಾ ದಹತ್ಯಸೌ ದೀಪ್ತಃ ಕಾಲರುದ್ರಪ್ರಚೋದಿತಃ ॥ ೩೧ ॥

ಭೂರ್ಲೋಕಂ ಚ ಭುವರ್ಲೋಕಂ ಮಹರ್ಲೋಕಂ ತಥೈವ ಚ ।
ದಹೇದಶೇಷಂ ಕಾಲಾಗ್ನಿಃ ಕಾಲಾವಿಷ್ಟತನುಃ ಸ್ವಯಮ್ ॥ ೩೨ ॥

ವ್ಯಾಪ್ತೇಷ್ವೇತೇಷು ಲೋಕೇಷು ತಿರ್ಯಗೂರ್ಧ್ವಮಥಾಗ್ನಿನಾ ।
ತತ್ತೇಜಃ ಸಮನುಪ್ರಾಪ್ಯ ಕೃತ್ಸ್ನಂ ಜಗದಿದಂ ಶನೈಃ ॥ ೩೩ ॥

ಆಯೋ ಗೂಢಮಿದಂ ಸರ್ವಂ ತದೇವೈಕಂ ಪ್ರಕಾಶತೇ ॥ ೩೪ ॥

---

೩೧. ಕಾಲರುದ್ರಮೂರ್ತಿಯಿಂದ ಪ್ರೇರೇಪಿಸಲ್ಪಟ್ಟ ಈ ಕಾಲಾಗ್ನಿಯು ಅತಿಶಯವಾಗಿ ಜ್ವಲಿಸುತ್ತ ಗಂಧರ್ವ-ಪಿಶಾಚ, ಯಕ್ಷ, ಸರ್ಪ ಮತ್ತು ರಾಕ್ಷಸರೆಂಬ ಸರ್ವ ಭೂತಗಳನ್ನು ಆ ಪ್ರಲಯದಶೆಯಲ್ಲಿ ದಹಿಸುತ್ತದೆ.

೩೨. ಪ್ರಲಯಾಗ್ನಿಯು ಮೃತ್ಯುದೇವನಿಂದ ಆವೇಶಹೊಂದಿದ ಮೂರ್ತಿಯುಳ್ಳವನಾಗಿ ಭೂಲೋಕ, ಭುವರ್ಲೋಕ, ಸ್ವರ್ಲೋಕ ಮತ್ತು ಮಹರ್ಲೋಕವೆಂಬ ನಾಲ್ಕು ಲೋಕಗಳನ್ನು ನಿಶ್ಶೇಷವಾಗಿ ದಹಿಸುತ್ತಾನೆ.

೩೩. ಹೀಗೆ ಅಗ್ನಿಯಿಂದ ಈ ಲೋಕಗಳೆಲ್ಲವೂ ಕೆಳಗೆ-ಮೇಲೆ-ಅಡ್ಡ ಮುಂತಾದ ಸಕಲ ಭಾಗಗಳಲ್ಲಿಯೂ ಆವರಿಸಲ್ಪಡಲಾಗಿ ಆ ಅಗ್ನಿ ತೇಜಸ್ಸು ಮೆಲ್ಲನೆ ಸಂಪೂರ್ಣವಾಗಿ ಈ ಜಗತ್ತನ್ನು ತನ್ನ ವಶಪಡಿಸಿಕೊಳ್ಳುವುದು.

೩೪. ಆದ್ದರಿಂದ ಎಲ್ಲವೂ ಏಕಕಾರವನ್ನು ಹೊಂದಿ ತನ್ನ ತನ್ನ ವಿಶೇಷಾಂಶಗಳಿಂದ ರಹಿತವೂ, ಗೂಢವೂ ಮತ್ತು ಒಂದೇ ತತ್ತ್ವವಾಗಿಯೂ ಪ್ರಕಾಶಿಸುತ್ತದೆ.

ತತೋ ಗಜಕುಲಾಕಾರಾಸ್ತಡಿದ್ಭಿಃ ಸಮಲಂಕೃತಾಃ ।
ಉತ್ತಿಷ್ಠಂತಿ ತದಾ ವ್ಯೋಮ್ನಿ ಘೋರಾಃ ಸಂವರ್ತಕಾ ಘನಾಃ ॥ ೩೫ ॥

ಕೇಚಿನ್ನೀಲೋತ್ಪಲಶ್ಯಾಮಾಃ ಕೇಚಿತ್ಕುಮುದಸನ್ನಿಭಾಃ ।
ಧೂಮ್ರವರ್ಣಾಸ್ತಥಾ ಕೇಚಿತ್ ಕೇಚಿತ್ ಪೀತಾಃ ಪಯೋಧರಾಃ ॥ ೩೬ ॥

ಕೇಚಿದ್ರಾಸಭವರ್ಣಾಸ್ತು ಲಾಕ್ಷಾರಸನಿಭಾಃ ಪರೇ ।
ಶಂಖಕುಂದನಿಭಾಶ್ಚಾನ್ಯೇ ಜಾತ್ಯಂಜನನಿಭಾಸ್ತಥಾ ॥ ೩೭ ॥

ಮನಃಶಿಲಾಭಾಸ್ತ್ವನ್ಯೇ ಕಪೋತಸದೃಶಾಃ ಪರೇ ।
ಇಂದ್ರಗೋಪನಿಭಾಃ ಕೇಚಿದ್ಧರಿತಾಲನಿಭಾಸ್ತಥಾ ॥ ೩೮ ॥

---

೩೫. ತರುವಾಯ ಆನೆಗಳ ಗುಂಪಿನಂತೆ ಸ್ಥೂಲವಾದ ಆಕಾರವುಳ್ಳವುಗಳೂ, ಮಿಂಚುಗಳಿಂದ ಶೋಭಿಸುವವೂ ಮತ್ತು ಉಗ್ರಮೂರ್ತಿಯೂ ಆದ ಪ್ರಲಯಕಾಲದ ಮೋಡಗಳು ಆಕಾಶದಲ್ಲಿ ಉದಯಿಸುತ್ತವೆ.

೩೬. ಕೆಲವು ಮೋಡಗಳು ಕನ್ನೈದಲೆ ಹೂವಿನಂತೆ ನೀಲವರ್ಣವುಳ್ಳವುಗಳೂ ಮತ್ತೆ ಕೆಲವು ಕುಮುದಪುಷ್ಪದಂತೆ ಬಿಳಿಯವರ್ಣವುಳ್ಳವುಗಳೂ, ಮತ್ತೆ ಕೆಲವು ಧೂಮ್ರವಾದ ವರ್ಣವುಳ್ಳವುಗಳೂ ಹಾಗು ಇನ್ನು ಕೆಲವು ಪೀತವರ್ಣವುಳ್ಳವುಗಳೂ ಆಗಿರುವುವು.

೩೭. ಹಾಗು ಮತ್ತೆ ಕೆಲವು ಮೇಘಗಳು ಗರ್ದಭವರ್ಣದಿಂದಲೂ ಮತ್ತೆ ಕೆಲವು ಅರಗಿನರಸದವರ್ಣದಿಂದಲೂ, ಇನ್ನು ಕೆಲವು ಶಂಖ–ಮಾಘಮಲ್ಲಿಗೆ ಹೂಗಳಂತೆ ಬಿಳಿಯವರ್ಣದಿಂದಲೂ ಮತ್ತು ಕೆಲವು ಜಾತ್ಯಂಜನದಂತೆ ಕೃಷ್ಣವರ್ಣದಿಂದಲೂ ಪ್ರಕಾಶಿಸುವುವು.

೩೮. ಹಾಗು ಮತ್ತೆ ಕೆಲವು ಮೋಡಗಳಿಗೆ ಮನಃಶಿಲೆಯಂತೆಯೂ, ಇನ್ನು ಕೆಲವು ಮೋಡಗಳಿಗೆ ಪಾರಿವಾಳ ಪಕ್ಷಿಗಳಂತೆಯೂ, ಮತ್ತೆ ಕೆಲವು ಮೋಡಗಳಿಗೆ ಇಂದ್ರಗೋಪಕೀಟದಂತೆಯೂ ಮತ್ತು ಇನ್ನು ಕೆಲವು ಮೋಡಗಳಿಗೆ ಹರಿತಾಲದಂತೆಯೂ ನಾನಾ ವಿಧವಾದ ವರ್ಣಗಳಿರುವುವು.

ಇಂದ್ರಚಾಪನಿಭಾಃ ಕೇಚಿದುತ್ತಿಷ್ಠಂತಿ ಘನಾ ದಿವಿ ।
ಕೇಚಿತ್ಪರ್ವತಸಂಕಾಶಾಃ ಕೇಚಿದ್ಗಜಕುಲೋಪಮಾಃ ॥ ೩೯ ॥

ಕೇಟಾಂಗಾರನಿಭಾಶ್ಚಾನ್ಯೇ ಕೇಚಿನ್ಮೀನಕುಲೋದ್ವಹಾಃ ।
ಬಹುರೂಪಾ ಘೋರರೂಪಾ ಘೋರಸ್ವರನಿನಾದಿನಃ ॥ ೪೦ ॥

ತದಾ ಜಲಧರಾಃ ಸರ್ವೇ ಪೂರಯಂತಿ ನಭಸ್ತಲಮ್ ॥ ೪೧ ॥

ತತಸ್ತೇ ಜಲದಾ ಘೋರಾ ರಾವಿಣೋ ಭಾಸ್ಕರಾತ್ಮಜಾಃ ।
ಸಪ್ತಧಾ ಸಂವೃತಾತ್ಮಾನಂ ತಮಗ್ನಿಂ ಶಮಯಂತಿ ತೇ ॥ ೪೨ ॥

---

೩೯. ಕೆಲವು ಮೋಡಗಳು ಕಾಮನಬಿಲ್ಲಿನಂತೆ ಕಾಂತಿಯುಳ್ಳವುಗಳಾಗಿ ಆಕಾಶದಲ್ಲಿ ಉದಯಿಸುತ್ತವೆ. ಹಾಗು ಈ ಮೇಘಗಳಲ್ಲಿ ಕೆಲವು ಬೆಟ್ಟಗಳಂತೆಯೂ ಇನ್ನು ಕೆಲವು ಆನೆಗಳ ಗುಂಪಿನಂತೆಯೂ ಸ್ಥೂಲವಾದ ಆಕಾರದಿಂದ ಕೂಡಿ ಕೊಂಡಿರುವುವು.

೪೦. ಕೆಲವು ಮೇಘಗಳು ಬೆಂಕಿಯ ಕೆಂಡಗಳ ಗುಂಪಿನಂತೆಯೂ ಮತ್ತೆ ಕೆಲವು ಮತ್ಸ್ಯಗಳ ಸಮೂಹದಂತೆಯೂ ಹೀಗೆ ಅನೇಕ ಘೋರ ರೂಪಗಳನ್ನು ಹೊಂದಿರುವುವುಗಳೂ ಮತ್ತು ಉಗ್ರವಾದ ಧ್ವನಿಯಿಂದ ಗರ್ಜಿಸುವುವೂ ಆಗಿದ್ದುವು.

೪೧. ಹಿಂದೆ ಹೇಳಿರುವಂತೆ ನಾನಾರೂಪ ವಿಕಾರಗಳಿಂದ ಕೂಡಿದ ಮೇಘ ಪಂಕ್ತಿಗಳು ಆವಿರ್ಭಾವವನ್ನು ಹೊಂದಿ ಆಕಾಂಶಾಂಗಣವನ್ನು ಸಂಪೂರ್ಣವಾಗಿ ವ್ಯಾಪಿಸಿದುವು.

೪೨. ತರುವಾಯ ಸೂರ್ಯದೇವನಿಂದ ಉತ್ಪನ್ನವಾದ ಮತ್ತು ಘೋರವಾದ ಗರ್ಜನೆಯುಳ್ಳ ಮೇಘಗಳು ಮಳೆಯನ್ನು ಸುರಿಸಿ ಏಳು ಸಂಖ್ಯೆಯಿಂದ ಧರಿಸಿದ ಮೂರ್ತಿಯುಳ್ಳ ಆ ಅಗ್ನಿಯನ್ನು ಶಮನಮಾಡುತ್ತವೆ.

ತತಸ್ತೇ ಜಲದಾ ವರ್ಷಂ ಮುಂಚಂತೀಹ ಮಹೌಘವತ್ ।
ಸುಘೋರಮಶಿವಂ ವರ್ಷಂ ನಾಶಯಂತಿ ಚ ಪಾವಕಮ್ ॥ ೪೩ ॥

ಅತಿವೃದ್ಧಂ ತದಾತ್ಯರ್ಥಮಂಭಸಾ ಪೂರ್ಯತೇ ಜಗತ್ ।
ಅದ್ಭಿಸ್ತೇಽಂಭೋಽಭಿಭೂತತ್ವಾತ್ತದಗ್ನಿಃ ಪ್ರವಿಶತ್ಯಪಃ ॥ ೪೪ ॥

ನಷ್ಟೇ ಚಾಗ್ನೌ ವರ್ಷಶತೈಃ ಪಯೋದಾಃ ಕ್ಷಯಸಂಭವಾಃ ।
ಪ್ಲಾವಯಂತೋ ಜಗತ್ಸರ್ವಂ ಮಹಾಜಲಪರಿಸ್ರವೈಃ ॥ ೪೫ ॥

ಧಾರಾಭಿಃ ಪೂರಯಂತೀದಂ ನೋದ್ಯಮಾನಾಃ ಸ್ವಯಂಭುವಾ ।
ಅತ್ಯಂತಸಲಿಲೌಘಾಸ್ತು ವೇಲಾ ಇವ ಮಹೋದಧೇಃ ॥ ೪೬ ॥

---

೪೩. ಈ ಪ್ರಲಯಸಮಯದಲ್ಲಿ ಮೇಘಗಳು ಮಹಾಪ್ರವಾಹದಂತೆ ಧಾರಾಕಾರವಾಗಿ ಮಹಾವೃಷ್ಟಿಯನ್ನು ಸುರಿಸುತ್ತವೆ. ಆ ವೃಷ್ಟಿಯು ಅತಿಘೋರವೂ ನಾಶಸೂಚಕವಾಗಿ ಅಶಿವವೂ ಆಗಿರುವುದು. ಅಂತಹ ವೃಷ್ಟಿಯಿಂದ ಆ ಅಗ್ನಿಯನ್ನು ಶಮನಮಾಡುತ್ತವೆ.

೪೪. ಆಗ ಜಲರಾಶಿಯಿಂದ ಮಿಶ್ರವಾಗಿ ಅತಿಯಾಗಿ ವೃದ್ಧಿಹೊಂದಿರುವ ಸಮಸ್ತ ಜಗತ್ತು ಜಲದಿಂದ ಪೂರ್ಣವಾಗಿ ಮುಳುಗಿಹೋಗುವುದು. ಮತ್ತು ಜಲರಾಶಿಯಿಂದ ತಿರಸ್ಕಾರಹೊಂದಿದ ಅಗ್ನಿಯು ಜಲವನ್ನು ಪ್ರವೇಶಿಸುವುದು.

೪೫. ಪ್ರಲಯದಶೆಯಲ್ಲಿ ಹುಟ್ಟಿ ಮೇಘಗಳು ಅನೇಕಸಂಖ್ಯೆಯ ಧಾರಾವೃಷ್ಟಿಗಳಿಂದ ಅಗ್ನಿಯನ್ನು ಶಮನಮಾಡಿ ಮಹತ್ತಾದ ಜಲಪ್ರವಾಹಗಳಿಂದ ಸರ್ವಜಗತ್ತನ್ನು ತೇಲಾಡಿಸುತ್ತವೆ.

೪೬. ಪ್ರಜಾಪತಿಯಿಂದ ಪ್ರೇರೇಪಿಸಲ್ಪಟ್ಟ ಮತ್ತು ಮಹತ್ತಾದ ಜಲಪ್ರವಾಹವುಳ್ಳ ಮೋಡಗಳು ಮಹೋದಧಿಯ ತೀರಭೂಮಿಯಂತೆ ವೃಷ್ಟಿ ಧಾರೆಗಳಿಂದ ಈ ಸಂಪೂರ್ಣಜಗತ್ತನ್ನು ಪೂರಣಮಾಡುತ್ತವೆ.

ಸಾದ್ರಿದ್ವೀಪಾ ತತಃ ಪೃಥ್ವೀ ಜಲೈಃ ಸಂಛಾದ್ಯತೇ ಶನೈಃ ॥ ೪೭ ॥

ಆದಿತ್ಯರಶ್ಮಿಭಿಃ ಪೀತಂ ಜಲಮಭ್ರೇಷು ತಿಷ್ಠತಿ ।
ಪುನಃ ಪತತಿ ತದ್ಭೂಮೌ ಪೂರ್ಯಂತೇ ತೇನ ಚಾರ್ಣವಾಃ ॥ ೪೮ ॥

ತತಃ ಸಮುದ್ರಾಃ ಸ್ವಾಂ ವೇಲಾಮತಿಕ್ರಾಂತಾಸ್ತು ಕೃತ್ಸ್ನಶಃ ।
ಪರ್ವತಾಶ್ಚ ವಿಲೀಯಂತೇ ಮಹೀ ಚಾಪ್ಸು ನಿಮಜ್ಜತಿ ॥ ೪೯ ॥

ತಸ್ಮಿನ್ನೇಕಾರ್ಣವೇ ಘೋರೇ ನಷ್ಟೇ ಸ್ಥಾವರಜಂಗಮೇ ।
ಯೋಗನಿದ್ರಾಂ ಸಮಾಸ್ಥಾಯ ಶೇತೇ ದೇವಃ ಪ್ರಜಾಪತಿಃ ॥ ೫೦ ॥

---

೪೭. ಈ ರೀತಿಯಾಗಿ ಪ್ರಲಯಕಾಲದ ಮೇಘಗಳ ಅನಂತ ವೃಷ್ಟಿಪಾತದಿಂದ ಬೆಟ್ಟಗಳಿಂದಲೂ ದ್ವೀಪಗಳಿಂದಲೂ ಕೂಡಿ ಸಂಪೂರ್ಣ ಪೃಥಿವಿಯು ಮೆಲ್ಲಗೆ ನೀರಿನಿಂದ ಮುಚ್ಚಿಹೋಗುತ್ತದೆ.

೪೮. ಸೂರ್ಯನ ರಶ್ಮಿಗಳಿಂದ ಪಾನಮಾಡಲ್ಪಟ್ಟಿರುವ ಜಲವು ಮೋಡಗಳಲ್ಲಿ ಇರುವುದು. ಅಲ್ಲಿಂದ ಮತ್ತೆ ಆ ಜಲವು ಭೂಮಿಯಲ್ಲಿ ಬೀಳುವುದು. ಅದರಿಂದ ಸಮುದ್ರಗಳೆಲ್ಲವೂ ತುಂಬುತ್ತವೆ.

೪೯. ತರುವಾಯ ಸಮುದ್ರಗಳು ಸಂಪೂರ್ಣವಾಗಿ ತಮ್ಮ ಸೀಮಾಭೂಮಿಯನ್ನು ಮೀರುರುವಂತೆ ಉಕ್ಕುತ್ತವೆ. ಪರ್ವತಗಳು ಕರಗಿಹೋಗುತ್ತವೆ. ಮತ್ತು ಭೂಮಿಯು ನೀರಿನಲ್ಲಿ ಮುಳುಗಿ ಹೋಗುತ್ತದೆ.

೫೦. ಪ್ರಜೆಗಳ ಪಾಲಕನಾದ ಪರಮಾತ್ಮನು ಘೋರ ಪ್ರಲಯದಲ್ಲಿ ಜಗತ್ತು ಎಲ್ಲ ಏಕಾರ್ಣವದಂತೆ ಆಗಿ, ಸ್ಥಾವರ ಮತ್ತು ಜಂಗಮ ಪ್ರಾಣಿಗಳು ನಷ್ಟವಾಗಲಾಗಿ ಯೋಗನಿದ್ರೆಯನ್ನು ಅವಲಂಬಿಸಿ ಶಯನಮಾಡುವನು.

ಚತುರ್ಯುಗಸಹಸ್ರಾಂತಂ ಕಲ್ಪಮಾಹುರ್ಮನೀಷಿಣಃ ।
ವಾರಾಹೋ ವರ್ತತೇ ಕಲ್ಪೋ ಯಸ್ಯ ವಿಸ್ತರ ಈರಿತಃ ॥ ೫೧ ॥

ಅಸಂಖ್ಯಾತಾಸ್ತಥಾ ಕಲ್ಪಾ ಬ್ರಹ್ಮ ವಿಷ್ಣುಶಿವಾತ್ಮಕಾಃ ।
ಕಥಿತಾ ಹಿ ಪುರಾಣೇಷು ಮುನಿಭಿಃ ಕಾಲಚಿಂತಕೈಃ ॥ ೫೨ ॥

ಸಾತ್ತ್ವಿಕೇಷ್ವಥ ಕಲ್ಪೇಷು ಮಾಹಾತ್ಮ್ಯಮಧಿಕಂ ಹರೇಃ ।
ತಾಮಸೇಷು ಹರಸ್ಯೋಕ್ತಂ ರಾಜಸೇಷು ಪ್ರಜಾಪತೇಃ ॥ ೫೩ ॥

ಯೋಽಯಂ ಪ್ರವರ್ತತೇ ಕಲ್ಪೋ ವಾರಾಹಃ ಸಾತ್ತ್ವಿಕೋ ಮತಃ ।
ಅನ್ಯೇ ಚ ಸಾತ್ತ್ವಿಕಾಃ ಕಲ್ಪಾ ಮಮ ತೇಷು ಪರಿಗ್ರಹಃ ॥ ೫೪ ॥

---

೫೧. ಒಂದು ಕಲ್ಪವು ಸಹಸ್ರಸಂಖ್ಯೆಯಷ್ಟು ಆವೃತ್ತಿಯಾಗಿ ನಾಲ್ಕುಯುಗಗಳು ಕಳೆಯುವಷ್ಟು ಪರಿಮಾಣದಲ್ಲಿರುವುದೆಂದು ವಿದ್ವಾಂಸರು ಹೇಳುವರು. ಈಗ ವಾರಾಹಕಲ್ಪವು ನಡೆಯುತ್ತಿರುವುದು. ಇದರ ವಿಸ್ತಾರವು ಹೇಳಲ್ಪಟ್ಟಿದೆ.

೫೨. ಮಹಿಮೆಯ ವಿಮರ್ಶಕರಾದ ಮುನಿಗಳಿಂದ ಬ್ರಹ್ಮ-ವಿಷ್ಣು-ಶಿವಸ್ವರೂಪವಾದ ಸಂಖ್ಯೆಯಿಲ್ಲದಷ್ಟು ಅನಂತಕಲ್ಪಗಳು ಪುರಾಣಗಳಲ್ಲಿ ಹೇಳಲ್ಪಟ್ಟಿರುತ್ತವೆ.

೫೩. ಈ ಕಲ್ಪಗಳ ಪೈಕಿ ಸಾತ್ವಿಕವಾದ ಕಲ್ಪಗಳಲ್ಲಿ ಶ್ರೀಮನ್ನಾರಾಯಣನ ಮಾಹಾತ್ಮ್ಯವು ಅಧಿಕವಾಗಿರುವುದು. ತಾಮಸಕಲ್ಪಗಳಲ್ಲಿ ಈಶ್ವರಮಾಹಾತ್ಮ್ಯವು ಅಧಿಕವಾಗಿರುವುದು. ಮತ್ತು ರಾಜಸಕಲ್ಪಗಳಲ್ಲಿ ಬ್ರಹ್ಮದೇವನ ಮಾಹಾತ್ಮ್ಯವು ಅಧಿಕವಾಗಿರುವುದೆಂದು ಹೇಳಲ್ಪಟ್ಟಿದೆ.

೫೪. ಈಗ ನಡೆಯುತ್ತಿರುವ ಈ ವಾರಾಹ ಕಲ್ಪವು ಸಾತ್ತ್ವಿಕ ಕಲ್ಪವೆಂದು ಸಮ್ಮತವಾಗಿದೆ. ಇನ್ನೂ ಇತರ ಅನೇಕ ಸಾತ್ತ್ವಿಕ ಕಲ್ಪಗಳು ಇರುವುವು. ಅವುಗಳಲ್ಲಿ ನನಗೆ ಮಾಹಾತ್ಮ್ಯಾಭಿಮಾನಗಳು ವಿಶೇಷವಾಗಿರುವುವು.

ಧ್ಯಾನಂ ತಪಸ್ತಥಾ ಜ್ಞಾನಂ ಲಬ್ಧ್ವಾ ತೇ ಯೋಗಿನಃ ಪರಮ್ ।
ಆರಾಧ್ಯ ತಂ ಚ ಗಿರಿಶಂ ಯಾಂತಿ ತತ್ಪರಮಂ ಪದಮ್ ॥ ೫೫ ॥

ಸೋಽಹಂ ತತ್ತ್ವಂ ಸಮಾಸ್ಥಾಯ ಮಾಯೀ ಮಾಯಾಮಯೀಂ
ಸ್ವಯಮ್ ।
ಏಕಾರ್ಣವೇ ಜಗತ್ಯಸ್ಮಿನ್ ಯೋಗನಿದ್ರಾಂ ವ್ರಜಾಮಿ ತು ॥ ೫೬ ॥

ಮಾಂ ಪಶ್ಯಂತಿ ಮಹಾತ್ಮಾನಃ ಸುಪ್ತಿಕಾಲೇ ಮಹರ್ಷಯಃ ।
ಜನಲೋಕೇ ವರ್ತಮಾನಾಸ್ತಾಪಸಾ ಯೋಗಚಕ್ಷುಷಾ ॥ ೫೭ ॥

ಅಹಂ ಪುರಾಣಃ ಪುರುಷೋ ಭೂರ್ಭುವಃಪ್ರಭವೋ ವಿಭುಃ ।
ಸಹಸ್ರಚರಣಃ ಶ್ರೀಮಾನ್ ಸಹಸ್ರಾಕ್ಷಃ ಸಹಸ್ರಪಾತ್ ॥ ೫೮ ॥

---

೫೫. ಯೋಗಾಭ್ಯಾಸ ತತ್ಪರರು ಧ್ಯಾನ, ತಪಸ್ಸು, ಜ್ಞಾನ ಮುಂತಾದ ಉತ್ತಮ ಸಾಧನಗಳನ್ನು ಹೊಂದಿ ಕೈಲಾಸಾದ್ರಿವಿಹಾರಿಯಾದ ಈಶ್ವರನನ್ನು ಆರಾಧಿಸಿ ಪರಮಪದವನ್ನು ಹೊಂದುತ್ತಾರೆ.

೫೬. ಮಾಯಾಶ್ರಯನಾದ ನಾನು ಪರತತ್ತ್ವರೂಪವನ್ನು ಹೊಂದಿ ಈ ಜಗತ್ತೆಲ್ಲವೂ ಏಕಾರ್ಣವಪ್ರಾಯವಾಗಿರಲು ಸ್ವಸಂಕಲ್ಪದಿಂದಲೆ ಮಾಯಾರೂಪವಾದ ಯೋಗನಿದ್ರೆಯನ್ನು ಅನುಭವಿಸುತ್ತೇನೆ.

೫೭. ಜನೋಲೋಕದಲ್ಲಿ ವಾಸಮಾಡುತ್ತಿರುವವರೂ, ಮಹಾತ್ಮರೂ, ತಪಸ್ವಿಗಳೂ ಆದ ಮಹರ್ಷಿಗಳು ಸ್ವಾಪಸುಖದಲ್ಲಿರುವ ನನ್ನನ್ನು ಯೋಗದೃಷ್ಟಿಯಿಂದ ನೋಡುತ್ತಾರೆ.

೫೮. ನಾನು ಪರಮಾರ್ಥರೂಪದಿಂದ ಪುರಾಣಪುರುಷನೂ, ಭೂಲೋಕ ಭುವರ್ಲೋಕಗಳಿಗೆ ಪ್ರಭುವೂ, ವ್ಯಾಪಕನೂ, ಸಹಸ್ರಸಂಖ್ಯೆಯಷ್ಟು ಶಿರ-ನೇತ್ರ ಪಾದಗಳಿಂದ ಕೂಡಿದವನೂ ಮತ್ತು ಅಪಾರಮಹಿಮೆಯುಳ್ಳವನೂ ಆಗಿದ್ದೇನೆ.

ಮಂತ್ರೋಽಹಂ ಬ್ರಾಹ್ಮಣಾ ಗಾವಃ ಕುಶೋಽಥ ಸಮಿಧೋ ಹವಿಃ ।
ಪ್ರೋಕ್ಷಣೀಯಂ ಸ್ವಯಂ ಚೈವ ಸೋಮೋ ವ್ರತಮಥಾಸ್ಮ್ಯಹಮ್ ॥

ಸಂವರ್ತಕೋ ಮಹಾನಾತ್ಮಾ ಪವಿತ್ರಂ ಪರಮಂ ಯಶಃ ।
ಮೇಧಾಪ್ಯಹಂ ಪ್ರಭುರ್ಗೋಪ್ತಾ ಗೋಪತಿರ್ಬ್ರಾಹ್ಮಣೋ ಮುಖಮ್॥

ಅನಂತಸ್ತಾರಕೋ ಯೋಗೀ ಗತಿರ್ಗತಿಮತಾಂ ವರಃ ।
ಹಂಸಃ ಪ್ರಾಣೋಽಥ ಕಪಿಲೋ ವಿಶ್ವಮೂರ್ತಿಃ ಸನಾತನಃ ॥ ೬೧ ॥

ಕ್ಷೇತ್ರಜ್ಞಃ ಪ್ರಕೃತಿಃ ಕಾಲೋ ಜಗದ್ಬೀಜಮಥಾಮೃತಮ್ ।
ಮಾತಾ ಪಿತಾ ಮಹಾದೇವೋ ಮತ್ತೋ ಹ್ಯನ್ಯೋ ನ ವಿದ್ಯತೇ ॥ ೬೨ ॥

---

೫೯. ಈ ಜಗತ್ತಿನಲ್ಲಿ ಮಂತ್ರ, ಬ್ರಾಹ್ಮಣ, ಗೋವು, ದರ್ಭ, ಸಮಿತ್ತು ಪ್ರೋಕ್ಷಣೆಗೆ ಅರ್ಹವಾದ ಹವಿಸ್ಸು, ಸೋಮಲತೆ ಮುಂತಾದ ಯಜ್ಞಾಂಗಸಾಧನಗಳೂ ಮತ್ತು ವ್ರತವೂ ನನ್ನ ವಿಭೂತಿಯಿಂದ ಕೂಡಿ ಸಂಭವಿಸಿದೆ.

೬೦. ಮತ್ತು ಪ್ರಲಯನಿರ್ವರ್ತಕನಾದ ಕಾಲಾತ್ಮನೂ, ಮಹಾತ್ಮನೂ, ಪವಿತ್ರನೂ, ಉತ್ತಮನೂ, ಯಶೋರೂಪನೂ, ಮೇಧಾರೂಪನೂ, ಪ್ರಭುವೂ, ಸರ್ವ ರಕ್ಷಕನೂ, ಗೋವುಗಳ ಪತಿಯೂ, ಬ್ರಾಹ್ಮಣನೂ ಮತ್ತು ಮುಖಸ್ವರೂಪನೂ ಆಗಿದ್ದೇನೆ.

೬೧. ಮತ್ತು ಅಂತವಿಲ್ಲದವನೂ ಸರ್ವರನ್ನು ಉದ್ಧರಿಸುವವನೂ ಯೋಗಿಯೂ ಸದ್ಗತಿರೂಪನೂ ಗತಿಯನ್ನು ಹೊಂದಿದವರಲ್ಲಿ ಶ್ರೇಷ್ಠನೂ ವ್ಯಾಪನ ಶೀಲನೂ ಸರ್ವವ್ಯಾಪಾರನಿಯಾಮಕನೂ, ಕಪಿಲರೂಪನೂ ವಿಶ್ವಾಕಾರನೂ ಮತ್ತು ಅನಾದಿಯೂ ಆಗಿದ್ದೇನೆ.

೬೨. ಹಾಗು ಕ್ಷೇತ್ರಜ್ಞ, ಪ್ರಕೃತಿ, ಕಾಲ, ಜಗತ್ತಿನಮೂಲ, ಮತ್ತು ಅಮೃತ ವೆಂಬ ಸರ್ವತತ್ತ್ವಸ್ವರೂಪನೂ ನಾನೇ ಆಗಿದ್ದೇನೆ. ಮತ್ತು ನಾನು ದೇವೋತ್ತ ಮನೂ ಮಾತಾಪಿತೃರೂಪನೂ ಆಗಿರುವೆನು. ನನಗಿಂತ ಬೇರೊಬ್ಬನು ಇರುವುದಿಲ್ಲ.

ಆದಿತ್ಯವರ್ಣೋ ಭುವನಸ್ಯ ಗೋಪ್ತಾ
ನಾರಾಯಣಃ ಪುರುಷೋ ಯೋಗಮೂರ್ತಿಃ ।

ತಂ ಪಶ್ಯಂತೇ ಯತಯೋ ಯೋಗನಿಷ್ಠಾ
ಜ್ಞಾತ್ವಾತ್ಮಾನಂ ಮಮ ತತ್ತ್ವಂ ವ್ರಜಂತಿ ॥ ೬೩ ॥

ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇ
ಅಷ್ಟಾನವತಿತಮೋಽಧ್ಯಾಯಃ.

---

೬೩. ಮತ್ತು ಆದಿತ್ಯನಂತೆ ಉಜ್ವಲವರ್ಣವುಳ್ಳವನೂ, ಭುವನವನ್ನು ರಕ್ಷಿಸುವವನೂ, ಸಮುದ್ರಶಾಯಿಯೂ, ಪುರುಷಾಕಾರನೂ ಮತ್ತು ಯೋಗಮಯವಾದ ಮೂರ್ತಿಯುಳ್ಳವನೂ ಆಗಿದ್ದೇನೆ. ಯೋಗಾಭ್ಯಾಸತತ್ಪರರಾದ ಯತಿಗಳು ಪರಮಾತ್ಮನಾದ ನನ್ನನ್ನು ಸಾಕ್ಷಾತ್ಕರಿಸುತ್ತಾರೆ. ಹಾಗೆ ಸ್ವಸ್ವರೂಪವನ್ನು ಸಾಕ್ಷಾತ್ಕರಿಸಿ ನನ್ನ ಪರಮಪದವೆಂಬ ಕೈವಲ್ಯವನ್ನು ಹೊಂದುತ್ತಾರೆ.

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ತೊಂಭತ್ತೆಂಟನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಕೂರ್ಮಪುರಾಣಂ

---

## ಏಕೋನಶತತಮೋಽಧ್ಯಾಯಃ.

**ಕೂರ್ಮ ಉವಾಚ :—**

**ಅತಃ ಪರಂ ಪ್ರವಕ್ಷ್ಯಾಮಿ ಪ್ರತಿಸರ್ಗಮನುತ್ತಮಮ್ ।**
**ಪ್ರಾಕೃತಂ ತತ್ಸಮಾಸೇನ ಶೃಣುಧ್ವಂ ಗದತೋ ಮಮ ॥ ೧ ॥**

**ಗತೇ ಪರಾರ್ಧದ್ವಿತಯೇ ಕಾಲೇ ಲೋಕಪ್ರಕಾಲನಃ ।**
**ಕಾಲಾಗ್ನಿರ್ಭಸ್ಮಸಾತ್ಕರ್ತುಂ ಚರತೇ ಚಾಖಿಲಂ ಜಗತ್ ॥ ೨ ॥**

---

## ತೊಂಭತ್ತೊಂಭತ್ತನೆಯ ಅಧ್ಯಾಯವು

೧. ಕೂರ್ಮಮೂರ್ತಿಯು ಇಂತೆಂದನು:— ಮುನಿಗಳೆ! ಇನ್ನುಮುಂದೆ ಸರ್ವೋತ್ತಮವಾದ ಪ್ರಾಕೃತವೆಂಬ ಪ್ರಲಯವನ್ನು ವರ್ಣಿಸುತ್ತೇನೆ. ಸಂಗ್ರಹವಾಗಿ ನಾನು ವರ್ಣಿಸುವುದನ್ನು ನೀವು ಕೇಳಿರಿ.

೨. ಎರಡು ಪರಾರ್ಧಭಾಗಗಳಷ್ಟು ಕಾಲವು ಕಳೆಯಲು ಲೋಕವನ್ನು ಸಂಹರಿಸುವ ಶೀಲವುಳ್ಳ ಕಾಲಾಗ್ನಿಯು ನಿಶ್ಶೇಷವಾಗಿ ಜಗತ್ತನ್ನು ಭಸ್ಮವನ್ನಾಗಿ ಮಾಡಲು ಪ್ರಪಂಚದಲ್ಲಿ ಸಂಚರಿಸುತ್ತಾನೆ.

ಸ್ವಾತ್ಮನ್ಯಾತ್ಮಾನಮಾವೇಶ್ಯ ಭೂತ್ವಾ ದೇವೋ ಮಹೇಶ್ವರಃ ।
ದಹೇದಶೇಷಂ ಬ್ರಹ್ಮಾಂಡಂ ಸದೇವಾಸುರಮಾನುಷಮ್ ॥ ೩ ॥

ತಮಾವಿಶ್ಯ ಮಹಾದೇವೋ ಭಗವಾನ್ನೀಲಲೋಹಿತಃ ।
ಕರೋತಿ ಲೋಕಸಂಹಾರಂ ಭೀಷಣಂ ರೂಪಮಾಶ್ರಿತಃ ॥ ೪ ॥

ಪ್ರವಿಶ್ಯ ಮಂಡಲಂ ಸೌರಂ ಕೃತ್ವಾಽಸೌ ಬಹುಧಾ ಪುನಃ ।
ನಿರ್ದಹತ್ಯಖಿಲಂ ಲೋಕಂ ಸಪ್ತಸಪ್ತಿಸ್ವರೂಪಧೃಕ್ ॥ ೫ ॥

ಸ ದಗ್ಧ್ವಾ ಸಕಲಂ ವಿಶ್ವಮಸ್ತ್ರಂ ಬ್ರಹ್ಮಶಿರೋ ಮಹತ್ ।
ದೇವತಾನಾಂ ಶರೀರೇಷು ಕ್ಷಿಪತ್ಯಖಿಲದಾಹಕಮ್ ॥ ೬ ॥

---

೩. ಮಹೇಶ್ವರಸ್ವಾಮಿಯು ಕಾಲಾಗ್ನಿರೂಪದಿಂದ ತನ್ನ ಆತ್ಮರೂಪವನ್ನು ಸ್ವಾತ್ಮಮಹಿಮೆಯಲ್ಲಿ ಧಾರಣಮಾಡಿ ದೇವತೆ-ಅಸುರ ಮತ್ತು ಮನುಷ್ಯರಿಂದ ಕೂಡಿದ ಸಂಪೂರ್ಣಬ್ರಹ್ಮಾಂಡವನ್ನು ಭಸ್ಮಮಾಡುವನು.

೪. ಷಡ್ಗುಣ ಸಂಪನ್ನನೂ, ನೀಲ-ಲೋಹಿತ ವರ್ಣಗಳಿಂದ ಕೂಡಿದವನೂ ಆದ ಮಹಾದೇವಸ್ವಾಮಿಯು ಕಾಲಾಗ್ನಿಮೂರ್ತಿಯಲ್ಲಿ ಆವೇಶಹೊಂದಿ ಭಯಂಕರವಾದ ರೂಪವನ್ನು ಹೊಂದಿದವನಾಗಿ ಲೋಕಗಳ ಸಂಹಾರವನ್ನು ಮಾಡುತ್ತಾನೆ.

೫. ಮತ್ತು ಮಹೇಶ್ವರನು ಸೂರ್ಯಮಂಡಲವನ್ನು ಪ್ರವೇಶಿಸಿ ಮತ್ತೆ ಅದನ್ನು ಬಹುರೂಪವಾಗಿ ಮಾಡಿಕೊಂಡು ಏಳು ಸೂರ್ಯಬಿಂಬರೂಪವನ್ನು ಧರಿಸಿ ಸಮಸ್ತ ಲೋಕಗಳನ್ನು ದಹಿಸುತ್ತಾನೆ.

೬. ಮತ್ತು ಮಹೇಶ್ವರನು ಈ ರೀತಿಯಾಗಿ ಸರ್ವವಿಶ್ವವನ್ನೂ ದಹಿಸಿ ಬ್ರಹ್ಮಶಿರವೆಂಬ ಮಹತ್ತಾದ ಅಸ್ತ್ರವನ್ನು ತೆಗೆದುಕೊಂಡು ಎಲ್ಲವನ್ನೂ ದಹನಮಾಡುವ ವೀರ್ಯವುಳ್ಳ ಆ ಅಸ್ತ್ರವನ್ನು ದೇವತೆಗಳ ಶರೀರಗಳಲ್ಲಿ ಪ್ರಯೋಗಿಸುತ್ತಾನೆ.

ದಗ್ಧೇಷ್ವಶೇಷದೇವೇಷು ದೇವೀ ಗಿರಿವರಾತ್ಮಜಾ ।
ಏಷಾ ಸಾ ಸಾಕ್ಷಿಣೀ ಶಂಭೋಸ್ತಿಷ್ಠತೇ ವೈದಿಕೀ ಶ್ರುತಿಃ ॥ ೭ ॥

ಶಿರಃಕಪಾಲೈರ್ದೇವಾನಾಂ ಕೃತಸ್ರಗ್ವರಭೂಷಣಃ ।
ಆದಿತ್ಯಚಂದ್ರಾದಿಗಣೈಃ ಪೂರಯನ್ ವ್ಯೋಮಮಂಡಲಮ್ ॥ ೮ ॥

ಸಹಸ್ರನಯನೋ ದೇವಃ ಸಹಸ್ರಾಕ್ಷ ಇತೀಶ್ವರಃ ।
ಸಹಸ್ರಹಸ್ತಚರಣಃ ಸಹಸ್ರಾರ್ಚಿರ್ಮಹಾಭುಜಃ ॥ ೯ ॥

ದಂಷ್ಟ್ರಾಕರಾಲವದನಃ ಪ್ರದೀಪ್ತಾನಲಲೋಚನಃ ।
ತ್ರಿಶೂಲಕೃತ್ತಿವಸನೋ ಯೋಗಮೈಶ್ವರಮಾಸ್ಥಿತಃ ॥ ೧೦ ॥

---

೭. ಆಗ ಸಮಸ್ತ ದೇವತೆಗಳು ದಗ್ಧರಾಗಿ ಹೋಗಲು ಪರ್ವತರಾಜನ ಪುತ್ರಿಯಾದ ದೇವಿಯು ಮಹೇಶ್ವರನ ಕಾಲಸಂಹಾರಮೂರ್ತಿಗೆ ಸಾಕ್ಷಿಣಿಯಾಗಿ ಇರುವಳು—ಎಂದು ವೇದವಾಕ್ಯಗಳಲ್ಲಿ ಘಂಟಾಘೋಷವಾಗಿದೆ.

೮. ಆಗ ಸಂಹಾರಮೂರ್ತಿಯು ದೇವತೆಗಳ ಶಿರಃಕಪಾಲಗಳಿಂದ ಶ್ರೇಷ್ಠವಾದ ಹಾರಾದಿಭೂಷಣಗಳನ್ನು ರಚಿಸಿಕೊಂಡಿರುವವನೂ ಆದಿತ್ಯ-ಚಂದ್ರ ಮುಂತಾದ ರೂಪದ ಗಣಪರಿವಾರದಿಂದ ಗಗನಮಂಡಲವನ್ನು ಪೂರ್ಣಮಾಡುವವನೂ ಆಗಿ ಶೋಭಿಸುವನು.

೯. ಮತ್ತು ಆ ಸಂಹಾರಮೂರ್ತಿಯು ಸಹಸ್ರ ಸಂಖ್ಯೆಯ ಶಿರ, ನಯನ, ಹಸ್ತ, ಪಾದ, ಮತ್ತು ಜ್ವಾಲೆಗಳಿಂದ ಕೂಡಿದ ಮಹಾ ಕರಾಲಮೂರ್ತಿಯೂ ಮಹಾ ಭುಜಗಳಿಂದ ಶೋಭಿತನೂ ಆಗಿ ಪ್ರಕಾಶಿಸುವನು.

೧೦. ಮತ್ತು ಕೋರೆಹಲ್ಲುಗಳಿಂದ ವಿಕರಾಲವಾದ ಮುಖವುಳ್ಳವನೂ, ಜ್ವಲಿಸುತ್ತಿರುವ ಅಗ್ನಿಯಂತೆ ಇರುವ ನಯನವುಳ್ಳವನೂ ತ್ರಿಶೂಲ ಗಜಚರ್ಮಗಳನ್ನು ಧರಿಸಿದವನೂ ಮತ್ತು ತನ್ನ ಐಶ್ವರಯೋಗವನ್ನು ಅವಲಂಬಿಸಿದವನೂ ಆಗುವನು.

ಪೀತ್ವಾ ತತ್ಪರಮಾನಂದಂ ಪ್ರಭೂತಮಮೃತಂ ಸ್ವಯಮ್ ।
ಕರೋತಿ ತಾಂಡವಂ ದೇವೀಮಾಲೋಕ್ಯ ಪರಮೇಶ್ವರಃ ॥ ೧೧ ॥

ಪೀತ್ವಾ ನೃತ್ಯಾಮೃತಂ ದೇವೀ ಭರ್ತುಃ ಪರಮಮಂಗಲಮ್ ।
ಯೋಗಮಾಸ್ಥಾಯ ದೇವಸ್ಯ ದೇಹಮಾಯಾತಿ ಶೂಲಿನಃ ॥ ೧೨ ॥

ಸ ಭುಕ್ತ್ವಾ ತಾಂಡವರಸಂ ಸ್ವೇಚ್ಛಯೈವ ಪಿನಾಕಧೃಕ್ ।
ಜ್ಯೋತಿಃಸ್ವಭಾವಂ ಭಗವಾನ್ ದಗ್ಧ್ವಾ ಬ್ರಹ್ಮಾಂಡಮಂಡಲಮ್ ॥೧೩॥

ಸಂಸ್ಥಿತೇಷ್ವಥ ದೇವೇಷು ಬ್ರಹ್ಮಾ ವಿಷ್ಣುಃ ಪಿನಾಕಧೃಕ್ ।
ಗುಣೈರಶೇಷೈಃ ಪೃಥಿವೀ ವಿಲಯಂ ಯಾತಿ ವಾರಿಷು ॥ ೧೪ ॥

---

೧೧. ಪರಮೇಶ್ವರನು ತಾನಾಗಿ ಅತಿಶಯವಾದ ಯೋಗೈಶ್ವರ್ಯಮಯವಾದ ಪರಮಾನಂದಾಮೃತವನ್ನು ಪಾನಮಾಡಿ, ತನ್ನ ಪಾರ್ಶ್ವದಲ್ಲಿದ್ದ ದೇವಿಯನ್ನು ನೋಡುತ್ತ ತಾಂಡವನೃತ್ಯದ ಲೀಲೆಯನ್ನು ಮಾಡುವನು.

೧೨. ಆಗ ದೇವಿಯು ಪರಮಮಂಗಲಮಯವಾದ ಪತಿದೇವನ ನೃತ್ಯದ ಆನಂದಾಮೃತವನ್ನು ಪಾನಮಾಡಿ ಯೋಗಶಕ್ತಿಯನ್ನು ಅವಲಂಬಿಸಿ ಶೂಲಧರನಾದ ಮಹೇಶ್ವರನ ದೇಹದಲ್ಲಿ ಸೇರುವಳು.

೧೩. ಷಡ್ಗುಣೈಶ್ವರ್ಯಸಂಪನ್ನನೂ, ಪಿನಾಕಧನುರ್ಧಾರಿಯೂ ಆದ ಈಶ್ವರನು ಸ್ವೇಚ್ಛೆಯಿಂದಲೆ ತಾಂಡವನೃತ್ಯದ ರಸಾಸ್ವಾದವನ್ನು ಅನುಭವಿಸಿ ಜ್ಯೋತಿಯ ಸ್ವಭಾವದಿಂದ ಕೂಡಿದ ಬ್ರಹ್ಮಾಂಡಮಂಡಲವನ್ನು ದಹಿಸುವನು.

೧೪ ತರುವಾಯ ಬ್ರಹ್ಮ-ವಿಷ್ಣು-ರುದ್ರರೆಂಬ ತ್ರಿಮೂರ್ತಿಗಳು ಕೂಡ ತಿರೋಭಾವವನ್ನು ಹೊಂದಲಾಗಿ ಪೃಥಿವಿಯು ತನ್ನ ಸಮಸ್ತ ಗುಣಗಳಿಂದ ಕೂಡಿಕೊಂಡು ಜಲದಲ್ಲಿ ವಿಲಯವನ್ನು ಹೊಂದುವುದು.

ಸ ವಾರಿತತ್ತ್ವಂ ಸಗುಣಂ ಗ್ರಸತೇ ಹವ್ಯವಾಹನಃ ।
ತೇಜಃ ಸ್ವಗುಣಸಂಯುಕ್ತಂ ವಾಯೌ ಸಂಯಾತಿ ಸಂಕ್ಷಯಮ್ ॥ ೧೫ ॥

ಆಕಾಶೇ ಸಗುಣೇ ವಾಯುಃ ಪ್ರಲಯಂ ಯಾತಿ ವಿಶ್ವಭೃತ್ ।
ಭೂತಾದೌ ಚ ತಥಾಕಾಶೋ ಲೀಯತೇ ಗುಣಸಂಯುತಃ ॥ ೧೬ ॥

ಇಂದ್ರಿಯಾಣಿ ಚ ಸರ್ವಾಣಿ ತೈಜಸೇ ಯಾಂತಿ ಸಂಕ್ಷಯಮ್ ।
ವೈಕಾರಿಕೋ ದೇವಗಣೈಃ ಪ್ರಲಯಂ ಯಾತಿ ಸತ್ತಮಾಃ ॥ ೧೭ ॥

ತ್ರಿವಿಧೋಽಯಮಹಂಕಾರೋ ಮಹತಿ ಪ್ರಲಯಂ ವ್ರಜೇತ್ ।
ಮಹಾಂತಮೇಭಿಃ ಸಹಿತಂ ಬ್ರಹ್ಮಾಣಮಮಿತೌಜಸಮ್ ॥ ೧೮ ॥

---

೧೫. ತರುವಾಯ ತೇಜಸ್ಸಿನ ತತ್ತ್ವವಾದ ಅಗ್ನಿದೇವನು ತನ್ನ ಗುಣಗಳಿಂದ ಕೂಡಿದ ಜಲತತ್ತ್ವವನ್ನು ಗ್ರಾಸಮಾಡುತ್ತಾನೆ. ಹಾಗೆ ತನ್ನ ಗುಣಗಳಿಂದ ಕೂಡಿದ ತೇಜಸ್ಸತ್ತ್ವವು ವಾಯುವಿನಲ್ಲಿ ವಿಲಯವನ್ನು ಹೊಂದುವುದು.

೧೬. ಪ್ರಪಂಚದ ಜೀವನಕ್ಕೆ ನಿಮಿತ್ತವಾದ ವಾಯುವು ತನ್ನ ಗುಣ ರಾಶಿಯಿಂದ ಕೂಡಿದವನಾಗಿ ಆಕಾಶದಲ್ಲಿ ವಿಲಯವನ್ನು ಹೊಂದುತ್ತಾನೆ. ಹಾಗೆ ಆಕಾಶ ತತ್ತ್ವವು ತನ್ನ ಗುಣಗಳಿಂದ ಗರ್ಭಿತವಾಗಿ ಭೂತಾದಿ ಎಂಬ ಅಹಂಕಾರದಲ್ಲಿ ಲಯವನ್ನು ಹೊಂದುತ್ತದೆ.

೧೭. ಸಾಧೂತ್ತಮರೆ! ಹಾಗು ಸಮಸ್ತ ಇಂದ್ರಿಯಗಳು ತೈಜಸವೆಂಬ ಅಹಂಕಾರದಲ್ಲಿ ಕ್ಷಯವನ್ನು ಹೊಂದುತ್ತವೆ. ದೇವಗಣಗಳೊಡನೆ ಅಂತಃಕರಣವು ವೈಕಾರಿಕ ಅಹಂಕಾರದಲ್ಲಿ ಲಯವನ್ನು ಹೊಂದುತ್ತದೆ.

೧೮. ಹೀಗೆ ಭೂತಾದಿ, ತೈಜಸ ಮತ್ತು ವೈಕಾರಿಕವೆಂಬ ತ್ರಿವಿಧವಾದ ಅಹಂಕಾರವು ಮಹತ್ತತ್ತ್ವದಲ್ಲಿ ಪ್ರಲಯವನ್ನು ಹೊಂದುತ್ತದೆ. ಹೀಗೆ ಸಕಲ ತತ್ತ್ವಗಳಿಂದ ಕೂಡಿರುವುದೂ, ಅಪರಿಮಿತವಾದ ಪ್ರಭಾವವುಳ್ಳದ್ದೂ, ಬ್ರಹ್ಮರೂಪವೂ ಆದ ಮಹತ್ತತ್ತ್ವವು ಪ್ರಲಯವನ್ನು ಹೊಂದುತ್ತದೆ.

ಅವ್ಯಕ್ತಂ ಜಗತೋ ಯೋನಿಃ ಸಂಹರೇದೇಕಮವ್ಯಯಮ್ ॥ ೧೯ ॥

ಏವಂ ಸಂಹೃತ್ಯ ಭೂತಾನಿ ತತ್ತ್ವಾನಿ ಚ ಮಹೇಶ್ವರಃ ।
ವಿಯೋಜಯತಿ ಚಾನ್ಯೋಽನ್ಯಂ ಪ್ರಧಾನಂ ಪುರುಷಂ ಪರಮ್ ॥ ೨೦ ॥

ಪ್ರಧಾನಪುಂಸೋರಜಯೋರೇಷ ಸಂಹಾರ ಈರಿತಃ ।
ಮಹೇಶ್ವರೇಚ್ಛಾಜನಿತೋ ನ ಸ್ವಯಂ ವಿದ್ಯತೇ ಲಯಃ ॥ ೨೧ ॥

ಗುಣಸಾಮ್ಯಂ ತದವ್ಯಕ್ತಂ ಪ್ರಕೃತಿಃ ಪರಿಗೀಯತೇ ।
ಪ್ರಧಾನಂ ಜಗತೋ ಯೋನಿರ್ಮಾಯಾತತ್ತ್ವಮಚೇತನಮ್ ॥ ೨೨ ॥

---

೧೯. ಜಗತ್ತಿಗೆ ಕಾರಣವಾದ ಅವ್ಯಕ್ತವೆಂಬ ಮೂಲತತ್ತ್ವವು ಈ ಮಹತ್ತತ್ತ್ವವನ್ನು ಸಂಹರಿಸುವುದು. ಅವ್ಯಕ್ತವು ನಿರ್ವಿಭಾಗವೂ, ನಾಶರಹಿತವೂ ಆಗಿರುವುದು.

೨೦. ಷಡ್ಗುಣೈಶ್ವರ್ಯಸಂಪತ್ತಿಯುಳ್ಳ ಪರಮೇಶ್ವರನು ಹೀಗೆ ಸರ್ವ ಭೂತಗಳನ್ನು ಸಂಹಾರಮಾಡಿ ಪ್ರಧಾನವನ್ನೂ ಸರ್ವೋತ್ತಮನಾದ ಪುರುಷನನ್ನೂ ಅನ್ಯೋನ್ಯವಾಗಿ ವಿಭಾಗಗೊಳಿಸುತ್ತಾನೆ.

೨೧. ಜನ್ಮವಿಲ್ಲದೆ ನಿತ್ಯವಾಗಿರುವ ಪ್ರಧಾನ ಮತ್ತು ಪುರುಷರಿಗೆ ಪರಸ್ಪರ ವಿಯೋಗವು ಸಂಹಾರವೆಂದು ಹೇಳಲ್ಪಟ್ಟಿದೆ. ಈ ಲಯವು ಮಹೇಶ್ವರನ ಇಚ್ಛಾವಶದಿಂದ ನಡೆಯುವುದೇ ಹೊರತು ಸ್ವತಂತ್ರವಾಗಿ ಇರುವುದಿಲ್ಲ.

೨೨. ಜಗತ್ತಿಗೆ ಮೂಲಕಾರಣವೂ, ಅಚೇತನವೂ ಆದ ಸತ್ತ್ವ-ರಜಸ್ಸು-ತಮೋಗುಣಗಳ ಸಾಮ್ಯವು ಅವ್ಯಕ್ತ, ಪ್ರಕೃತಿ, ಪ್ರಧಾನ, ಮತ್ತು ಮಾಯಾತತ್ತ್ವವೆಂದು ಅನೇಕ ಸಂಕೇತಗಳಿಂದ ಕರೆಯಲ್ಪಡುತ್ತದೆ.

ಕೂಟಸ್ಥಶ್ಚಿನ್ಮಯೋ ಹ್ಯಾತ್ಮಾ ಕೇವಲಂ ಪಂಚವಿಂಶಕಃ ।
ಗೀಯತೇ ಮುನಿಭಿಃ ಸಾಕ್ಷೀ ಮಹಾನೇಷ ಪಿತಾಮಹಃ ॥ ೨೩ ॥

ಏವಂ ಸಂಹಾರಶಕ್ತಿಶ್ಚ ಶಕ್ತಿರ್ಮಾಹೇಶ್ವರೀ ಧ್ರುವಾ ।
ಪ್ರಧಾನಾದ್ಯಂ ವಿಶೇಷಾಂತಂ ದೇಹೇ ರುದ್ರ ಇತಿ ಶ್ರುತಿಃ ॥ ೨೪ ॥

ಯೋಗಿನಾಮಥ ಸರ್ವೇಷಾಂ ಜ್ಞಾನವಿನ್ಯಸ್ತಚೇತಸಾಮ್ ।
ಆತ್ಯಂತಿಕಂ ಚೈವ ಲಯಂ ವಿದಧಾತೀಹ ಶಂಕರಃ ॥ ೨೫ ॥

ಇತ್ಯೇಷ ಭಗವಾನ್ ರುದ್ರಃ ಸಂಹಾರಂ ಕುರುತೇ ವಶೀ ।
ಸ್ಥಾಪಿಕಾ ಮೋಹಿನೀ ಶಕ್ತಿರ್ನಾರಾಯಣ ಇತಿ ಶ್ರುತಿಃ ॥ ೨೬ ॥

---

೨೩. ಕೂಟದಂತೆ ನಿರ್ವಿಕಾರನೂ, ಚೈತನ್ಯಮಯನೂ, ಆತ್ಮಸ್ವರೂಪನೂ ಮತ್ತು ಸಾಕ್ಷಿರೂಪನೂ ಆದಪುರುಷನು ಮುನಿಗಳಿಂದ ಇಪ್ಪತ್ತೈದನೆಯ ತತ್ತ್ವರೂಪವಾಗಿ ಗಣಿಸಲ್ಪಟ್ಟಿರುವನು. ಪುರುಷನು ಮಹಾಪರಿಮಾಣವುಳ್ಳವನೂ ಲೋಕಕ್ಕೆ ಪಿತಾಮಹನೂ ಆಗಿರುವನು.

೨೪. ಈ ವಿಧವಾಗಿ ನಡೆಯುವ ಸಂಹಾರದ ಸಾಮರ್ಥ್ಯವು ಶಾಶ್ವತವಾದ ಮಹೇಶ್ವರನಿಗೆ ಅಧೀನವಾದ ಶಕ್ತಿರೂಪವಾಗಿರುವುದು. ಪ್ರಧಾನತತ್ತ್ವಮೊದಲುಗೊಂಡು ವಿಕಾರಪರ್ಯಂತವಾದ ಪೂರ್ಣತತ್ತ್ವರಾಶಿಯು ರುದ್ರದೇಹದಲ್ಲಿ ಅಡಗಿದೆಯೆಂದು ಶ್ರುತಿಯು ಹೇಳುವುದು.

೨೫. ತರುವಾಯ ಮಹೇಶ್ವರನು ಜ್ಞಾನನಿಷ್ಠೆಯಲ್ಲಿ ಇರಿಸಿದ ಮಾನಸವುಳ್ಳ ಸಮಸ್ತ ಯೋಗಿಗಳಿಗೆ ಆತ್ಯಂತಿಕಪ್ರಲಯವೆಂಬ ಮೋಕ್ಷವನ್ನು ಅನುಗ್ರಹಿಸುವನು.

೨೬. ಈ ವಿಧವಾಗಿ ಷಡ್ಗುಣೈಶ್ವರ್ಯಸಂಪನ್ನನಾದ ರುದ್ರನು ಸ್ವತಂತ್ರನಾಗಿ ಪ್ರಪಂಚದ ಸಂಹಾರವನ್ನು ರಚಿಸುತ್ತಾನೆ. ಸರ್ವರಿಗೆ ಸ್ವಾಪ, ಮೋಹಗಳನ್ನು ಉಂಟುಮಾಡುವ ಶಕ್ತಿಯು ನಾರಾಯಣರೂಪವಾದುದೆಂದು ಶ್ರುತಿಯು ಹೇಳುತ್ತದೆ.

ಹಿರಣ್ಯಗರ್ಭೋ ಭಗವಾನ್ ಜಗತ್ಸದಸದಾತ್ಮಕಮ್ ।
ಸೃಜೇದಶೇಷಂ ಪ್ರಕೃತೇಸ್ತನ್ಮಯಃ ಪಂಚವಿಂಶಕಃ ॥ ೨೭ ॥

ದುರ್ಬಲಾಃ ಸರ್ವಗಾಃ ಶಾಂತಾ ಸ್ವಾತ್ಮನ್ಯೇವ ವ್ಯವಸ್ಥಿತಾಃ ।
ಶಕ್ತಯೋ ಬ್ರಹ್ಮವಿಷ್ಣ್ವೀಶಾ ಭುಕ್ತಿಮುಕ್ತಿಫಲಪ್ರದಾಃ ॥ ೨೮ ॥

ಸರ್ವೇಶ್ವರಾಃ ಸರ್ವಬಂಧಾಃ ಶಾಶ್ವತಾನಂತಭೋಗಿನಃ ॥ ೨೯ ॥

ಏಕಮೇವಾಕ್ಷರಂ ತತ್ತ್ವಂ ಪುಂಪ್ರಧಾನೇಶ್ವರಾತ್ಮಕಮ್ ।
ಅನ್ಯಾಶ್ಚ ಶಕ್ತಯೋ ದಿವ್ಯಾಸ್ತತ್ರ ಸಂತಿ ಸಹಸ್ರಶಃ ॥ ೩೦ ॥

---

೨೭. ಪರಮಪೂಜ್ಯನಾದ ಹಿರಣ್ಯಗರ್ಭದೇವನು ಸತ್-ಅಸತ್ ರೂಪವಾದ ಸಮಸ್ತ ಪ್ರಪಂಚವನ್ನು ಸೃಷ್ಟಿಮಾಡುತ್ತಾನೆ. ಪಂಚವಿಂಶತತ್ತ್ವ-ಪುರುಷರೂಪನಾದ ಬ್ರಹ್ಮದೇವನು ಪ್ರಕೃತಿಯ ಸಹಾಯದಿಂದ ತನ್ಮಯನಾಗಿ ಸೃಷ್ಟಿರಚನೆಯಲ್ಲಿ ತೊಡಗುವನು.

೨೮. ಭೋಗ-ಮೋಕ್ಷಫಲಗಳನ್ನು ಕೊಡುವ ಬ್ರಹ್ಮ-ವಿಷ್ಣು-ಈಶ್ವರರೆಂಬ ತ್ರಿಮೂರ್ತಿಗಳು ಶಕ್ತಿರೂಪರೂ, ದುರ್ಬಲರೂ, ಸರ್ವವ್ಯಾಪಕರೂ ಮತ್ತು ನಿರ್ವಿಕಾರರೂ ಆಗಿ ಸ್ವಾತ್ಮರೂಪದಲ್ಲಿಯೇ ಸ್ಥಿತಿಯನ್ನು ಹೊಂದಿರುವರು.

೨೯. ಮತ್ತು ಆ ತ್ರಿಮೂರ್ತಿಗಳು ಸರ್ವೇಶ್ವರರೂ, ಅನೇಕ ವಿಧವಾದ ಬಂಧನಕ್ಕೆ ಪರತಂತ್ರರೂ ಹಾಗು ಶಾಶ್ವತವೂ ಅನಂತವೂ ಆದ ಆನಂದವನ್ನು ಅನುಭವಿಸುವವರೂ ಆಗಿರುವರು.

೩೦. ನಾಶವಿಲ್ಲದ, ಅದ್ವಿತೀಯವಾದ ಒಂದು ತತ್ತ್ವವು ಪುರುಷ-ಪ್ರಧಾನ-ಈಶ್ವರರೆಂಬ ವಿಭಾಗ ರೂಪವನ್ನು ಹೊಂದಿದೆ. ಆ ತತ್ತ್ವದಲ್ಲಿ ಮತ್ತಿತರ ಸಹಸ್ರಾರು ದಿವ್ಯವಾದ ಶಕ್ತಿಗಳು ಅಂತರ್ಗತವಾಗಿವೆ.

ಇತ್ಯೇತೇ ವಿವಿಧೈರ್ಯಜ್ಞೈಃ ಶಕ್ತ್ಯಾದಿತ್ಯಾದಯೋಽಮರಾಃ ॥ ೩೧ ॥

ಏಕೈಕಸ್ಯಾಃ ಸಹಸ್ರಾಣಿ ದೇಹಾನಾಂ ವೈ ಶತಾನಿ ಚ ।
ಕಥ್ಯಂತೇ ಚೈವ ಮಾಹಾತ್ಮ್ಯಚ್ಛಕ್ತಿರೇಕೈವ ನಿರ್ಗುಣಾ ॥ ೩೨ ॥

ತಾಂ ಶಕ್ತಿಂ ಸ್ವಯಮಾಸ್ಥಾಯ ಸ್ವಯಂ ದೇವೋ ಮಹೇಶ್ವರಃ ।
ಕರೋತಿ ವಿವಿಧಾನ್ ದೇಹಾನ್ ದೃಶ್ಯತೇ ಚೈವ ಲೀಲಯಾ ॥ ೩೩ ॥

ಇಜ್ಯತೇ ಸರ್ವಯಜ್ಞೇಷು ಬ್ರಾಹ್ಮಣೈರ್ವೇದವಾದಿಭಿಃ ।
ಸರ್ವಕಾಮಪ್ರದೋ ರುದ್ರ ಇತ್ಯೇಷಾ ವೈದಿಕೀ ಶ್ರುತಿಃ ॥ ೩೪ ॥

---

೩೧. ಈ ರೀತಿಯಾಗಿ ಶಕ್ತಿ-ಆದಿತ್ಯ ಮುಂತಾದ ಸಮಸ್ತ ದೇವತಾಶಕ್ತಿಗಳು ಆವಿರ್ಭಾವವನ್ನು ಹೊಂದಿಕೊಂಡು ಸರ್ವ ಯಜ್ಞಗಳಿಂದ ಪೂಜಿಸಲ್ಪಡುತ್ತಲಿರುವರು.

೩೨. ಈ ಶಕ್ತಿಗಳಲ್ಲಿ ಒಂದೊಂದು ಶಕ್ತಿಗೆ ಶತ-ಸಹಸ್ರ ಮುಂತಾದ ಅಧಿಕ ಸಂಖ್ಯೆಯ ದೇಹಗಳು ಇರುತ್ತವೆ. ಇವುಗಳು ಮಾಹಾತ್ಮ್ಯವಿಶೇಷದಿಂದ ವಿಸ್ತಾರವಾಗುವ ವಿಭೂತಿರೂಪಗಳಾಗಿವೆ. ವಾಸ್ತವಿಕವಾಗಿ ಶಕ್ತಿಯು ಅದ್ವಿತೀಯವೂ ನಿರ್ಗುಣವೂ ಆಗಿರುವುದು.

೩೩. ಮಹೇಶ್ವರನಾದ ಸ್ವಾಮಿಯು ಆ ಶಕ್ತಿಯನ್ನು ತಾನು ವಶೀಕರಿಸಿ ನಾನಾವಿಧವಾದ ದೇಹಗಳನ್ನು ಅವಿರ್ಭಾವಗೊಳಿಸುವನು. ಮತ್ತು ಆಯಾಯ ದೇಹಗಳಿಗೆ ಉಚಿತವಾದ ಲೀಲಾಜಾಲವನ್ನು ತೋರಿಸುವನು.

೩೪. ಹಾಗು ಆ ಮಹೇಶ್ವರನು ವೇದವಾದಿಗಳಾದ ಆಸ್ತಿಕ ವಿಪ್ರರಿಂದ ಸರ್ವ ಯಜ್ಞಗಳಲ್ಲಿ ಪೂಜಿಸಲ್ಪಡುತ್ತಾನೆ ರುದ್ರದೇವನು ಸಮಸ್ತ ಕಾಮಗಳನ್ನು ಕೊಡುವನೆಂಬುದು ವೇದದಲ್ಲಿ ಹೇಳಿರುವ ಸಿದ್ಧಾಂತವಾಗಿದೆ.

ಸರ್ವಾಸಾಮೇವ ಶಕ್ತೀನಾಂ ಬ್ರಹ್ಮವಿಷ್ಣುಮಹೇಶ್ವರಾಃ ।
ಪ್ರಾಧಾನ್ಯೇನ ಸ್ಮೃತಾ ದೇವಾಃ ಶಕ್ತಯಃ ಪರಮಾತ್ಮನಃ ॥ ೩೫ ॥

ಆಭ್ಯಃ ಪರಸ್ತಾದ್ಭಗವಾನ್ ಪರಮಾತ್ಮಾ ಸನಾತನಃ ।
ಗೀಯತೇ ಸರ್ವಮಾಯಾತ್ಮಾ ಶೂಲಪಾಣಿರ್ಮಹೇಶ್ವರಃ ॥ ೩೬ ॥

ಏನಮೇಕೇ ವದಂತ್ಯಗ್ನಿಂ ನಾರಾಯಣಮಥಾಪರೇ ।
ಇಂದ್ರಮೇಕೇ ಪರೇ ಪ್ರಾಣಂ ಬ್ರಹ್ಮಾಣಮಪರೇ ಜಗುಃ ॥ ೩೭ ॥

ಬ್ರಹ್ಮವಿಷ್ಣ್ವಗ್ನಿವರುಣಾಃ ಸರ್ವೇ ದೇವಾಸ್ತಥರ್ಷಯಃ ।
ಏಕಸ್ಯೈವಾಥ ರುದ್ರಸ್ಯ ಭೇದಾಸ್ತೇ ಪರಿಕೀರ್ತಿತಾಃ ॥ ೩೮ ॥

---

೩೫. ಪರಮಾತ್ಮನಲ್ಲಿರುವ ವಿವಿಧವಾದ ಅನೇಕ ಶಕ್ತಿಗಳಲ್ಲಿ ಬ್ರಹ್ಮ-ವಿಷ್ಣು-ಮಹೇಶ್ವರ ಎಂಬ ತ್ರಿಮೂರ್ತಿ ದೇವತೆಗಳು ಪರಮಾತ್ಮನ ಪ್ರಧಾನವಾದ ಶಕ್ತಿಗಳೆಂದು ಪ್ರಾಜ್ಞರಿಂದ ಸ್ಮರಿಸಲ್ಪಟ್ಟಿರುತ್ತಾರೆ.

೩೬. ಷಡ್ಗುಣೈಶ್ವರ್ಯಸಂಪನ್ನನೂ ಪುರಾಣಸ್ವರೂಪನೂ, ಸಮಸ್ತ ಮಾಯಾ ಸ್ವರೂಪನೂ, ಪಾಣಿಯಲ್ಲಿ ಶೂಲವನ್ನು ಧರಿಸಿದವನೂ, ಮತ್ತು ಸರ್ವೇಶ್ವರನೂ ಆದ ಪರಮಾತ್ಮನು ಶಕ್ತಿಕೋಟಿಗಿಂತ ಶ್ರೇಷ್ಠನೂ ವ್ಯತಿರಿಕ್ತನೂ ಆಗಿ ಸ್ಮರಿಸಲ್ಪಟ್ಟಿರುವನು.

೩೭. ಈ ಪರಮಾತ್ಮನನ್ನು ಕೆಲವರು ಇಂದ್ರನೆಂದೂ ಮತ್ತೆ ಕೆಲವರು ಅಗ್ನಿದೇವನೆಂದೂ, ಇನ್ನು ಕೆಲವರು ನಾರಾಯಣನೆಂದೂ, ಇನ್ನೂ ಕೆಲವರು ಪ್ರಾಣ ರೂಪನೆಂದೂ, ಮತ್ತೆ ಹಲವರು ಬ್ರಹ್ಮಮೂರ್ತಿಯೆಂದೂ ತಮ್ಮತಮ್ಮ ಭಾವನೆಗೆ ತಕ್ಕಂತೆ ಉಪಾಸ್ಯಸ್ವರೂಪವನ್ನು ನಿರ್ಧರಿಸುತ್ತಾರೆ.

೩೮. ಬ್ರಹ್ಮ, ವಿಷ್ಣು, ಅಗ್ನಿ, ವರುಣ, ಮುಂತಾದ ಸಮಸ್ತ ದೇವತೆಗಳೂ ಹಾಗು ಸಮಸ್ತ ಮಹರ್ಷಿಗಳೂ ಒಬ್ಬನೇ ಆಗಿರುವ ರುದ್ರಮೂರ್ತಿಯ ವಿಭೂತಿ ಭೇದಗಳೆಂದು ಪ್ರಾಜ್ಞರಿಂದ ಕೀರ್ತಿಸಲ್ಪಟ್ಟಿವೆ.

ಯಂ ಯಂ ಭೇದಂ ಸಮಾಶ್ರಿತ್ಯ ಯಜಂತಿ ಪರಮೇಶ್ವರಮ್ !
ತತ್ತದ್ರೂಪಂ ಸಮಾಸ್ಥಾಯ ಪ್ರದದಾತಿ ಫಲಂ ಶಿವಃ　　　　॥ ೩೯ ॥

ತಸ್ಮಾದೇಕತರಂ ಭೇದಂ ಸಮಾಶ್ರಿತ್ಯಾಪಿ ಶಾಶ್ವತಮ್ ।
ಆರಾಧಯನ್ಮಹಾದೇವಂ ಯಾತಿ ತತ್ಪರಮಂ ಪದಮ್　　　　॥ ೪೦ ॥

ಕಿಂತು ದೇವಂ ಮಹಾದೇವಂ ಸರ್ವಶಕ್ತಿಂ ಸನಾತನಮ್ ।
ಆರಾಧಯೇಹ ಗಿರಿಶಂ ಸಗುಣಂ ವಾಥ ನಿರ್ಗುಣಮ್　　　　॥ ೪೧ ॥

ಮಯಾ ಪ್ರೋಕ್ತೋ ಹಿ ಭವತಾಂ ಯೋಗಃ ಪ್ರಾಗೇವ ನಿರ್ಗುಣಃ ।
ಆರುರುಕ್ಷುಸ್ತು ಸಗುಣಂ ಪೂಜಯೇತ್ ಪರಮೇಶ್ವರಮ್　　　　॥ ೪೨ ॥

---

೩೯. ಹಿಂದೆ ಹೇಳಿದ ಭೇದಗಳಲ್ಲಿ ಪರಮೇಶ್ವರನ ಯಾವ ಯಾವ ವ್ಯಕ್ತಿ ಭೇದವನ್ನು ಅವಲಂಬಿಸಿ ಉಪಾಸಕನು ಅರ್ಚನೆ ಮಾಡುವನೋ; ಸದಾಶಿವನು ಆಯಾಯ ರೂಪವನ್ನು ಪರಿಗ್ರಹಿಸಿ ಉಪಾಸಕನಿಗೆ ಫಲವನ್ನು ಕೊಡುವನು .

೪೦. ಆದುದರಿಂದ ಮಾನವನು ಪರಮೇಶ್ವರನ ಯಾವುದಾದರೊಂದು ಶಾಶ್ವತವಾದ ವ್ಯಕ್ತಿಭೇದವನ್ನು ಅವಲಂಬಿಸಿ ಆರಾಧಿಸಬೇಕು. ಅದರಿಂದ ಸರ್ವ ಭೂತಗಳಿಗೆ ಗಂತವ್ಯವಾದ ಪರಮಪದವನ್ನು ಹೊಂದುತ್ತಾನೆ.

೪೧. ಆದರೆ ಸನಾತನನೂ, ಸರ್ವಶಕ್ತಿಯುಕ್ತನೂ, ದೇವೋತ್ತಮನೂ, ಕೈಲಾಸಾದ್ರಿವಿಹಾರಿಯೂ ಆದ ಪರಮೇಶ್ವರನ ನಿರ್ಗುಣ ಅಥವಾ ಸಗುಣಮೂರ್ತಿಯನ್ನು ಆರಾಧಿಸುವುದು ಪ್ರಶಸ್ತವಾದುದು.

೪೨. ಮುನಿಗಳೆ ! ನನ್ನಿಂದ ನಿಮಗೆ ಪೂರ್ವದಲ್ಲಿ ನಿರ್ಗುಣಯೋಗವು ವಿವರಿಸಲ್ಪಟ್ಟಿರುವುದು. ಚಿತ್ತಶುದ್ಧಿಯೋಗ್ಯತೆಯನ್ನು ಹೊಂದಲಿರುವ ಮುಮುಕ್ಷುವು ಸಗುಣನಾದ ಪರಮೇಶ್ವರನನ್ನು ಅರ್ಚಿಸಬೇಕು.

ಪಿನಾಕಿನಂ ತ್ರಿನಯನಂ ಜಟಿಲಂ ಕೃತ್ತಿವಾಸಸಮ್ ।
ರುಕ್ಮಾಭಂ ವಾ ಸಹಸ್ರಾರ್ಕಾಚ್ಚಿಂತಯೇದ್ವೈದಿಕೀ ಶ್ರುತಿಃ ॥ ೪೩ ॥

ಏಷ ಯೋಗಃ ಸಮುದ್ದಿಷ್ಟಃ ಸಬೀಜೋ ಮುನಿಪುಂಗವಾಃ ।
ಅತ್ರಾಪ್ಯಶಕ್ತೋಽಥ ಹರಂ ವಿಷ್ಣುಂ ಬ್ರಹ್ಮಾಣಮರ್ಚಯೇತ್ ॥ ೪೪ ॥

ಅಥ ಚೇದಸಮರ್ಥಃ ಸ್ಯಾತ್ತತ್ರಾಪಿ ಮುನಿಪುಂಗವಾಃ ।
ತತೋ ವಾಯ್ವಗ್ನಿಶಕ್ರಾದೀನ್ ಪೂಜಯೇದ್ಭಕ್ತಿಸಂಯುತಃ ॥ ೪೫ ॥

ತಸ್ಮಾತ್ ಸರ್ವಾನ್ ಪರಿತ್ಯಜ್ಯ ದೇವಾನ್ ಬ್ರಹ್ಮಪುರೋಗಮಾನ್ ।
ಆರಾಧಯೇದ್ವಿರೂಪಾಕ್ಷಮಾದಿಮಧ್ಯಾಂತಸಂಸ್ಥಿತಮ್ ॥ ೪೬ ॥

---

೪೩. ಪಿನಾಕಧನುಸ್ಸನ್ನು ಧರಿಸಿದವನೂ, ತ್ರಿಲೋಚನನೂ, ಜಟಾಧರನೂ ಗಜಚರ್ಮಾಂಬರಧಾರಿಯೂ, ಸಹಸ್ರ ಸೂರ್ಯಬಿಂಬಗಳಿಗಿಂತ ಅಧಿಕವಾಗಿ ಜ್ಯೋತಿರ್ಮಯವಾದ ಮೂರ್ತಿಯುಳ್ಳವನೂ ಆದ ಮಹೇಶ್ವರನನ್ನು ಧ್ಯಾನಿಸಬೇಕೆಂದು ವೇದವಾಕ್ಯವು ಉಪದೇಶಿಸುತ್ತಿದೆ.

೪೪. ಮುನಿಪುಂಗವರೆ ! ಈ ವಿಧವಾಗಿ ಸಬೀಜಯೋಗವೆಂಬ ಸಗುಣಮೂರ್ತಿಯ ಉಪಾಸನೆಯು ನಿಮಗೆ ಹೇಳಲ್ಪಟ್ಟಿತು. ಈ ಯೋಗದಲ್ಲಿಯೂ ಅಶಕ್ತನಾದವನು ಈಶ್ವರ-ವಿಷ್ಣು-ಬ್ರಹ್ಮ ಎಂಬ ತ್ರಿಮೂರ್ತಿಗಳಲ್ಲಿ ಯಾವುದಾದರೊಂದನ್ನು ಸೇವಿಸಬೇಕು.

೪೫. ಮುನಿಶ್ರೇಷ್ಠರೆ ! ಮಾನವನು ಈ ಅರ್ಚನಾವಿಧಿಯಲ್ಲಿಯೂ ಅಸಮರ್ಥನಾಗಿದ್ದರೆ ಆಗ ಭಕ್ತಿಯಿಂದ ಕೂಡಿದವನಾಗಿ ವಾಯು-ಅಗ್ನಿ-ಇಂದ್ರ ಮುಂತಾದ ಇಷ್ಟದೇವತೆಯನ್ನಾದರೂ ಪೂಜಿಸಬೇಕು.

೪೬. ಹೀಗಿರುವುದರಿಂದ ಮುಖ್ಯವಾಗಿ ಬ್ರಹ್ಮನೆ ಆದಿಯಾಗಿರುವ ಸಮಸ್ತ ದೇವತೆಗಳನ್ನು ಪರಿತ್ಯಾಗಮಾಡಿ ಆದಿ-ಮಧ್ಯ-ಅಂತಗಳೆಂಬ ಸರ್ವದೇಶಕಾಲಗಳಲ್ಲಿರುವ ವಿರೂಪಾಕ್ಷದೇವನನ್ನು ಉಪಾಸನೆ ಮಾಡಬೇಕು.

ಭಕ್ತಿಯೋಗಸಮಾಯುಕ್ತಃ ಸ್ವಧರ್ಮನಿರತಃ ಶುಚಿಃ ।
ತಾದೃಶಂ ರೂಪಮಾಸ್ಥಾಯ ಆಸಾದ್ಯಾತ್ಯಂತಿಕಂ ಶಿವಮ್ ॥ ೪೭ ॥

ಏಷ ಯೋಗಃ ಸಮುದ್ದಿಷ್ಟಃ ಸಬೀಜೋಽತ್ಯಂತಭಾವನಃ ।
ಯಥಾವಿಧಿ ಪ್ರಕುರ್ವಾಣಃ ಪ್ರಾಪ್ನುಯಾತ್ಪದಮೈಶ್ವರಮ್ ॥ ೪೮ ॥

ದ್ವೇ ಚಾನ್ಯೇ ಭಾವನೇ ಶುದ್ಧೇ ಪ್ರಾಗುಕ್ತೇ ಭವತಾಮಿಹ ।
ಅಥಾಪಿ ಕಥಿತೋ ಯೋಗೋ ನಿರ್ಬೀಜಶ್ಚ ಸಬೀಜಕಃ ॥ ೪೯ ॥

ಜ್ಞಾನಂ ತದುಕ್ತಂ ನಿರ್ಬೀಜಂ ಪೂರ್ವಂ ಹಿ ಭವತಾಂ ಮಯಾ ।
ವಿಷ್ಣುಂ ರುದ್ರಂ ವಿರಂಚಿಂ ಚ ಸಬೀಜೇ ಸಾಧಯೇದ್ಬುಧಃ ॥ ೫೦ ॥

---

೪೭. ಭಕ್ತಿಯೋಗದಿಂದ ಕೂಡಿದವನೂ, ಸ್ವಧರ್ಮಾಚರಣೆಯಲ್ಲಿ ನಿರತನೂ ಮತ್ತು ಪವಿತ್ರನೂ ಆಗಿ ಅಂತಹ ಮಹಿಮೆಯಿಂದ ಕೂಡಿದ ಉಪಾಸ್ಯರೂಪವನ್ನು ಅವಲಂಬಿಸಿ ಆತ್ಯಂತಿಕ ಮಂಗಳರೂಪವಾದ ಆ ರೂಪವನ್ನು ಚಿತ್ತದಲ್ಲಿ ಸ್ಥಿರಗೊಳಿಸಿ ಧ್ಯಾನಿಸಬೇಕು. ಅದರಿಂದ ಆತ್ಯಂತಿಕ ಕಲ್ಯಾಣವನ್ನು ಹೊಂದುವನು.

೪೮. ಭಕ್ತಿತಾರತಮ್ಯದಿಂದ ಅತಿಶಯವಾದ ಭಾವನಾಮಯವಾದ ಈ ಸಬೀಜಯೋಗವು ನಿಮಗೆ ತೋರಿಸಲ್ಪಟ್ಟಿದೆ. ಈ ಯೋಗವನ್ನು ಯಥಾವಿಧಿಯಾಗಿ ಅನುಷ್ಠಾನಮಾಡಿದ ಮಾನವನು ಈಶ್ವರಪದವನ್ನು ಹೊಂದುತ್ತಾನೆ.

೪೯. ಮತ್ತು ನನ್ನಿಂದ ನಿಮಗೆ ಹಿಂದೆ ಪರಸ್ಪರ ವಿಲಕ್ಷಣವೂ ಅತ್ಯಂತ ನಿರ್ಮಲವೂ ಮತ್ತು ಶುದ್ಧವೂ ಆದ ಎರಡು ಭಾವನೆಗಳು ಹೇಳಲ್ಪಟ್ಟಿವೆ. ಹಾಗು ನಿರ್ಬೀಜ ಸಬೀಜವೆಂದು ಎರಡು ಬಗೆಯಾದ ಯೋಗವು ಹೇಳಲ್ಪಟ್ಟಿದೆ.

೫೦. ಇವುಗಳಲ್ಲಿ ನಿರ್ಬೀಜಯೋಗದ ಸ್ವರೂಪವನ್ನು ಹೊಂದಿರುವ ಜ್ಞಾನ ಮಾರ್ಗವು ಹಿಂದೆ ನಿಮಗೆ ಹೇಳಲ್ಪಟ್ಟಿದೆ. ಜ್ಞಾನಿಯಾದ ನರನು ಸಬೀಜ ಯೋಗ ಮಾರ್ಗದಲ್ಲಿ ನಿಂತುಕೊಂಡು ವಿಷ್ಣು, ರುದ್ರ, ಬ್ರಹ್ಮ ಎಂಬ ಮೂರ್ತಿಗಳನ್ನು ಉಪಾಸನೆ ಮಾಡಬೇಕು.

ಅಥ ವಾಯ್ವಾದಿಕಾನ್ ದೇವಾನ್ ತತ್ಪರೋ ನಿಯತಾತ್ಮವಾನ್ ।
ಪೂಜಯೇತ್ಪುರುಷಂ ವಿಷ್ಣುಂ ಚತುರ್ಮೂರ್ತಿಧರಂ ಹರಿಮ್ ॥ ೫೧ ॥

ಅನಾದಿನಿಧನಂ ದೇವಂ ವಾಸುದೇವಂ ಸನಾತನಮ್ ।
ನಾರಾಯಣಂ ಜಗದ್ಯೋನಿಮಾಕಾಶಂ ಪರಮಂ ಪದಮ್ ॥ ೫೨ ॥

ತಲ್ಲಿಂಗಧಾರೀ ನಿಯತಂ ತದ್ಭಕ್ತಸ್ತದುಪಾಶ್ರಯಃ ।
ಏಷ ಏವ ವಿಧಿರ್ಬ್ರಾಹ್ಮೇ ಭಾವನೇ ಚಾಂತಿಮೋ ಮತಃ ॥ ೫೩ ॥

ಇತ್ಯೇತತ್ಕಥಿತಂ ಜ್ಞಾನಂ ಭಾವನಾಸಂಶ್ರಯಂ ಪರಮ್ ।
ಇಂದ್ರದ್ಯುಮ್ನಾಯ ಮುನಯೋ ಕಥಿತಂ ಯನ್ಮಯಾ ಪುರಾ ॥ ೫೪ ॥

---

೫೧. ಅಥವಾ ತತ್ಪರತೆಯುಳ್ಳವನೂ. ನಿಗ್ರಹಿಸಲ್ಪಟ್ಟ ತ್ರಿಕರಣಗಳುಳ್ಳವನೂ ಆಗಿ ವಾಯು-ಮುಂತಾದ ದೇವತೆಗಳನ್ನು ಅರ್ಚಿಸಬೇಕು. ನಾಲ್ಕು ಸಂಖ್ಯೆಯ ಮೂರ್ತಿಗಳನ್ನು ಧರಿಸಿರುವವನೂ, ವ್ಯಾಪಕನೂ, ಪೂರ್ಣರೂಪನೂ ಆದ ನಾರಾಯಣನನ್ನು ಅರ್ಚಿಸಬೇಕು.

೫೨. ನಾರಾಯಣಸ್ವಾಮಿಯು ಜನ್ಮ ಮರಣಗಳಿಂದ ರಹಿತನೂ, ಸರ್ವಾವಾಸನೂ, ಪ್ರಕಾಶಮಯನೂ ಅನಾದಿಯೂ, ಜಗತ್ತಿಗೆ ಕಾರಣನೂ, ಸರ್ವವ್ಯಾಪಕನೂ ಮತ್ತು ಸರ್ವಭೂತಗಳಿಗೆ ರಮ್ಯವಾದ ಉತ್ತಮಪದರೂಪನೂ ಆಗಿರುವನು.

೫೩. ಆಯಾಯ ದೇವತೆಗಳನ್ನು ಅರ್ಚಿಸುವ ಮಾನವನು ಆಯಾಯ ಲಕ್ಷಣಗಳನ್ನು ಧರಿಸಿದವನೂ, ಸರ್ವಕಾಲಗಳಲ್ಲಿಯೂ ಆ ದೇವತಾಯೋಗವುಳ್ಳವನೂ ಅದನ್ನು ಅವಲಂಬಿಸಿದವನೂ ಆಗಿ ಆರಾಧಿಸಬೇಕು. ಭಾವನಾರೂಪವಾದ ಕಡೆಯ ಧ್ಯಾನಮಾರ್ಗದಲ್ಲಿ ಈ ವಿಧಿಯು ಸಮ್ಮತವಾಗಿದೆ.

೫೪. ಉಪಾಸನಾಮಾರ್ಗವನ್ನು ಅವಲಂಬಿಸಿರುವ ಉತ್ಕೃಷ್ಟವಾದ ಈಸಗುಣ ಜ್ಞಾನಮಾರ್ಗವು ನನ್ನಿಂದ ನಿಮಗೆ ಹೇಳಲ್ಪಟ್ಟಿದೆ. ಇದು ಹಿಂದೆ ನನ್ನಿಂದ ಇಂದ್ರದ್ಯುಮ್ನನೆಂಬ ರಾಜರ್ಷಿಗೆ ಬೋಧಿಸಲ್ಪಟ್ಟಿರುವುದು.

ಅವ್ಯಕ್ತಾತ್ಮಕಮೇವೇದಂ ಚೇತನಾಚೇತನಂ ಜಗತ್ ।
ತದೀಶ್ವರಂ ಪರಂ ಬ್ರಹ್ಮ ತಸ್ಮಾದ್ಬ್ರಹ್ಮಮಯಂ ಜಗತ್ ॥ ೫೫ ॥

ಸೂತ ಉವಾಚ :—

ಏತಾವದುಕ್ತ್ವಾ ಭಗವಾನ್ ವಿರರಾಮ ಜನಾರ್ದನಃ ।
ತುಷ್ಟುವುರ್ಮುನಯೋ ವಿಷ್ಣುಂ ಶುಕ್ರೇಣ ಸಹ ಮಾಧವಮ್ ॥ ೫೬ ॥

ಮುನಯ ಊಚುಃ :—

ನಮಸ್ತೇ ಕೂರ್ಮರೂಪಾಯ ವಿಷ್ಣವೇ ಪರಮಾತ್ಮನೇ ।
ನಾರಾಯಣಾಯ ವಿಶ್ವಾಯ ವಾಸುದೇವಾಯ ತೇ ನಮಃ ॥ ೫೭ ॥

ನಮೋ ನಮಸ್ತೇ ಕೃಷ್ಣಾಯ ಗೋವಿಂದಾಯ ನಮೋ ನಮಃ ।
ಮಾಧವಾಯ ಚ ತೇ ನಿತ್ಯಂ ನಮೋ ಯಜ್ಞೇಶ್ವರಾಯ ಚ ॥ ೫೮ ॥

---

೫೫. ಚೇತನ ಅಚೇತನವೆಂಬ ವಿಭಾಗದಿಂದ ಕೂಡಿದ ಈ ಸಮಸ್ತ ಜಗತ್ತು ಅವ್ಯಕ್ತವೆಂಬ ತತ್ತ್ವದಲ್ಲಿ ಅಭೇದದಿಂದ ಇರುವುದು. ಆ ಅವ್ಯಕ್ತ ತತ್ತ್ವವು ಸರ್ವೇಶ್ವರನಾದ ಪರಬ್ರಹ್ಮನ ಸ್ವರೂಪದಿಂದ ಇದೆ. ಆದುದರಿಂದ ಜಗತ್ತು ಬ್ರಹ್ಮಮಯವೆಂಬುದು ಸಿದ್ಧಾಂತವು.

೫೬. ಸೂತಮುನಿಯು ಹೀಗೆಂದನು:— ದುಷ್ಟಜನಮರ್ದಕನೂ ಪರಮಪೂಜ್ಯನೂ ಆದ ನಾರಾಯಣನು ಇದನ್ನು ಹೇಳಿ ಸುಮ್ಮನಾದನು. ಆಗ ಮುನಿಗಳು ಶುಕ್ರನೊಂದಿಗೆ ಲಕ್ಷ್ಮೀಪತಿಯಾದ ವಿಷ್ಣುವನ್ನು ಸ್ತೋತ್ರಮಾಡಿದರು.

೫೭. ಮುನಿಗಳು ಹೀಗೆ ಸ್ತುತಿಮಾಡಿದರು :—ವ್ಯಾಪಕನೂ, ಕೂರ್ಮರೂಪವನ್ನು ಧರಿಸಿದವನೂ ಆದ ಆ ಪರಮಾತ್ಮನಿಗೆ ನಮಸ್ಕಾರವು. ಮತ್ತು ಸಮುದ್ರಶಾಯಿಯೂ, ವಿಶ್ವರೂಪಿಯೂ, ವಾಸುದೇವಸ್ವರೂಪನೂ ಆದ ಪರಮಾತ್ಮನಿಗೆ ನಮಸ್ಕಾರವು.

೫೮. ಪಾತಕಿಗಳ ಪಾಪವನ್ನು ಭಂಜನಮಾಡುವವನೂ, ವೇದವಾಕ್ಯಗಳಿಗೆ ಅಧಿಪತಿಯೂ, ಇಂದಿರಾರಮಣನೂ, ಯಜ್ಞಕರ್ಮಗಳಿಗೆ ಸಾಕ್ಷಿಯೂ ಮತ್ತು ಯಜ್ಞಪುರುಷನೂ ಆದ ಪರಮಾತ್ಮನಿಗೆ ಮತ್ತೆ ಮತ್ತೆ ನಮಸ್ಕಾರಮಾಡುವೆವು.

ಸಹಸ್ರಶಿರಸೇ ತುಭ್ಯಂ ಸಹಸ್ರಾಕ್ಷಾಯ ತೇ ನಮಃ ।
ನಮಃ ಸಹಸ್ರಹಸ್ತಾಯ ಸಹಸ್ರಚರಣಾಯ ಚ ॥ ೫೯ ॥

ಓಂನಮೋ ಜ್ಞಾನರೂಪಾಯ ವಿಷ್ಣವೇ ಪರಮಾತ್ಮನೇ ।
ಆನಂದಾಯ ನಮಸ್ತುಭ್ಯಂ ಮಾಯಾತೀತಾಯ ತೇ ನಮಃ ॥ ೬೦ ॥

ನಮೋ ಗೂಢಶರೀರಾಯ ನಿರ್ಗುಣಾಯ ನಮೋಽಸ್ತು ತೇ ।
ಪುರುಷಾಯ ಪುರಾಣಾಯ ಸತ್ತಾಮಾತ್ರಸ್ವರೂಪಿಣೇ ॥ ೬೧ ॥

ನಮಃ ಸಾಂಖ್ಯಾಯ ಯೋಗಾಯ ಕೇವಲಾಯ ನಮೋಽಸ್ತು ತೇ ।
ಧರ್ಮಜ್ಞಾನಾಭಿಗಮ್ಯಾಯ ನಿಷ್ಕಲಾಯ ನಮೋಽಸ್ತು ತೇ ॥ ೬೨ ॥

---

೫೯ ಸಹಸ್ರಾರು ಸಂಖ್ಯೆಯ ಶಿರಸ್ಸುಗಳಿಂದಲೂ ಮತ್ತು ಸಾವಿರಾರು ಸಂಖ್ಯೆಯ ನಯನಗಳಿಂದಲೂ ಕೂಡಿರುವ ಪರಮಾತ್ಮನಿಗೆ ನಮಸ್ಕಾರವು. ಹಾಗು ಸಹಸ್ರ ಸಂಖ್ಯೆಯ ಹಸ್ತಗಳಿಂದಲೂ, ಪಾದಗಳಿಂದಲೂ ಶೋಭಿಸಲ್ಪಟ್ಟ ನಾರಾಯಣನನ್ನು ನಮಸ್ಕರಿಸುವೆವು

೬೦. ತತ್ತ್ವಜ್ಞಾನರೂಪನೂ, ಸರ್ವವ್ಯಾಪಕನೂ ಮತ್ತು ಓಂಕಾರರೂಪಿಯೂ ಆದ ಪರಮಾತ್ಮನಿಗೆ ನಮಸ್ಕಾರವು. ಆನಂದಸ್ವರೂಪನಾಗಿರುವ ನಿನಗೆ ನಮಸ್ಕಾರವು. ಮತ್ತು ಮಾಯಾಬಂಧನದಿಂದ ರಹಿತನಾದ ನಿನಗೆ ವಂದಿಸುವೆವು.

೬೧. ತಿಳಿಯಲು ಅಶಕ್ಯವಾದ ದೇಹವುಳ್ಳವನೂ, ಗುಣಸಂಗರಹಿತನೂ, ಪುರುಷಾಕಾರನೂ, ಪುರಾಣನೂ ಮತ್ತು ಸತ್ತಾಮಾತ್ರರೂಪವಾದ ಸ್ವರೂಪವುಳ್ಳವನೂ ಆದ ನಿನಗೆ ಅನಂತ ನಮಸ್ಕಾರಗಳನ್ನು ಮಾಡುವೆವು.

೬೨. ತತ್ತ್ವಜ್ಞಾನನಿಷ್ಠೆಯಿಂದ ವೇದ್ಯನೂ, ಯೋಗಾಭ್ಯಾಸದಿಂದ ಸಂಸ್ಕಾರವನ್ನು ಹೊಂದಿದವರಿಗೆ ಲಭ್ಯನೂ, ಅದ್ವಿತೀಯನೂ ಆದ ನಿನಗೆ ವಂದನೆಯು. ಧರ್ಮಮಾರ್ಗ-ಜ್ಞಾನಮಾರ್ಗಗಳಿಂದ ಹೊಂದಬೇಕಾದವನೂ ಮತ್ತು ಅವಯವಗಳಿಂದ ವರ್ಜಿತನೂ ಆದ ನಿನ್ನನ್ನು ವಂದಿಸುವೆವು.

ನಮಸ್ತೇ ಯೋಗತತ್ತ್ವಾಯ ಮಹಾಯೋಗೇಶ್ವರಾಯ ಚ ।
ಪರಾವರಾಣಾಂ ಪ್ರಭವೇ ವೇದವೇದ್ಯಾಯ ತೇ ನಮಃ ॥ ೬೩ ॥

ನಮೋ ಬುದ್ಧಾಯ ಶುದ್ಧಾಯ ನಮೋ ಯುಕ್ತಾಯ ಹೇತವೇ ।
ನಮೋ ನಮೋ ನಮಸ್ತುಭ್ಯಂ ಮಾಯಿನೇ ವೇಧಸೇ ನಮಃ ॥ ೬೪ ॥

ನಮೋಽಸ್ತು ತೇ ವರಾಹಾಯ ನಾರಸಿಹ್ಮಾಯ ತೇ ನಮಃ ।
ವಾಮನಾಯ ನಮಸ್ತುಭ್ಯಂ ಹೃಷೀಕೇಶಾಯ ತೇ ನಮಃ ॥ ೬೫ ॥

ಸ್ವರ್ಗಾಪವರ್ಗದಾನಾಯ ನಮೋಽಪ್ರತಿಹತಾತ್ಮನೇ ।
ನಮೋ ಯೋಗಾಧಿಗಮ್ಯಾಯ ಯೋಗಿನೇ ಯೋಗದಾಯಿನೇ ॥ ೬೬ ॥

---

೬೩. ಯೋಗಾಭ್ಯಾಸದಿಂದ ಲಭಿಸುವ ವಸ್ತುಸ್ವರೂಪನೂ, ಯೋಗಿಗಳಿಗೆ ಈಶ್ವರನೂ ಆದ ನಿನಗೆ ನಮಸ್ಕಾರವು. ಕಾರ್ಯ–ಕಾರಣರೂಪಗಳನ್ನು ಹೊಂದಿದ ಸಮಸ್ತ ವಸ್ತುಗಳಿಗೆ ಪ್ರಭುವೂ, ವೇದಗಳಿಂದ ವೇದ್ಯನೂ ಆದ ನಿನಗೆ ನಮಸ್ಕರಿಸುವೆವು.

೬೪. ಜ್ಞಾನಸ್ವರೂಪನೂ, ಸಕಲ ದೋಷನಿರ್ಮುಕ್ತನೂ ಆದ ಪರಮಾತ್ಮನಿಗೆ ನಮಸ್ಕಾರವು. ಸಕಲ ಪ್ರಪಂಚಯೋಗವುಳ್ಳವನೂ, ಕಾರಣರೂಪನೂ ಆದ ಪರಮಾತ್ಮನಿಗೆ ನಮಸ್ಕಾರವು. ಹಾಗು ಮಾಯಾವಿಯೂ ಚರ–ಅಚರಗಳ ನಿರ್ಮಾತೃವೂ ಆದ ನಿನಗೆ ನಮಸ್ಕಾರವು.

೬೫. ಮತ್ತು ವರಾಹ ರೂಪವನ್ನು ಧರಿಸಿದ ನಿನಗೆ ನಮಸ್ಕಾರವು. ನರಸಿಹ್ಮನಾಗಿ ಅವತರಿಸಿದ ನಿನಗೆ ವಂದನೆಯು. ವಾಮನಮೂರ್ತಿಯಾಗಿ ಕಾಣಿಸಿದ ನಿನ್ನನ್ನು ನಮಸ್ಕರಿಸುವೆವು. ಮತ್ತು ಸರ್ವೇಂದ್ರಿಯಪ್ರೇರಕನಾದ ನಿನಗೆ ನಮಸ್ಕಾರವು.

೬೬. ಹಾಗು ಸ್ವರ್ಗ–ಮೋಕ್ಷಗಳೆಂಬ ಪುರುಷಾರ್ಥಗಳನ್ನು ಕೊಡುವವನೂ, ತಡೆಯಿಲ್ಲದಂತೆ ಸರ್ವವನ್ನೂ ವ್ಯಾಪಿಸಿದ ಆತ್ಮವುಳ್ಳವನೂ ಆದ ಪರಮಾತ್ಮನಿಗೆ ವಂದನೆಯು. ಮತ್ತು ಯೋಗಾನುಷ್ಠಾನದಿಂದ ಗಮ್ಯನೂ, ಯೋಗಿಸ್ವರೂಪನೂ, ಯೋಗಸಿದ್ಧಿಯನ್ನು ಕೊಡುವವನೂ ಆದ ನಿನಗೆ ನಮಸ್ಕಾರವು.

ದೇವಾನಾಂ ಪತಯೇ ತುಭ್ಯಂ ದೇವಾರ್ತಿಶಮನಾಯ ತೇ ॥ ೬೭ ॥

ಭಗವಂಸ್ತ್ವತ್ಪ್ರಸಾದೇನ ಸರ್ವಸಂಸಾರನಾಶನಮ್ ।
ಅಸ್ಮಾಭಿರ್ವಿದಿತಂ ಜ್ಞಾನಂ ಯಜ್‌ ಜ್ಞಾತ್ವಾಮೃತಮಶ್ನುತೇ ॥ ೬೮ ॥

ಶ್ರುತಾಶ್ಚ ವಿವಿಧಾ ಧರ್ಮಾ ವಂಶಾ ಮನ್ವಂತರಾಣಿ ಚ ।
ಸರ್ಗಶ್ಚ ಪ್ರತಿಸರ್ಗಶ್ಚ ಬ್ರಹ್ಮಾಂಡಸ್ಯಾಸ್ಯ ವಿಸ್ತರಃ ॥ ೬೯ ॥

ತ್ವಂ ಹಿ ಸರ್ವಜಗತ್ಸಾಕ್ಷೀ ವಿಶ್ವೋ ನಾರಾಯಣಃ ಪರಃ ।
ತ್ರಾತುಮರ್ಹಸ್ಯನಂತಾತ್ಮಾ ತ್ವಾಮೇವ ಶರಣಂ ಗತಾಃ ॥ ೭೦ ॥

---

೬೭. ದೇವತೆಗಳಿಗೆ ಪ್ರಭುವಾದ ನಿನ್ನನ್ನು ವಂದಿಸುವೆವು. ಮತ್ತು ದೇವತೆಗಳಿಗೆ ಉಂಟಾಗುವ ಆಧ್ಯಾತ್ಮಿಕ ಮೊದಲಾದ ಪೀಡೆಗಳನ್ನು ಶಮನಮಾಡಿ ದೇವವೃಂದವನ್ನು ರಕ್ಷಿಸುವ ಪರಮಾತ್ಮನಿಗೆ ನಮಸ್ಕಾರವನ್ನು ಮಾಡುವೆವು.

೬೮. ಷಡ್ಗುಣೈಶ್ವರ್ಯಸಂಪನ್ನನಾದ ಸ್ವಾಮಿಯೆ! ನಿನ್ನ ಅನುಗ್ರಹದಿಂದ ಸರ್ವ ಸಂಸಾರಬಂಧನಗಳನ್ನು ದೂರಮಾಡುವ ತತ್ತ್ವಜ್ಞಾನವು ನಮ್ಮಿಂದ ಹೊಂದಲ್ಪಟ್ಟಿದೆ. ಈ ಜ್ಞಾನನಿಷ್ಠೆಯನ್ನು ಹೊಂದಿದವರು ಕೈವಲ್ಯವನ್ನು ಅನುಭವಿಸುವರು.

೬೯. ಈ ಪುರಾಣ ಕಥೆಯಿಂದ ಅನೇಕ ಧರ್ಮೋಪದೇಶಗಳೂ, ಅನೇಕ ಮಹಾತ್ಮರ ವಂಶಗಳೂ, ಮನ್ವಂತರಗಳೂ, ಪ್ರಪಂಚದ ಸೃಷ್ಟಿರಚನೆಯೂ, ಪ್ರಪಂಚದ ಪ್ರಲಯಾವಸ್ಥೆಯೂ ಮತ್ತು ಈ ಬ್ರಹ್ಮಾಂಡದ ವಿಶೇಷ ವಿಸ್ತಾರವೂ ಶ್ರವಣಮಾಡಲ್ಪಟ್ಟಿತು.

೭೦. ನೀನು ಸಮಸ್ತ ಜಗತ್ತಿಗೆ ಸಾಕ್ಷಿಸ್ವರೂಪನೂ, ವಿಶ್ವರೂಪಿಯೂ, ಪರಮಪುರುಷನೂ ಮತ್ತು ಜಲಾಶಯಶಾಯಿಯೂ ಆಗಿದ್ದೀಯೆ. ಅನಂತರೂಪಗಳಿಂದ ಕೂಡಿರುವ ನೀನು ನಮ್ಮನ್ನು ಉದ್ಧಾರಮಾಡಲು ಸಹ ಅರ್ಹನಾಗಿದ್ದೀಯೆ. ನಾವೆಲ್ಲರೂ ನಿನ್ನನ್ನು ಶರಣುಹೊಂದಿರುವೆವು.

**ಸೂತ ಉವಾಚ :—**

**ಏತದ್ವಃ ಕಥಿತಂ ವಿಪ್ರಾ ಭೋಗಮೋಕ್ಷಪ್ರದಾಯಕಮ್ ।**
**ಕೌರ್ಮಂ ಪುರಾಣಮಖಿಲಂ ಯಜ್ಜಗಾದ ಗದಾಧರಃ ॥ ೭೧ ॥**

**ಅಸ್ಮಿನ್ ಪುರಾಣೇ ಲಕ್ಷ್ಮ್ಯಾಸ್ತು ಸಂಭವಃ ಕಥಿತಃ ಪುರಾ ।**
**ಮೋಹಾಯಾಶೇಷಭೂತಾನಾಂ ವಾಸುದೇವೇನ ಯೋಜಿತಃ ॥ ೭೨ ॥**

**ಪ್ರಜಾಪತೀನಾಂ ಸರ್ಗಾಸ್ತು ವರ್ಣಧರ್ಮಾಶ್ಚ ವೃತ್ತಯಃ ।**
**ಧರ್ಮಾರ್ಥಕಾಮಮೋಕ್ಷಾಣಾಂ ಯಥಾವಲ್ಲಕ್ಷಣಂ ಶುಭಮ್ ॥ ೭೩ ॥**

**ಪಿತಾಮಹಸ್ಯ ವಿಷ್ಣೋಶ್ಚ ಮಹೇಶಸ್ಯ ಚ ಧೀಮತಃ ।**
**ಏಕತ್ವಂ ಚ ಪೃಥಕ್ತ್ವಂ ಚ ವಿಶೇಷಶ್ಚೋಪವರ್ಣಿತಃ ॥ ೭೪ ॥**

---

೭೧. ಸೂತಮುನಿಯು ಇಂತೆಂದನು :—ವಿಪ್ರೋತ್ತಮರೆ! ಭೋಗ-ಮೋಕ್ಷ ಫಲಗಳನ್ನು ಕೊಡುವ ಈ ಕೂರ್ಮಪುರಾಣವು ನನ್ನಿಂದ ನಿಮಗೆ ಸಂಪೂರ್ಣವಾಗಿ ಉಪದೇಶಿಸಲ್ಪಟ್ಟಿದೆ. ಇದನ್ನು ಕೂರ್ಮಮೂರ್ತಿಯಾದ ನಾರಾಯಣನು ಮೊದಲು ಮುನಿಗಳಿಗೆ ಉಪದೇಶಮಾಡಿರುವನು.

೭೨. ಈ ಪುರಾಣದಲ್ಲಿ ಆರಂಭದಲ್ಲಿಯೆ ಲಕ್ಷ್ಮೀದೇವಿಯ ಉತ್ಪತ್ತಿಯು ವರ್ಣಿಸಲ್ಪಟ್ಟಿದೆ. ಮತ್ತು ವಾಸುದೇವನಿಂದ ಸಮಸ್ತ ಭೂತಗಳನ್ನು ಮೋಹಪಡಿಸುವುದಕ್ಕೋಸ್ಕರ ಲಕ್ಷ್ಮಿಯ ಸಂಗವು ಕಲ್ಪಿಸಲ್ಪಟ್ಟಿರುವುದು.

೭೩. ಮರೀಚಿ ಮುಂತಾದ ಪ್ರಜಾಪತಿಗಳಿಂದ ಸಂಭವಿಸಿದ ಸೃಷ್ಟಿವಿಸ್ತಾರವೂ, ಬ್ರಾಹ್ಮಣಾದಿ ವರ್ಣಗಳಿಗೆ ವಿಹಿತವಾದ ಧರ್ಮಗಳೂ, ಆಯಾಯ ವರ್ಣದವರಿಗೆ ವಿಹಿತವಾದ ವೃತ್ತಿ ಉಪಾಯಗಳೂ ಮತ್ತು ಧರ್ಮ-ಅರ್ಥ-ಕಾಮ-ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳ ಶುಭಕರವಾದ ಲಕ್ಷಣವೂ ಯಥಾರ್ಥ ರೂಪದಿಂದ ಪ್ರತಿಪಾದಿಸಲ್ಪಟ್ಟಿವೆ.

೭೪. ಬ್ರಹ್ಮದೇವ, ವಿಷ್ಣು ಮತ್ತು ಸರ್ವಜ್ಞನಾದ ಶಂಕರರ ಅಭೇದವೂ, ಕಾರ್ಯಾನುಸಾರವಾಗಿ ಸಂಭವಿಸುವ ಅವರ ಭೇದವೂ ಮತ್ತು ಆ ತ್ರಿಮೂರ್ತಿಗಳಲ್ಲಿರುವ ವಿಶೇಷವೂ ವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ.

ಭಕ್ತಾನಾಂ ಲಕ್ಷಣಂ ಪ್ರೋಕ್ತಂ ಸಮಾಚಾರಶ್ಚ ಭೋಜನಮ್ ।
ವರ್ಣಾಶ್ರಮಾಣಾಂ ಕಥಿತಂ ಯಥಾವದಿಹ ಲಕ್ಷಣಮ್ ॥ ೨೫ ॥

ಆದಿಸರ್ಗಸ್ತತಃ ಪಶ್ಚಾದಂಡಾವರಣಸಪ್ತಕಮ್ ।
ಹಿರಣ್ಯಗರ್ಭಃ ಸರ್ಗಶ್ಚ ಕೀರ್ತಿತೋ ಮುನಿಪುಂಗವಾಃ ॥ ೨೬ ॥

ಕಾಲಸಂಖ್ಯಾಪ್ರಕಥನಂ ಮಾಹಾತ್ಮ್ಯಂ ಚೇಶ್ವರಸ್ಯ ಚ ।
ಬ್ರಹ್ಮಣಃ ಶಯನಂ ಚಾಪ್ಸು ನಾಮನಿರ್ವಚನಂ ತಥಾ ॥ ೨೭ ॥

ವರಾಹವಪುಷೋ ಭೂಯೋ ಭೂಮೇರುದ್ಧರಣಂ ಪುನಃ ।
ಮುಖ್ಯಾದಿಸರ್ಗಕಥನಂ ಮುನಿಸರ್ಗಸ್ತಥಾಪರಃ ॥ ೨೮ ॥

---

೨೫. ಭಗವದ್ಭಕ್ತರ ಲಕ್ಷಣ, ವ್ಯವಹಾರ ಮತ್ತು ಭೋಜನ ಮಾರ್ಗಗಳು ಹಿಂದೆ ಹೇಳಲ್ಪಟ್ಟಿವೆ. ಮತ್ತು ವರ್ಣ-ಆಶ್ರಮಗಳ ಲಕ್ಷಣವು ಈ ಪುರಾಣದಲ್ಲಿ ತಾತ್ತ್ವಿಕವಾಗಿ ವರ್ಣಿಸಲ್ಪಟ್ಟಿವೆ.

೨೬. ಮುನಿಪುಂಗವರೆ! ಮೊದಲನೆಯ ಅಂಡಸೃಷ್ಟಿ, ತರುವಾಯ ಬ್ರಹ್ಮಾಂಡಕ್ಕೆ ಬಾಹ್ಯವಾಗಿರುವ ಏಳು ಆವರಣಗಳ ರಚನೆ ಮತ್ತು ಬ್ರಹ್ಮದೇವನೂ ಅವನಿಂದ ಆಗುವ ಭೂತಸೃಷ್ಟಿಯೂ ಈ ಪುರಾಣದಲ್ಲಿ ವರ್ಣಿಸಲ್ಪಟ್ಟಿವೆ.

೨೭. ಕಾಲ ಮತ್ತು ಕಾಲಾವಯವಗಳ ಸಂಖ್ಯೆ, ಈಶ್ವರನಲ್ಲಿರುವ ಮಾಹಾತ್ಮ್ಯ, ಜಲಾಶಯದಲ್ಲಿ ಬ್ರಹ್ಮದೇವನು ಶಯನಮಾಡಿರುವ ನಿಮಿತ್ತ ಮತ್ತು ಪರಮಾತ್ಮನ ಅನೇಕ ಸಂಜ್ಞಾಂಕನಗಳಿಂದ ತಿಳಿಯುವ ಅವಯವಾರ್ಥ-ಇವುಗಳೆಲ್ಲವೂ ಈ ಪುರಾಣದಲ್ಲಿ ಪ್ರತಿಪಾದಿಸಲ್ಪಟ್ಟಿವೆ.

೨೮. ಹಾಗು ವರಾಹ ಅವತಾರದಿಂದ ಮತ್ತೆ ಭೂಮಿಯನ್ನು ಎತ್ತಿರುವುದು, ಮುಖ್ಯ ಮೊದಲಾದ ಅನೇಕ ವಿಧದ ಸೃಷ್ಟಿ, ಮತ್ತೊಂದು ಮುನಿಪ್ರಜಾಪತಿಗಳಿಂದ ವಿಸ್ತಾರಹೊಂದಿದ ಸರ್ಗ-ಇವುಗಳೆಲ್ಲವೂ ಈ ಪುರಾಣದಲ್ಲಿ ಉಪದೇಶಿಸಲ್ಪಟ್ಟಿವೆ.

ವ್ಯಾಖ್ಯಾತೋ ರುದ್ರಸರ್ಗಶ್ಚ ಋಷಿಸರ್ಗಶ್ಚ ತಾಪಸಃ ।
ಧರ್ಮಸ್ಯ ಚ ಪ್ರಜಾಸರ್ಗಸ್ತಾಮಸಾತ್ಪೂರ್ವಮೇವ ತು　　॥ ೭೯ ॥

ಬ್ರಹ್ಮವಿಷ್ಣ್ವೋರ್ವಿವಾದಃ ಸ್ಯಾದಂತರ್ದೇಹಪ್ರವೇಶನಮ್ ।
ಪದ್ಮೋದ್ಭವತ್ವಂ ದೇವಸ್ಯ ಮೋಹಸ್ತಸ್ಯ ಚ ಧೀಮತಃ　　॥ ೮೦ ॥

ದರ್ಶನಂ ಚ ಮಹೇಶಸ್ಯ ಮಾಹಾತ್ಮ್ಯಂ ವಿಷ್ಣುನೇರಿತಮ್ ।
ದಿವ್ಯದೃಷ್ಟಿಪ್ರದಾನಂ ಚ ಬ್ರಹ್ಮಣಃ ಪರಮೇಷ್ಠಿನಾ　　॥ ೮೧ ॥

ಸಂಸ್ತವೋ ದೇವದೇವಸ್ಯ ಬ್ರಹ್ಮಣಾ ಪರಮೇಷ್ಠಿನಾ ।
ಪ್ರಸಾದೋ ಗಿರಿಶಸ್ಯಾಥ ವರದಾನಂ ತಥೈವ ಚ　　॥ ೮೨ ॥

---

೭೯. ರುದ್ರದೇವನ ಸೃಷ್ಟಿಯೂ, ತಪಸ್ಸಿನಿಂದ ಸಂಭವಿಸಿದ ಮುನಿಸೃಷ್ಟಿಯೂ ಮತ್ತು ತಾಮಸಮನು ಪ್ರಜಾಪತಿಗಿಂತಲೂ ಆದಿಯಲ್ಲಿ ನಡೆದ ಧರ್ಮಪ್ರಜಾಪತಿಯು ನಿರ್ಮಿಸಿದ ಸೃಷ್ಟಿಯೂ ಇಲ್ಲಿ ವರ್ಣಿಸಲ್ಪಟ್ಟಿರುತ್ತವೆ.

೮೦. ಬ್ರಹ್ಮದೇವ, ವಿಷ್ಣು--ಇವರಿಗೆ ಮಹತ್ತ್ವವಿಷಯದಲ್ಲಿ ಉಂಟಾದ ವಿವಾದ, ಹಾಗು ಬ್ರಹ್ಮದೇವನು ದೇಹದೊಳಗೆ ಪ್ರವೇಶಮಾಡಿದುದು ಮತ್ತು ಪದ್ಮ ಪುಷ್ಪದಿಂದ ಹುಟ್ಟಿ ಜ್ಞಾನಿಯಾದರೂ ಅಜ್ಞಾನಾವಸ್ಥೆಯನ್ನು ಹೊಂದಿದುದು-ಇವುಗಳು ವರ್ಣಿಸಲ್ಪಟ್ಟಿವೆ.

೮೧. ಬ್ರಹ್ಮದೇವನಿಗೆ ಪರಮಪದದಲ್ಲಿ ವಾಸಿಸುವ ವಿಷ್ಣುವಿನಿಂದ ಆದ ಮಹೇಶ್ವರನ ದರ್ಶನ, ಮಾಹಾತ್ಮ್ಯ ಪ್ರಶಂಸೆ ಮತ್ತು ದಿವ್ಯದೃಷ್ಟಿಯನ್ನು ಕೊಟ್ಟಿರುವುದು-ಮುಂತಾದ ಕಥಾಭಾಗಗಳು ವರ್ಣಿಸಲ್ಪಟ್ಟಿವೆ.

೮೨. ದೇವೋತ್ತಮನಾದ ಶಂಕರನನ್ನು ಪರಮಪೂಜ್ಯಸ್ಥಾನದಲ್ಲಿರುವ ಬ್ರಹ್ಮದೇವನು ಪರಿಚಯಮಾಡಿಕೊಂಡಿರುವುದು, ಶಂಕರನ ಅನುಗ್ರಹವನ್ನು ಹೊಂದಿರುವುದು, ಮತ್ತು ಶಂಕರನ ವರದಾನಗಳು ವರ್ಣಿಸಲ್ಪಟ್ಟಿವೆ.

ಸಂವಾದೋ ವಿಷ್ಣುನಾ ಸಾರ್ಧಂ ಶಂಕರಸ್ಯ ಮಹಾತ್ಮನಃ ।
ವರದಾನಂ ತಥಾ ಪೂರ್ವಮಂತರ್ಧಾನಂ ಪಿನಾಕಿನಃ ॥ ೮೩ ॥

ವಧಶ್ಚ ಕಥಿತೋ ವಿಪ್ರಾ ಮಧುಕೈಟಭಯೋಃ ಪುರಾ ।
ಅವತಾರೋಽಥ ದೇವಸ್ಯ ಬ್ರಹ್ಮಣೋ ನಾಭಿಪಂಕಜಾತ್ ॥ ೮೪ ॥

ಏಕೀಭಾವಶ್ಚ ದೇವೇನ ಬ್ರಹ್ಮಣಾ ಕಥಿತಃ ಪುರಾ ।
ವಿಮೋಹೋ ಬ್ರಹ್ಮಣಶ್ಚಾಥ ಸಂಜ್ಞಾನಾತ್ತು ಹರೇಸ್ತತಃ ॥ ೮೫ ॥

ತಪಶ್ಚರಣಮಾಖ್ಯಾತಂ ದೇವದೇವಸ್ಯ ಧೀಮತಃ ।
ಪ್ರಾದುರ್ಭಾವೋ ಮಹೇಶಸ್ಯ ಲಲಾಟಾತ್ ಕಥಿತಸ್ತತಃ ॥ ೮೬ ॥

---

೮೩. ಮಹಾತ್ಮನಾದ ಶಂಕರನಿಗೂ ವಿಷ್ಣುವಿಗೂ ನಡೆದಿರುವ ಸಂಭಾಷಣೆ ಮತ್ತು ಶಂಕರನು ಕೊಟ್ಟಿರುವ ವರದಾನ, ಹಾಗು ಪಿನಾಕಾಯುಧಧಾರಿಯಾದ ಶಿವನು ಮೊದಲು ಅಂತರ್ಧಾನವನ್ನು ಹೊಂದಿದುದು-ಇವುಗಳು ಪ್ರತಿಪಾದಿಸಲ್ಪಟ್ಟಿವೆ.

೮೪. ವಿಪ್ರೋತ್ತಮರೆ! ಈ ಪುರಾಣದಲ್ಲಿ ಹಿಂದೆ ಮಧು-ಕೈಟಭರೆಂಬ ದಾನವರ ವಧವು ವರ್ಣಿಸಲ್ಪಟ್ಟಿದೆ. ಮತ್ತು ಬ್ರಹ್ಮದೇವನು ವಿಷ್ಣುವಿನ ನಾಭಿಕಮಲ ದಿಂದ ಜನಿಸಿದುದು ವರ್ಣಿಸಲ್ಪಟ್ಟಿದೆ.

೮೫. ಪೂರ್ವದಲ್ಲಿ ಬ್ರಹ್ಮದೇವನೊಡನೆ ವಿಷ್ಣುವಿನ ಐಕ್ಯಾವಸ್ಥೆಯು ಉಪ ದೇಶಿಸಲ್ಪಟ್ಟಿದೆ. ಮತ್ತು ಬ್ರಹ್ಮದೇವನಿಗೆ ಒದಗಿರುವ ಮೂಢಾವಸ್ಥೆಯೂ ತರುವಾಯ ಶ್ರೀಮನ್ನಾರಾಯಣನಿಂದ ಪ್ರಬೋಧಪ್ರಾಪ್ತಿಯೂ ನಿರೂಪಿಸಲ್ಪಟ್ಟಿವೆ.

೮೬. ಸರ್ವಜ್ಞನೂ ದೇವೋತ್ತಮನೂ ಆದ ಬ್ರಹ್ಮದೇವನು ಆಚರಿಸಿದ ತಪಶ್ಚರ್ಯೆಯು ವರ್ಣಿಸಲ್ಪಟ್ಟಿದೆ. ಹಾಗು ಬ್ರಹ್ಮದೇವನ ಲಲಾಟ ಭಾಗದಿಂದ ಮಹೇಶ್ವರನು ಪ್ರಾದುರ್ಭಾವವನ್ನು ಹೊಂದಿರುವುದು ಕೀರ್ತಿಸಲ್ಪಟ್ಟಿವೆ.

ರುದ್ರಾಣಾಂ ಕಥಿತಾ ಸೃಷ್ಟಿರ್ಬ್ರಹ್ಮಣಃ ಪ್ರತಿಷೇಧನಮ್ ।
ಭೂತಿಶ್ಚ ದೇವದೇವಸ್ಯ ವರದಾನೋಪದೇಶಕೌ ॥ ೮೭ ॥

ಅಂತರ್ಧಾನಂ ಚ ದೇವಸ್ಯ ತಪಶ್ಚರ್ಯಾಂಡಜಸ್ಯ ಚ ।
ದರ್ಶನಂ ದೇವದೇವಸ್ಯ ನರನಾರೀಶರೀರತಾ ॥ ೮೮ ॥

ದೇವ್ಯಾ ವಿಭಾಗಕಥನಂ ದೇವದೇವಾತ್ ಪಿನಾಕಿನಃ ।
ದೇವ್ಯಾಶ್ಚ ಪಶ್ಚಾತ್ ಕಥಿತಂ ದಕ್ಷಪುತ್ರೀತ್ವಮೇವ ಚ ॥ ೮೯ ॥

ಹಿಮವದ್ದುಹಿತೃತ್ವಂ ಚ ದೇವ್ಯಾ ಯಾಥಾತ್ಮ್ಯಮೇವ ಚ ।
ದರ್ಶನಂ ದಿವ್ಯರೂಪಸ್ಯ ವಿಶ್ವರೂಪಾಕ್ಷದರ್ಶನಮ್ ॥ ೯೦ ॥

---

೮೭. ರುದ್ರದೇವನು ತನಗೆ ತುಲ್ಯವಾದ ರುದ್ರದೇವಗಣವನ್ನು ಸೃಷ್ಟಿ ಮಾಡುವುದನ್ನು ಬ್ರಹ್ಮದೇವನು ನಿಷೇಧಿಸಿದುದು ಮತ್ತು ದೇವೋತ್ತಮನಾದ ಮಹೇಶ್ವರನ ವಿಭೂತಿ, ವರದಾನ, ಯೋಗೋಪದೇಶಗಳು ವರ್ಣಿಸಲ್ಪಟ್ಟಿವೆ.

೮೮. ದೇವೋತ್ತಮನಾದ ವಿಷ್ಣುವಿನ ಅಂತರ್ಧಾನವೂ, ಗರುಡನು ಸ್ವಾಮಿಯ ದರ್ಶನಾರ್ಥವಾಗಿ ತಪಶ್ಚರ್ಯೆಮಾಡಿದುದೂ, ದೇವೋತ್ತಮನ ದರ್ಶನ ಮತ್ತು ಶಂಕರನ ಅರ್ಧನಾರೀಶ್ವರ-ಸ್ವರೂಪ ಇವುಗಳೂ ವರ್ಣಿಸಲ್ಪಟ್ಟಿವೆ.

೮೯. ಪಿನಾಕಾಯುಧವನ್ನು ಧರಿಸಿದವನೂ, ದೇವಾಧಿದೇವನೂ ಆದ ಶಂಕರನಿಂದ ಸತೀದೇವಿಯ ವಿಯೋಗ, ತರುವಾಯ ಸತೀದೇವಿಯು ದಕ್ಷಬ್ರಹ್ಮನ ಪುತ್ರಿಯಾಗಿ ಜನಿಸಿದುದು ವರ್ಣಿಸಲ್ಪಟ್ಟಿವೆ.

೯೦. ಆ ದೇವಿಯು ಮತ್ತೆ ಹಿಮವಂತನಿಗೆ ಪುತ್ರಿಯಾಗಿ ಜನಿಸಿರುವುದೂ, ದೇವಿಯ ಪರಮಾರ್ಥಮಹಿಮೆಯೂ, ದಿವ್ಯವಾದ ರೂಪದ ಸಾಕ್ಷಾತ್ಕಾರವೂ ಮತ್ತು ವಿರೂಪಾಕ್ಷನಾದ ಮಹೇಶ್ವರನ ದರ್ಶನವೂ ವರ್ಣಿಸಲ್ಪಟ್ಟಿವೆ.

ನಾಮ್ನಾಂ ಸಹಸ್ರಂ ಕಥಿತಂ ಪಿತ್ರಾ ಹಿಮವತಾ ಸ್ವಯಮ್ ।
ಉಪದೇಶೋ ಮಹಾದೇವ್ಯಾ ವರದಾನಂ ತಥೈವ ಚ ॥ ೯೧ ॥

ಭೃಗ್ವಾದೀನಾಂ ಪ್ರಜಾಸರ್ಗೋ ರಾಜ್ಞಾಂ ವಂಶಸ್ಯ ವಿಸ್ತರಃ ।
ಪ್ರಾಚೇತಸತ್ವಂ ದಕ್ಷಸ್ಯ ದಕ್ಷಯಜ್ಞವಿಮರ್ದನಮ್ ॥ ೯೨ ॥

ದಧೀಚಸ್ಯ ಚ ಯಜ್ಞಸ್ಯ ವಿವಾದಃ ಕಥಿತಸ್ತದಾ ।
ತತಶ್ಚ ಶಾಪಃ ಕಥಿತೋ ಮುನೀನಾಂ ಮುನಿಪುಂಗವಾಃ ॥ ೯೩ ॥

ರುದ್ರಾಗತಿಃ ಪ್ರಸಾದಶ್ಚ ಅಂತರ್ಧಾನಂ ಪಿನಾಕಿನಃ ।
ಪಿತಾಮಹೋಪದೇಶಃ ಸ್ಯಾತ್ ಕೀರ್ತ್ಯತೇ ವೈರಣಾಯ ತು ॥ ೯೪ ॥

---

೯೧. ಪಾರ್ವತೀದೇವಿಯ ಜನಕನಾದ ಹಿಮವಂತನಿಂದ ರಚಿಸಲ್ಪಟ್ಟ ದೇವೀ ಸಹಸ್ರನಾಮಸ್ತೋತ್ರ, ಪ್ರಸನ್ನಳಾದ ಮಹಾದೇವಿಯ ಉಪದೇಶ ಹಾಗು ವರಪ್ರದಾನಗಳು ಕೀರ್ತಿಸಲ್ಪಟ್ಟಿರುತ್ತವೆ.

೯೨. ಭೃಗುಮುನಿ ಮುಂತಾದ ಮಹರ್ಷಿಗಳಿಂದ ಆದ ಪ್ರಜಾಸರ್ಗವಿಸ್ತಾರ, ರಾಜವಂಶಗಳ ವಿಸ್ತಾರ, ದಕ್ಷಪ್ರಜಾಪತಿಯು ಪ್ರಾಚೇತಸನಾದುದು ಮತ್ತು ದಕ್ಷ ಬ್ರಹ್ಮನ ಯಜ್ಞವಿಧ್ವಂಸನಗಳು ವರ್ಣಿಸಲ್ಪಟ್ಟಿರುವುವು.

೯೩. ಮುನಿಪುಂಗವರೆ! ದಕ್ಷಯಜ್ಞ ಸಮಾರಂಭದಲ್ಲಿ ದಧೀಚಮುನಿಯ ವಿವಾದವು ನಿರೂಪಿಸಲ್ಪಟ್ಟಿದೆ. ಹಾಗು ಶಿವದ್ರೋಹಿಗಳಾದ ಮುನಿಜನರಲ್ಲಿ ದಧೀಚ ಮುನಿಯ ಶಾಪಪ್ರದಾನವು ವರ್ಣಿಸಲ್ಪಟ್ಟಿದೆ.

೯೪. ಆ ಸಮಯದಲ್ಲಿ ಪಿನಾಕಾಯುಧವನ್ನು ಧರಿಸಿರುವ ರುದ್ರಮೂರ್ತಿಯ ಆಗಮನ, ರುದ್ರದೇವನ ಅನುಗ್ರಹ, ಮತ್ತು ರುದ್ರನು ಅಂತರ್ಧಾನ ಹೊಂದಿರುವುದು, ತರುವಾಯ ಬ್ರಹ್ಮದೇವನ ಉಪದೇಶ—ಇವುಗಳು ವರ್ಣಿಸಲ್ಪಟ್ಟಿವೆ.

ದಕ್ಷಸ್ಯ ಚ ಪ್ರಜಾಸರ್ಗಃ ಕಶ್ಯಪಸ್ಯ ಮಹಾತ್ಮನಃ ।
ಹಿರಣ್ಯಕಶಿಪೋರ್ನಾಶೋ ಹಿರಣ್ಯಾಕ್ಷವಧಸ್ತಥಾ ॥ ೯೫ ॥

ತತಶ್ಚ ಶಾಪಃ ಕಥಿತೋ ದೇವದಾರುವನೌಕಸಾಮ್ ।
ನಿಗ್ರಹಶ್ಚಾಂಧಕಸ್ಯಾಥ ಗಾಣಪತ್ಯಮನುತ್ತಮಮ್ ॥ ೯೬ ॥

ಪ್ರಹ್ಲಾದನಿಗ್ರಹಶ್ಚಾಥ ಬಲೇಃ ಸಂಯಮನಂ ತ್ವಥ ।
ಬಾಣಸ್ಯ ನಿಗ್ರಹಶ್ಚಾಥ ಪ್ರಸಾದಶ್ಚಾಸ್ಯ ಶೂಲಿನಃ ॥ ೯೭ ॥

ಋಷೀಣಾಂ ವಂಶವಿಸ್ತಾರೋ ರಾಜ್ಞಾಂ ವಂಶಾಃ ಪ್ರಕೀರ್ತಿತಾಃ ।
ವಸುದೇವಾತ್ತತೋ ವಿಷ್ಣೋರುತ್ಪತ್ತಿಃ ಸ್ವೇಚ್ಛಯಾ ಹರೇಃ ॥ ೯೮ ॥

---

೯೫. ದಕ್ಷಪ್ರಜಾಪತಿಯಿಂದಲೂ , ಮಹಾತ್ಮನಾದ ಕಶ್ಯಪ ಪ್ರಜಾಪತಿಯಿಂದಲೂ ಆದ ಪ್ರಜಾಸರ್ಗದ ವಿಸ್ತಾರ, ಹಿರಣ್ಯಾಕ್ಷ-ಹಿರಣ್ಯಕಶಿಪುಗಳೆಂಬ ಅಸುರರ ಸಂಹಾರಗಳು ಉಪದೇಶಿಸಲ್ಪಟ್ಟಿವೆ.

೯೬. ತರುವಾಯ ದೇವದಾರುವನದಲ್ಲಿ ವಾಸಮಾಡುತ್ತಿರುವ ವಿಪ್ರರಿಗೆ ಶಾಪ ಪ್ರಾಪ್ತಿಯೂ, ಅಂಧಕಾಸುರನನ್ನು ನಿಗ್ರಹಿಸಿದುದೂ ಮತ್ತು ಅಂಧಕಾಸುರನಿಗೆ ಗಣಾಧಿಪತ್ಯದ ಅಧಿಕಾರ ಪ್ರಾಪ್ತಿಯೂ ಕೀರ್ತಿಸಲ್ಪಟ್ಟಿವೆ.

೯೭. ಪ್ರಹ್ಲಾದ ದೈತ್ಯನ ನಿಗ್ರಹವೂ, ಬಲಿಚಕ್ರವರ್ತಿಯ ಬಂಧನವೂ, ಮತ್ತು ಬಾಣಾಸುರನನ್ನು ನಿಗ್ರಹಿಸಿರುವುದೂ ವರ್ಣಿಸಲ್ಪಟ್ಟಿವೆ. ಮತ್ತು ತ್ರಿಶೂಲಧಾರಿಯಾದ ಶಿವನು ಬಾಣಾಸುರನಿಗೆ ತೋರಿಸಿದ ಅನುಗ್ರಹವು ವರ್ಣಿಸಲ್ಪಟ್ಟಿದೆ.

೯೮. ಮುಂದೆ ಋಷಿಗಳ ವಂಶಾವಳಿಯ ವಿಸ್ತಾರವೂ, ರಾಜರ ವಂಶಾವಳಿಯ ಪ್ರಪಂಚವೂ ಕೀರ್ತಿಸಲ್ಪಟ್ಟಿವೆ. ಹಾಗು ಶ್ರೀಮನ್ನಾರಾಯಣನು ಸ್ವಸಂಕಲ್ಪದಿಂದ ವಸುದೇವನ ಪುತ್ರನಾಗಿ ಅವತರಿಸುವುದು ವರ್ಣಿಸಲ್ಪಟ್ಟಿದೆ.

ದರ್ಶನಂ ಚೋಪಮನ್ಯೋರ್ವೈ ತಪಶ್ಚರಣಮೇವ ಚ ।
ವರಲಾಭೋ ಮಹಾದೇವಂ ದೃಷ್ಟ್ವಾ ಸಾಂಬಂ ತ್ರಿಲೋಚನಮ್ ॥

ಕೈಲಾಸಗಮನಂ ಚಾಥ ನಿವಾಸಸ್ತಸ್ಯ ಶಾರ್ಙ್ಗಿಣಃ ।
ತತಶ್ಚ ಕಥ್ಯತೇ ಭೀತಿರ್ದ್ವಾರವತ್ಯಾಂ ನಿವಾಸಿನಾಮ್ ॥ ೧೦೦ ॥

ರಕ್ಷಣಂ ಗರುಡೇನಾಥ ಜಿತ್ವಾ ಶತ್ರೂನ್ ಮಹಾಬಲಾನ್ ।
ನಾರದಾಗಮನಂ ಚೈವ ಯಾತ್ರಾ ಚೈವ ಗರುತ್ಮತಃ ॥ ೧೦೧ ॥

ತತಶ್ಚ ಕೃಷ್ಣಾಗಮನಂ ಮುನೀನಾಮಾಶ್ರಮಸ್ತತಃ ।
ನೈತ್ಯಕಂ ವಾಸುದೇವಸ್ಯ ಶಿವಲಿಂಗಾರ್ಚನಂ ತಥಾ ॥ ೧೦೨ ॥

---

೯೯. ಶ್ರೀಕೃಷ್ಣನಿಗೆ ಉಪಮನ್ಯು ಎಂಬ ಮುನಿಯ ಸಂದರ್ಶನಲಾಭ, ಮುನಿಯ ಉಪದೇಶದಂತೆ ಶ್ರೀಕೃಷ್ಣನು ತಪಸ್ಸನ್ನು ಮಾಡಿದುದು, ಮೂರುಲೋಚನಗಳುಳ್ಳವನೂ, ಪಾರ್ವತೀರಮಣನೂ ಆದ ಮಹಾದೇವನ ಸಾಕ್ಷಾತ್ಕಾರ ಮತ್ತು ವರ ಪ್ರಾಪ್ತಿಗಳು ವರ್ಣಿಸಲ್ಪಟ್ಟಿರುತ್ತವೆ.

೧೦೦. ಶಾರ್ಙ್ಗಾಯುಧವನ್ನು ಧರಿಸಿದ ವಿಷ್ಣುವು ಶಿವಾಲಯುವಾದ ಕೈಲಾಸಾದ್ರಿಗೆ ಹೋಗಿ ಅಲ್ಲಿ ವಾಸಮಾಡಿರುವುದೂ ಆಗ ದ್ವಾರಕಾನಗರದಲ್ಲಿ ಕೃಷ್ಣನ ವಿಯೋಗದಿಂದ ಅಲ್ಲಿರುವ ಜನಗಳಿಗೆ ಉಂಟಾದ ಭೀತಿಯೂ ವರ್ಣಿಸಲ್ಪಟ್ಟಿವೆ.

೧೦೧. ಆ ಸಮಯದಲ್ಲಿ ಗರುಡನು ಮಹಾಬಲಿಷ್ಠರಾದ ಶತ್ರುಗಳನ್ನು ನಿಗ್ರಹಿಸಿ ದ್ವಾರಕಾನಗರವನ್ನು ರಕ್ಷಣೆಮಾಡಿರುವುದು, ಗರುಡನು ಶ್ರೀಕೃಷ್ಣನ ಅನ್ವೇಷಣಕ್ಕೆ ಹೊರಟಿರುವುದು, ಮಧ್ಯದಲ್ಲಿ ನಾರದಮುನಿಯ ಆಗಮನಗಳು ವರ್ಣಿಸಲ್ಪಟ್ಟಿವೆ.

೧೦೨. ಅನಂತರದಲ್ಲಿ ಶ್ರೀಕೃಷ್ಣನು ದ್ವಾರಕಾನಗರಕ್ಕೆ ಬಂದಿರುವುದು, ಮುನಿಜನರ ಆಶ್ರಮವಾಸ ಮತ್ತು ಶ್ರೀಕೃಷ್ಣನು ಪ್ರತಿದಿನದಲ್ಲಿ ಮಾಡಿದ ಶಿವಲಿಂಗಾರ್ಚನೆಗಳು ವರ್ಣಿಸಲ್ಪಟ್ಟಿವೆ.

ಮಾರ್ಕಂಡೇಯಸ್ಯ ಚ ಮುನೇಃ ಪ್ರಶ್ನಃ ಪ್ರೋಕ್ತಸ್ತತಃ ಪರಮ್ ।
ಲಿಂಗಾರ್ಚನನಿಮಿತ್ತಂ ಚ ಲಿಂಗಸ್ಯಾಪಿ ಸಲಿಂಗಿನಃ ॥ ೧೦೩ ॥

ಯಾಥಾತ್ಮ್ಯಕಥನಂ ಚಾಥ ಲಿಂಗಾದ್ವೈ ಭೀತಿರೇವ ಚ ।
ಬ್ರಹ್ಮವಿಷ್ಣ್ವೋಸ್ತಥಾ ಮಧ್ಯೇ ಕೀರ್ತಿತಾ ಮುನಿಪುಂಗವಾಃ ॥ ೧೦೪ ॥

ಮೋಹಸ್ತಯೋರ್ವೈ ಕಥಿತೋ ಗಮನಂ ಚೋರ್ಧ್ವತೋ ಹ್ಯಧಃ ।
ಸಂಸ್ತವೋ ದೇವದೇವಸ್ಯ ಪ್ರಸಾದಃ ಪರಮೇಷ್ಠಿನಃ ॥ ೧೦೫ ॥

ಅಂತರ್ಧಾನಂ ಚ ಲಿಂಗಸ್ಯ ಸಾಂಬೋತ್ಪತ್ತಿಸ್ತತಃ ಪರಮ್ ।
ಕೀರ್ತಿತಾ ಚಾನಿರುದ್ಧಸ್ಯ ಸಮುತ್ಪತ್ತಿರ್ದ್ವಿಜೋತ್ತಮಾಃ ॥ ೧೦೬ ॥

---

೧೦೩. ತರುವಾಯ ಲಿಂಗದಿಂದ ಕೂಡಿದ ಪರಮಾತ್ಮನ ಉದ್ದೇಶದಿಂದ ಲಿಂಗದ ಅರ್ಚನೆಯ ಸಂಪ್ರದಾಯವು ಬಂದಿರಲು ನಿಮಿತ್ತವೇನಿದೆ? ಎಂಬ ವಿಷಯದಲ್ಲಿ ಮಾರ್ಕಂಡೇಯ ಮುನಿಯು ಮಾಡಿರುವ ಪ್ರಶ್ನವು ಹೇಳಲ್ಪಟ್ಟಿವೆ.

೧೦೪. ಮುನಿಪುಂಗವರೆ! ಆಗ ಲಿಂಗದ ಪಾರಮಾರ್ಥಿಕಸ್ವರೂಪವೂ, ಲಿಂಗದರ್ಶನದಿಂದ ಬ್ರಹ್ಮದೇವ-ವಿಷ್ಣುಗಳಿಗೆ ಉಂಟಾದ ಭಯಪ್ರಾಪ್ತಿಯೂ ಲಿಂಗದ ಮಾಹಾತ್ಮ್ಯವನ್ನು ವರ್ಣಿಸುವ ಸಂದರ್ಭದಲ್ಲಿ ಕೀರ್ತಿಸಲ್ಪಟ್ಟಿವೆ.

೧೦೫. ಬ್ರಹ್ಮ-ವಿಷ್ಣುಗಳಿಗೆ ಲಿಂಗದ ಮಾಹಾತ್ಮ್ಯ ವಿಷಯದಲ್ಲಿ ಅಜ್ಞಾನ ವುಂಟಾಗಿ ಒಬ್ಬನು ಮೇಲಕ್ಕೂ ಮತ್ತೊಬ್ಬನು ಕೆಳಕ್ಕೂ ಹೋಮದು. ಆದಿ-ಅಂತ ಗಳು ಸಿಕ್ಕದಿರಲು ಪರಮಪದದಲ್ಲಿರುವವನೂ ದೇವೋತ್ತಮನೂ ಆದ ಮಹೇಶ್ವರನ ಸ್ತೋತ್ರ-ಅನುಗ್ರಹಗಳು ವರ್ಣಿಸಲ್ಪಟ್ಟಿವೆ.

೧೦೬. ದ್ವಿಜೋತ್ತಮರೆ! ಆಗ ಲಿಂಗವು ಅಂತರ್ಧಾನಹೊಂದಿರುವುದೂ ಸಾಂಬನ ಉತ್ಪತ್ತಿಯೂ, ಅನಿರುದ್ಧನ ಜನನವೂ ಮುಂದೆ ಕ್ರಮವಾಗಿ ವರ್ಣಿಸ ಲ್ಪಟ್ಟಿರುತ್ತವೆ.

ಕೃಷ್ಣಸ್ಯ ಗಮನೇ ಬುದ್ಧಿರ್ಋಷೀಣಾಮಾಗತಿಸ್ತಥಾ ।
ಅನುಶಾಸನಂ ಚ ಕೃಷ್ಣೇನ ವರದಾನಂ ಮಹಾತ್ಮನಃ ॥ ೧೦೭ ॥

ಗಮನಂ ಚೈವ ಕೃಷ್ಣಸ್ಯ ಪಾರ್ಥಸ್ಯಾಪ್ಯಥ ದರ್ಶನಮ್ ।
ಕೃಷ್ಣದ್ವೈಪಾಯನಸ್ಯೋಕ್ತಂ ಯುಗಧರ್ಮಾಃ ಸನಾತನಾಃ ॥ ೧೦೮ ॥

ಅನುಗ್ರಹೋಽಥ ಪಾರ್ಥಸ್ಯ ವಾರಾಣಸ್ಯಾಂ ಗತಿಸ್ತತಃ ।
ಪಾರಾಶರ್ಯಸ್ಯ ಚ ಮುನೇರ್ವ್ಯಾಸಸ್ಯಾದ್ಭುತಕರ್ಮಣಃ ॥ ೧೦೯ ॥

ವಾರಾಣಸ್ಯಾಶ್ಚ ಮಾಹಾತ್ಮ್ಯಂ ತೀರ್ಥಾನಾಂ ಚೈವ ವರ್ಣನಮ್ ।
ವ್ಯಾಸಸ್ಯ ತೀರ್ಥಯಾತ್ರಾ ಚ ದೇವ್ಯಾಶ್ಚೈವಾಥ ದರ್ಶನಮ್ ॥ ೧೧೦ ॥

---

೧೦೭. ಕೃಷ್ಣನಿಗೆ ತನ್ನ ಅವತಾರವನ್ನು ಸಮಾಪ್ತಿಗೊಳಿಸುವ ಸಂಕಲ್ಪ, ಮುನಿಜನರು ಬಂದು ಸೇರುವುದು ಮತ್ತು ಮಹಾತ್ಮನಾದ ಶ್ರೀಕೃಷ್ಣನ ಅನುಶಾಸನ ಮತ್ತು ವರದಾನಗಳು ವರ್ಣಿಸಲ್ಪಟ್ಟಿವೆ.

೧೦೮. ಕೃಷ್ಣನ ಗಮನ, ಕುಂತೀಪುತ್ರನಾದ ಯುಧಿಷ್ಠಿರನಿಗೆ ವ್ಯಾಸಮುನಿಯ ದರ್ಶನ, ಆ ಸಮಯದಲ್ಲಿ ಕೃಷ್ಣದ್ವೈಪಾಯನಮುನಿಯು ಅನಾದಿಯಾದ ಯುಗ ಧರ್ಮಗಳನ್ನು ಉಪದೇಶಿಸಿದುದು–ವರ್ಣಿಸಲ್ಪಟ್ಟಿವೆ.

೧೦೯. ಯುಧಿಷ್ಠಿರರಾಜನನ್ನು ಅನುಗ್ರಹಿಸಿದುದು, ವಾರಣಾಸೀಕ್ಷೇತ್ರಕ್ಕೆ ಹೋದುದು, ಮುಂದೆ ಅದ್ಭುತವಾದ ವ್ಯಾಪಾರಗಳನ್ನು ನಡೆಸಿದ ಪರಾಶರ ಪುತ್ರನಾದ ವ್ಯಾಸಮುನಿಯಿಂದ ತೀರ್ಥಮಾಹಾತ್ಮ್ಯ ಪ್ರಶಂಸೆಗಳು ವರ್ಣಿಸಲ್ಪಟ್ಟಿವೆ.

೧೧೦. ತೀರ್ಥಮಾಹಾತ್ಮ್ಯ ಕೀರ್ತನ ಸಂದರ್ಭದಲ್ಲಿ ವಾರಾಣಸೀಕ್ಷೇತ್ರ ಮಾಹಾತ್ಮ್ಯವೂ ಅಲ್ಲಿರುವ ಅನೇಕ ತೀರ್ಥಗಳ ಮಹಿಮೆಯೂ, ವ್ಯಾಸಮುನಿಯ ತೀರ್ಥಯಾತ್ರೆಯೂ ಮತ್ತು ದೇವಿಯ ದರ್ಶನಲಾಭವೂ ವರ್ಣಿಸಲ್ಪಟ್ಟಿವೆ.

ಉದ್ವಾಸನಂ ಚ ಕಥಿತಂ ವರದಾನಂ ತಥೈವ ಚ ।
ಪ್ರಯಾಗಸ್ಯ ಚ ಮಾಹಾತ್ಮ್ಯಂ ಕ್ಷೇತ್ರಾಣಾಮಥ ಕೀರ್ತನಮ್ ॥೧೧೧॥

ಫಲಂ ಚ ವಿಪುಲಂ ವಿಪ್ರಾ ಮಾರ್ಕಂಡೇಯಸ್ಯ ನಿರ್ಗಮಃ ।
ಭುವನಾನಾಂ ಸ್ವರೂಪಂ ಚ ಜ್ಯೋತಿಷಾಂ ಚ ನಿವೇಶನಮ್ ॥ ೧೧೨ ॥

ಕೀರ್ತಿತಶ್ಚಾಪಿ ವರ್ಷಾಣಾಂ ನದೀನಾಂ ಚೈವ ನಿರ್ಣಯಃ ।
ಪರ್ವತಾನಾಂ ಚ ಕಥನಂ ಸ್ಥಾನಾನಿ ಚ ದಿವೌಕಸಾಮ್ ॥ ೧೧೩ ॥

ದ್ವೀಪಾನಾಂ ಪ್ರವಿಭಾಗಶ್ಚ ಶ್ವೇತದ್ವಿಪೋಪವರ್ಣನಮ್ ।
ಶಯನಂ ಕೇಶವಸ್ಯಾಥ ಮಾಹಾತ್ಮ್ಯಂ ಚ ಮಹಾತ್ಮನಃ ॥ ೧೧೪ ॥

---

೧೧೧. ದೇವಿಯಿಂದ ವ್ಯಾಸಮುನಿಗೆ ವರದಾನವೂ, ವಾರಾಣಸೀಕ್ಷೇತ್ರದಿಂದ ನಿರ್ಗಮನವೂ, ಪ್ರಯಾಗ ತೀರ್ಥದ ಮಹಿಮೆಯೂ ಮತ್ತು ಅನೇಕ ಕ್ಷೇತ್ರಗಳ ಮಾಹಾತ್ಮ್ಯವೂ ಕೀರ್ತಿಸಲಟ್ಟಿರುವುವು.

೧೧೨ ಪುಣ್ಯಕ್ಷೇತ್ರಾಟನಗಳಿಂದ ಉಂಟಾಗುವ ಮಹತ್ತಾದ ಫಲಗಳೂ, ಮಾರ್ಕಂಡೇಯ ಮಹಾಮುನಿಯ ನಿರ್ಗಮನವೂ, ಅನೇಕ ಭುವನಗಳ ಸ್ವರೂಪವೂ ಮತ್ತು ಜ್ಯೋತಿರ್ಮಂಡಲಗಳ ಸನ್ನಿವೇಶವೂ ವರ್ಣಿಸಲ್ಪಟ್ಟಿವೆ.

೧೧೩. ಹಾಗು ಭೂಮಂಡಲದಲ್ಲಿ ಸೇರಿರುವ ಅನೇಕ ವರ್ಷ ಖಂಡಗಳ ಪರಿಮಾಣವೂ ನದಿಗಳ ಸ್ಥಾನಗಳೂ ಪರ್ವತಶ್ರೇಣಿಗಳ ಸನ್ನಿವೇಶವೂ ಮತ್ತು ದೇವತೆಗಳು ವಾಸಮಾಡುವ ಪವಿತ್ರ ಸ್ಥಾನಗಳೂ ಕೀರ್ತಿಸಲ್ಪಟ್ಟಿವೆ.

೧೧೪. ಮತ್ತು ದ್ವೀಪಗಳ ವಿಭಾಗ-ತಾರತಮ್ಯಗಳೂ, ಶ್ವೇತದ್ವೀಪವೆಂಬ ಮುಖ್ಯ ಸ್ಥಾನಸ್ವರೂಪವೂ, ವಿಷ್ಣುಪರಮಾತ್ಮನ ಶಯನಾವಸ್ಥೆಯೂ ಮತ್ತು ಮಹಾತ್ಮನಾದ ಶ್ರೀಮನ್ನಾರಾಯಣನ ಮಾಹಾತ್ಮ್ಯವೂ ವರ್ಣಿಸಲ್ಪಟ್ಟಿವೆ.

ಮನ್ವಂತರಾಣಾಂ ಕಥನಂ ವಿಷ್ಣೋರ್ಮಾಹಾತ್ಮ್ಯಮೇವ ಚ ।
ವೇದಶಾಖಾಪ್ರಣಯನಂ ವ್ಯಾಸಾನಾಂ ಕಥನಂ ತತಃ ॥ ೧೧೫ ॥

ಅವೇದಸ್ಯ ಚ ವೇದಸ್ಯ ಕಥಿತಂ ಮುನಿಪುಂಗವಾಃ ।
ಯೋಗೇಶ್ವರಾಣಾಂ ಚ ತಥಾ ಶಿಷ್ಯಾಣಾಂ ಚಾಥ ಕೀರ್ತನಮ್ ॥ ೧೧೬ ॥

ಗೀತಾಶ್ಚ ವಿವಿಧಾ ಗುಹ್ಯಾ ಈಶ್ವರಸ್ಯಾಥ ಕೀರ್ತಿತಾಃ ।
ವರ್ಣಾಶ್ರಮಾಣಾಮಾಚಾರಾಃ ಪ್ರಾಯಶ್ಚಿತ್ತವಿಧಿಸ್ತತಃ ॥ ೧೧೭ ॥

ಕಪಾಲಿತ್ವಂ ಚ ರುದ್ರಸ್ಯ ಭಿಕ್ಷಾಚರಣಮೇವ ಚ ।
ಪತಿವ್ರತಾನಾಮಾಖ್ಯಾನಂ ತೀರ್ಥಾನಾಂ ಚ ವಿನಿರ್ಣಯಃ ॥ ೧೧೮ ॥

---

೧೧೫. ಪರ್ಯಾಯದಿಂದ ನಡೆಯುವ ಮನ್ವಂತರಗಳ ಪ್ರಶಂಸೆಯೂ, ವಿಷ್ಣುಪರಮಾತ್ಮನ ಮಾಹಾತ್ಮ್ಯವೂ, ವೇದಗಳ ಅನೇಕ ಶಾಖಾರಚನೆಯೂ ಮತ್ತು ವೇದಗಳನ್ನು ವಿಭಾಗ ಮಾಡುವ ಅಧಿಕಾರವನ್ನು ಹೊಂದಿದ ಅನೇಕ ವ್ಯಾಸಮುನಿಗಳ ಸ್ವರೂಪವೂ ಕೀರ್ತಿಸಲ್ಪಟ್ಟಿದೆ.

೧೧೬. ಮುನಿಪುಂಗವರೆ! ವೇದವಲ್ಲದ ಹಾಗು ವೇದಾಂಗಗಳಾದ ಗ್ರಂಥಗಳ ಮತ್ತು ವೇದರೂಪವಾದ ಗ್ರಂಥಗಳ ವಿಭಾಗವೂ, ಯೋಗೀಶ್ವರರ ಕಥೆಯೂ ಮತ್ತು ವೇದಶಾಖೆಗಳನ್ನು ಅಧ್ಯಯನಮಾಡಿ ಪ್ರಚಾರಕ್ಕೆ ತಂದ ಶಿಷ್ಯಜನರ ಪಂಗಡವೂ ಹೇಳಲ್ಪಟ್ಟಿವೆ.

೧೧೭. ಮತ್ತು ಈಶ್ವರನಿಂದ ಉಪದೇಶಿಸಲ್ಪಟ್ಟಿರುವ ನಾನಾ ವಿಧವಾದ ಮತ್ತು ರಹಸ್ಯವಾದ ಗೀತೋಪನಿಷತ್ತುಗಳೂ, ವರ್ಣ-ಆಶ್ರಮಗಳಿಗೆ ವಿಧಿಸಲ್ಪಟ್ಟ ಆಚಾರಧರ್ಮಗಳೂ ಮತ್ತು ಪ್ರಾಯಶ್ಚಿತ್ತ ವಿಧಾನವೂ ಕೀರ್ತಿಸಲ್ಪಟ್ಟಿವೆ.

೧೧೮. ಮಹೇಶ್ವರನು ಕಪಾಲವನ್ನು ಧಾರಣಮಾಡಿದ ಪ್ರಸಂಗವೂ, ಆ ಕಪಾಲದಲ್ಲಿ ಭಿಕ್ಷೆಯನ್ನು ಬೇಡುವ ನಿಮಿತ್ತವೂ, ಪತಿವ್ರತಾನಾರಿಯರ ಆಖ್ಯಾನವೂ ಮತ್ತು ಅನೇಕ ತೀರ್ಥಗಳ ವ್ಯವಸ್ಥೆಯೂ ಹೇಳಲ್ಪಟ್ಟಿವೆ.

ತಥಾ ಮಂಕಣಕಸ್ಯಾಪಿ ನಿಗ್ರಹಃ ಕೀರ್ತಿತೋ ದ್ವಿಜಾಃ ।
ವಧಶ್ಚ ಕಥಿತೋ ವಿಪ್ರಾಃ ಕಾಲಸ್ಯ ಚ ಸಮಾಸತಃ ॥ ೧೧೯ ॥

ದೇವದಾರುವನೇ ಶಂಭೋಃ ಪ್ರವೇಶೋ ಮಾಧವಸ್ಯ ಚ ।
ದರ್ಶನಂ ಷಟ್ಕುಲೀಯಾನಾಂ ದೇವದೇವಸ್ಯ ಧೀಮತಃ ॥ ೧೨೦ ॥

ವರದಾನಂ ಚ ದೇವಸ್ಯ ನಂದನೇ ತು ಪ್ರಕೀರ್ತಿತಮ್ ॥ ೧೨೧ ॥

ನೈಮಿತ್ತಿಕಶ್ಚ ಕಥಿತಃ ಪ್ರತಿಸರ್ಗಸ್ತತಃ ಪರಮ್ ।
ಪ್ರಾಕೃತಃ ಪ್ರಲಯಶ್ಚೋರ್ಧ್ವಂ ಸಬೀಜೋ ಯೋಗ ಏವ ಚ ॥ ೧೨೨ ॥

---

೧೧೯. ದ್ವಿಜೋತ್ತಮರೆ! ಹಾಗೆಯೆ ಮಂಕಣಕನೆಂಬ ದ್ವಿಜನ ನಿಗ್ರಹವೂ ವರ್ಣಿಸಲ್ಪಟ್ಟಿದೆ. ಮತ್ತು ಮುನಿಪುಂಗವರೆ! ಸರ್ವಸಂಹಾರಕನಾದ ಕಾಲಾತ್ಮನಿಗೆ ಮಹೇಶ್ವರನಿಂದ ಸಂಭವಿಸಿದ ವಧವು ನಿರೂಪಿಸಲ್ಪಟ್ಟಿರುವುದು.

೧೨೦. ಹಾಗು ದೇವದಾರುವನದಲ್ಲಿ ಶಂಕರ ಮತ್ತು ವಿಷ್ಣುವಿನ ಪ್ರವೇಶವೂ ಹಾಗು ಆರು ಸಂಖ್ಯೆಯಿಂದ ಪ್ರಸಿದ್ಧವಾದ ಮಹರ್ಷಿಗಳ ವಂಶದಲ್ಲಿ ಜನಿಸಿದ ಮುನಿಜನರಿಗೆ ಸರ್ವಜ್ಞನೂ ದೇವೋತ್ತಮನೂ ಆದ ಪರಮೇಶ್ವರನ ದರ್ಶನವೂ ವರ್ಣಿಸಲ್ಪಟ್ಟವೆ.

೧೨೧. ತನ್ನ ಪುತ್ರನಂತೆ ಜನಿಸಿರುವ ನಂದೀಶ್ವರನು ಪ್ರಾರ್ಥಿಸಿದಂತೆ ಅನೇಕ ದಿವ್ಯವರಗಳನ್ನು ಅವನಿಗೆ ದೇವೋತ್ತಮನಾದ ಶಂಕರನು ಅನುಗ್ರಹಿಸಿರುವುದು ಕೀರ್ತಿಸಲ್ಪಟ್ಟಿದೆ.

೧೨೨. ತರುವಾಯ ನೈಮಿತ್ತಿಕವೆಂಬ ಪ್ರಲಯವು ಹೇಳಲ್ಪಟ್ಟಿರುವುದು. ಹಾಗು ಪ್ರಾಕೃತವೆಂಬ ಮತ್ತೊಂದು ಬಗೆಯ ಪ್ರಲಯಾವಸ್ಥೆಯೂ, ಸಬೀಜವೆಂಬ ಯೋಗಸಮಾಧಿವಿಧಿಯೂ ಕೀರ್ತಿಸಲ್ಪಟ್ಟವೆ.

ಏತಂ ಜ್ಞಾತ್ವಾ ಪುರಾಣಸ್ಯ ಸಂಕ್ಷೇಪಂ ಕೀರ್ತಯೇತ್ತು ಯಃ ।
ಸರ್ವಪಾಪವಿನಿರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ॥ ೧೨೩ ॥

ಏವಮುಕ್ತ್ವಾ ಶ್ರಿಯಂ ದೇವೀಮಾದಾಯ ಪುರುಷೋತ್ತಮಃ ।
ಸಂತ್ಯಜ್ಯ ಕೂರ್ಮಸಂಸ್ಥಾನಂ ಪ್ರಜಗಾಮ ಹರಸ್ತದಾ ॥ ೧೨೪ ॥

ದೇವಾಶ್ಚ ಸರ್ವೇ ಮುನಯಃ ಸ್ವಾನಿ ಸ್ಥಾನಾನಿ ಭೇಜಿರೇ ।
ಪ್ರಣಮ್ಯ ಪುರುಷಂ ವಿಷ್ಣುಂ ಗೃಹೀತ್ವಾ ಹ್ಯಮೃತಂ ದ್ವಿಜಾಃ ॥ ೧೨೫ ॥

ಏತತ್ಪುರಾಣಂ ಸಕಲಂ ಭಾಷಿತಂ ಕೂರ್ಮರೂಪಿಣಾ ।
ಸಾಕ್ಷಾದ್ದೇವಾಧಿದೇವೇನ ವಿಷ್ಣುನಾ ವಿಶ್ವಯೋನಿನಾ ॥ ೧೨೬ ॥

---

೧೨೩. ಯಾವ ಮಾನವನು ಈ ಪುರಾಣದಲ್ಲಿ ಪ್ರತಿಪಾದಿಸಿರುವ ವಿಷಯಗಳ ಸಂಗ್ರಹವನ್ನು ಅರಿತು ಕೀರ್ತಿಸುವನೊ; ಅವನು ಸಮಸ್ತ ಪಾತಕಗಳಿಂದ ಬಿಡುಗಡೆಯನ್ನು ಹೊಂದಿ ಬ್ರಹ್ಮಲೋಕದಲ್ಲಿ ಮಾನ್ಯನಾಗುತ್ತಾನೆ.

೧೨೪. ಆಗ ಪುರುಷೋತ್ತಮನಾದ ಶ್ರೀಮನ್ನಾರಾಯಣನು ಈ ರೀತಿಯಾಗಿ ಉಪದೇಶಿಸಿ ಕೂರ್ಮರೂಪವನ್ನು ಬಿಟ್ಟು ಲಕ್ಷ್ಮೀದೇವಿಯನ್ನು ಕರೆದುಕೊಂಡು ತನ್ನ ದಿವ್ಯಧಾಮಕ್ಕೆ ಹೊರಟುಹೋದನು.

೧೨೫. ದ್ವಿಜೋತ್ತಮರೆ! ಈ ಉಪದೇಶವನ್ನು ಸ್ವೀಕರಿಸಿದ ಸಮಸ್ತ ದೇವತೆಗಳೂ ಸಮಸ್ತ ಋಷಿಗಳೂ ಪೂರ್ಣಾಕಾರನಾದ ವಿಷ್ಣುಪರಮಾತ್ಮನನ್ನು ನಮಸ್ಕರಿಸಿ ಉಪದೇಶಾಮೃತವನ್ನು ಸ್ವೀಕರಿಸಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

೧೨೬. ಈ ಮಹಾಪುರಾಣವು ಸಂಪೂರ್ಣವಾಗಿ ದೇವಾಧಿದೇವನೂ ಸರ್ವಪ್ರಪಂಚೋತ್ಪತ್ತಿಗೆ ಕಾರಣನೂ, ವ್ಯಾಪಕನೂ ಆದ ಕೂರ್ಮಾವತಾರ ರೂಪವನ್ನು ಪರಿಗ್ರಹಿಸಿದ ವಿಷ್ಣುವಿನಿಂದ ಸಾಕ್ಷಾತ್ತಾಗಿ ಉಪದೇಶಿಸಲ್ಪಟ್ಟಿದೆ.

ಯಃ ಪಠೇತ್ಸತತಂ ವಿಪ್ರಾ ನಿಯಮೇನ ಸಮಾಸತಃ ।
ಸರ್ವಪಾಪವಿನಿರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ॥ ೧೨೭ ॥

ಲಿಖಿತ್ವಾ ಚೈವ ಯೋ ದದ್ಯಾದ್ವೈಶಾಖೇ ಕಾರ್ತಿಕೇಽಪಿ ವಾ ।
ವಿಪ್ರಾಯ ವೇದವಿದುಷೇ ತಸ್ಯ ಪುಣ್ಯಂ ನಿಬೋಧತ ॥ ೧೨೮ ॥

ಸರ್ವಪಾಪವಿನಿರ್ಮುಕ್ತಃ ಸರ್ವೈಶ್ವರ್ಯಸಮನ್ವಿತಃ ।
ಭುಕ್ತ್ವಾ ತು ವಿಪುಲಾನ್ ಮರ್ತ್ಯೋ ಭೋಗಾನ್ ದಿವ್ಯಾನ್ ಸುಶೋಭನಾನ್ ॥ ೧೨೯ ॥

ತತಃ ಸ್ವರ್ಗಾತ್ ಪರಿಭ್ರಷ್ಟೋ ವಿಪ್ರಾಣಾಂ ಜಾಯತೇ ಕುಲೇ ।
ಪೂರ್ವಸಂಸ್ಕಾರಮಾಹಾತ್ಮ್ಯಾದ್ಬ್ರಹ್ಮವಿದ್ಯಾಮವಾಪ್ನುಯಾತ್ ॥

---

೧೨೭. ವಿಪ್ರರೆ! ಈ ಪುರಾಣವನ್ನು ಯಾವ ಮಾನವನು ಸಂಗ್ರಹವಾಗಿಯೂ ಸಂತತವಾಗಿಯೂ ನಿಯಮಪೂರ್ವಕವಾಗಿ ಪಠಿಸುವನೊ; ಅವನು ಸಮಸ್ತ ಪಾಪಬಂಧದಿಂದ ಮುಕ್ತನಾಗಿ ಬ್ರಹ್ಮಲೋಕದಲ್ಲಿ ಪೂಜಿಸಲ್ಪಡುತ್ತಾನೆ.

೧೨೮. ಅಥವಾ ಯಾವ ಮಾನವನು ಈ ಸಮಗ್ರಪುರಾಣವನ್ನು ಬರೆದು ವೈಶಾಖ-ಕಾರ್ತೀಕ ಮಾಸಗಳಲ್ಲಿ ವೇದಾಭ್ಯಾಸಮಾಡಿದ ವಿಪ್ರನಿಗೆ ಲಿಖಿತ ಪುಸ್ತಕವನ್ನು ದಾನಮಾಡುವನೊ; ಅವನಿಗೆ ಉಂಟಾಗುವ ಪುಣ್ಯರಾಶಿಯನ್ನು ಕೇಳಿರಿ.

೧೨೯. ಅಂತಹ ಮಾನವನು ಪುಣ್ಯಪ್ರಭಾವದಿಂದ ಸರ್ವ ಪಾಪಗಳಿಂದ ವಿಮುಕ್ತನೂ ಸರ್ವ ಐಶ್ವರ್ಯಗಳಿಂದ ಕೂಡಿದವನೂ ಆಗಿ ಮಂಗಳಕರವೂ ದಿವ್ಯವೂ ಮತ್ತು ಅನೇಕವೂ ಆದ ಅನಂತ ಭೋಗಗಳನ್ನು ಭುಂಜಿಸುವನು.

೧೩೦. ಹಾಗೆ ದಿವ್ಯಭೋಗಾನುಭವಾನಂತರದಲ್ಲಿ ಸ್ವರ್ಗಲೋಕದಿಂದ ಭ್ರಷ್ಟನಾಗಿ ದ್ವಿಜೋತ್ತಮನ ವಂಶದಲ್ಲಿ ಜನಿಸಿ ಪೂರ್ವಜನ್ಮದ ವಾಸನಾಪ್ರಾಬಲ್ಯದಿಂದ ಮತ್ತೆ ಅಭ್ಯಾಸಮಾಡಿ ಬ್ರಹ್ಮಜ್ಞಾನವನ್ನು ಹೊಂದುವನು.

ಪಠಿತ್ವಾಧ್ಯಾಯಮೇವೈಕಂ ಸರ್ವಪಾಪೈಃ ಪ್ರಮುಚ್ಯತೇ ।
ಯೋಽರ್ಥಂ ವಿಚಾರಯೇತ್ ಸಮ್ಯಕ್ ಪ್ರಾಪ್ನೋತಿ ಪರಮಂ
ಪದಮ್ ॥ ೧೩೧ ॥

ಅಧ್ಯೇತವ್ಯಮಿದಂ ಪುಣ್ಯಂ ವಿಪ್ರೈಃ ಪರ್ವಣಿ ಪರ್ವಣಿ ।
ಶ್ರೋತವ್ಯಂ ಚ ದ್ವಿಜಶ್ರೇಷ್ಠಾ ಮಹಾಪಾತಕನಾಶನಮ್ ॥ ೧೩೨ ॥

ಏಕತಸ್ತು ಪುರಾಣಾನಿ ಸೇತಿಹಾಸಾನಿ ಕೃತ್ಸ್ನಶಃ ।
ಏಕತ್ರ ಪರಮಂ ವೇದಮೇತದೇವಾತಿರಿಚ್ಯತೇ ॥ ೧೩೩ ॥

ಇದಂ ಪುರಾಣಂ ಮುಕ್ತ್ವೈಕಂ ನಾನ್ಯತ್ ಸಾಧನಕಂ ಪರಮ್ ॥೧೩೪॥

---

೧೩೧. ಕಡೆಯದಾದ ಈ ಒಂದು ಅಧ್ಯಾಯವನ್ನು ಪಠನ ಮಾಡಿದ್ದರಿಂದ ಸಮಸ್ತ ಪಾತಕಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ. ಯಾವ ನರನು ಈ ಪುರಾಣಾರ್ಥಗಳನ್ನು ವಿಮರ್ಶಿಸುವನೋ; ಅವನು ಸರ್ವೋತ್ತಮವಾದ ಪದವಿಯನ್ನು ಹೊಂದುತ್ತಾನೆ.

೧೩೨. ದ್ವಿಜಶ್ರೇಷ್ಠರೆ ! ಮಹಾಪಾತಕಗಳನ್ನು ನಾಶಮಾಡುವುದೂ ಪುಣ್ಯ ಸಂಪಾದಕವೂ ಆದ ಈ ಮಹಾಪುರಾಣವು ವಿಪ್ರರಿಂದ ಪ್ರತಿಯೊಂದು ಪರ್ವ ತಿಥಿ ಸಮಯದಲ್ಲಿ ಪಠನ ಮತ್ತು ಶ್ರವಣಮಾಡಲ್ಪಡಬೇಕು.

೧೩೩. ಅನೇಕ ಇತಿಹಾಸಗಳಿಂದ ಕೂಡಿದ ಸಂಪೂರ್ಣ ಇತರ ಪುರಾಣಗಳನ್ನೂ ಒಂದು ಕಡೆಯಲ್ಲಿ ಇಟ್ಟು ಮತ್ತೊಂದು ಕಡೆಯಲ್ಲಿ ಈ ಪವಿತ್ರಪುರಾಣವನ್ನೂ ಇಟ್ಟು ತೂಗಿದರೆ ಈ ಪುರಾಣವು ಹೆಚ್ಚಿನ ಸಾರವುಳ್ಳದ್ದಾಗಿ ಭಾಸವಾಗುವುದು.

೧೩೪. ಪರಮ ಪುರುಷಾರ್ಥಗಳನ್ನು ಹೊಂದಲು ಪವಿತ್ರವಾದ ಈ ಮಹಾ ಮಹಾಪುರಾಣದ ಪಠನವನ್ನು ಬಿಟ್ಟರೆ ಮತ್ತೊಂದು ಉತ್ತಮ ಸಾಧನವು ಇರುವುದಿಲ್ಲ.

**ಯಥಾವದತ್ರ ಭಗವಾನ್ ದೇವೋ ನಾರಾಯಣೋ ಹರಿಃ ।**
**ಕೀರ್ತ್ಯತೇ ಹಿ ಯಥಾ ವಿಷ್ಣುರ್ನ ತಥಾನ್ಯೇಷು ಸುವ್ರತಾಃ ॥ ೧೩೫ ॥**

**ಬ್ರಾಹ್ಮೀ ಪೌರಾಣಿಕೀ ಚೇಯಂ ಸಂಹಿತಾ ಪಾಪನಾಶನೀ ।**
**ಅತ್ರ ತತ್ಪರಮಂ ಬ್ರಹ್ಮ ಕೀರ್ತ್ಯತೇ ಹಿ ಯಥಾರ್ಥತಃ ॥ ೧೩೬ ॥**

**ತೀರ್ಥಾನಾಂ ಪರಮಂ ತೀರ್ಥಂ ತಪಸಾಂ ಚ ಪರಂ ತಪಃ ।**
**ಜ್ಞಾನಾನಾಂ ಪರಮಂ ಜ್ಞಾನಂ ವ್ರತಾನಾಂ ಪರಮಂ ವ್ರತಮ್॥ ೧೩೭॥**

**ನಾಧ್ಯೇತವ್ಯಮಿದಂ ಶಾಸ್ತ್ರಂ ವೃಷಲಸ್ಯ ಚ ಸನ್ನಿಧೌ ।**
**ಯೋಽಧೀತೇ ಚೈವ ಮೋಹಾತ್ಮಾ ಸ ಯಾತಿ ನರಕಾನ್ ಬಹೂನ್ ॥**

---

೧೩೫. ಮಹಾ ನಿಯಮವಂತರಾದ ಮುನಿಗಳೆ! ಈ ಮಹಾಪುರಾಣದಲ್ಲಿ ಷಡ್ಗುಣೈಶ್ವರ್ಯ ಸಂಪನ್ನನೂ, ಅಜ್ಞಾನ ನಿವಾರಕನೂ, ಸಕಲ ಪಾಪಭಂಜಕನೂ ಮತ್ತು ಸರ್ವವ್ಯಾಪಕನೂ ಆದ ವಿಷ್ಣುಪರಮಾತ್ಮನು ಹೇಗೆ ಪಾರಮಾರ್ಥಿಕರೂಪದಿಂದ ವರ್ಣಿಸಲ್ಪಟ್ಟಿರುವನೋ; ಹಾಗೆ ಬೇರೊಂದು ಕಡೆಗಳಲ್ಲಿ ವರ್ಣಿಸಲ್ಪಡಲಿಲ್ಲ.

೧೩೬. ಈ ಪುರಾಣ ಸಂಹಿತೆಯು ಪರಬ್ರಹ್ಮವಸ್ತುವನ್ನು ಬೋಧಿಸುವುದೂ ಸಕಲ ಪಾಪಗಳನ್ನು ನಾಶಗೊಳಿಸುವುದೂ ಆಗಿದೆ. ಈ ಸಂಹಿತೆಯಲ್ಲಿ ಪರಬ್ರಹ್ಮವಸ್ತುವಿನ ತತ್ತ್ವರೂಪವು ಪ್ರಶಂಸಿಸಲ್ಪಟ್ಟಿದೆ.

೧೩೭. ಇಲ್ಲಿ ವರ್ಣಿಸಲ್ಪಡುವ ಪರಬ್ರಹ್ಮವಸ್ತುವು ಸಮಸ್ತ ತೀರ್ಥಗಳಲ್ಲಿ ಉತ್ತಮ ತೀರ್ಥವೂ, ತಪಸ್ಸುಗಳಲ್ಲಿ ಉತ್ಕೃಷ್ಟತಪಸ್ಸೂ, ಜ್ಞಾನಗಳಲ್ಲಿ ಪರಮಜ್ಞಾನವೂ ಮತ್ತು ವ್ರತಗಳಲ್ಲಿ ಸರ್ವೋತ್ತಮವ್ರತವೂ ಆಗಿದೆ.

೧೩೮. ಹಿತೋಪದೇಶಕವಾದ ಈ ಪುರಾಣವನ್ನು ವೃಷಲನ ಸನ್ನಿಧಿಯಲ್ಲಿ ಪಠನಮಾಡಕೂಡದು. ಯಾವ ಮಾನವನು ಮೋಹಪರವಶನಾಗಿ ವೃಷಲನ ಸನ್ನಿಧಿಯಲ್ಲಿ ಪಠಿಸುವನೋ; ಅವನು ಅನೇಕ ನರಕಯಾತನೆಗಳನ್ನು ಅನುಭವಿಸುತ್ತಾನೆ.

ಶ್ರಾದ್ಧೇ ವಾ ದೈವಿಕೇ ಕಾರ್ಯೇ ಶ್ರಾವ್ಯಂ ಚೇದಂ ದ್ವಿಜಾತಿಭಿಃ ।
ಯಜ್ಞಾಂತೇ ತು ವಿಶೇಷೇಣ ಸರ್ವದೋಷವಿಶೋಧನಮ್ ॥ ೧೩೯ ॥

ಮುಮುಕ್ಷೂಣಾಮಿದಂ ಶಾಸ್ತ್ರಮಧ್ಯೇತವ್ಯಂ ವಿಶೇಷತಃ ।
ಶ್ರೋತವ್ಯಂ ಚಾಥ ಮಂತವ್ಯಂ ವೇದಾರ್ಥಪರಿಬೃಂಹಣಮ್ ॥ ೧೪೦ ॥

ಜ್ಞಾತ್ವಾ ಯಥಾವದ್ವಿಪೇಂದ್ರಾನ್ ಶ್ರಾವಯೇದ್ಭಕ್ತಿಸಂಯುತಾನ್ ।
ಸರ್ವಪಾಪವಿನಿರ್ಮುಕ್ತೋ ಬ್ರಹ್ಮಸಾಯುಜ್ಯಮಾಪ್ನುಯಾತ್ ॥೧೪೧॥

ಯೋಽಶ್ರದ್ದಧಾನೇ ಪುರುಷೇ ದದ್ಯಾಚ್ಚಾಧಾರ್ಮಿಕೇ ತಥಾ ।
ಸಪ್ರೇತ್ಯ ಗತ್ವಾ ನಿರಯಾನ್ ಶುನಾಂ ಯೋನಿಂ ವ್ರಜತ್ಯಧಃ ॥೧೪೨ ॥

---

೧೩೯. ದ್ವಿಜರಿಂದ ಈ ಮಹಾಪುರಾಣವು ಶ್ರಾದ್ಧಕರ್ಮ ಮತ್ತು ದೈವಿಕ ಕಾರ್ಯಗಳ ಸಂದರ್ಭಗಳಲ್ಲಿ ಅವಶ್ಯಕವಾಗಿ ಶ್ರವಣಮಾಡಲ್ಪಡಬೇಕು. ಯಜ್ಞ ಸಮಾರಂಭದಲ್ಲಿ ಇದನ್ನು ಪಠಿಸುವುದರಿಂದ ವಿಶೇಷವಾಗಿ ಸಮಸ್ತ ದೋಷಗಳು ಪರಿಹಾರವಾಗಿ ಪವಿತ್ರತೆಯುಂಟಾಗುತ್ತದೆ.

೧೪೦. ಈ ಶಾಸ್ತ್ರವು ಮೋಕ್ಷವನ್ನು ಆಶಿಸುವ ವಿರಕ್ತಜನರಿಂದ ವಿಶೇಷವಾಗಿ ಅಭ್ಯಾಸಮಾಡಲ್ಪಡಬೇಕು. ಮತ್ತು ವೇದಾರ್ಥಗಳನ್ನು ಪೋಷಿಸಿ ಬೋಧಿಸುವ ಈ ಪುರಾಣದ ಶ್ರವಣ-ಮನನಗಳು ಮಾಡಲ್ಪಡಬೇಕು.

೧೪೧. ಈ ಪುರಾಣಾರ್ಥಗಳನ್ನು ಚೆನ್ನಾಗಿ ತಿಳಿದು ಭಕ್ತಿಯಿಂದ ಕೂಡಿದ ಜನರಿಂದ ಶ್ರವಣಮಾಡಿಸಬೇಕು. ಹಾಗೆ ಶ್ರವಣಮಾಡಿಸಿರುವ ಮಾನವನು ಸರ್ವಪಾಪನಿರ್ಮುಕ್ತನಾಗಿ ಬ್ರಹ್ಮನ ಸಾಯುಜ್ಯ ಮುಕ್ತಿಯನ್ನು ಹೊಂದುವನು.

೧೪೨. ಯಾವ ಮಾನವನು ಶ್ರದ್ಧಾಶೂನ್ಯನೂ, ಅಧಾರ್ಮಿಕನೂ ಆದ ಮಾನವನಿಗೆ ಈ ಪುರಾಣದ ಉಪದೇಶವನ್ನು ಮಾಡುವನೋ; ಅವನು ಮರಣಾನಂತರದಲ್ಲಿ ಅನೇಕ ನರಕಗಳನ್ನು ಅನುಭವಿಸಿ ಮತ್ತೆ ಶ್ವಜಾತಿಯಲ್ಲಿ ಹುಟ್ಟುವನು.

ನಮಸ್ಕೃತ್ಯ ಹರಿಂ ವಿಷ್ಣುಂ ಜಗದ್ಯೋನಿಂ ಸನಾತನಮ್ ।
ಅಧ್ಯೇತವ್ಯಮಿದಂ ಶಾಸ್ತ್ರಂ ಕೃಷ್ಣದ್ವೈಪಾಯನಂ ತಥಾ ॥ ೧೪೩ ॥

ಇತ್ಯಾಜ್ಞಾ ದೇವದೇವಸ್ಯ ವಿಷ್ಣೋರಮಿತತೇಜಸಃ ।
ಪಾರಾಶರ್ಯಸ್ಯ ವಿಪ್ರರ್ಷೇರ್ವ್ಯಾಸಸ್ಯ ಚ ಮಹಾತ್ಮನಃ ॥ ೧೪೪ ॥

ಶ್ರುತ್ವಾ ನಾರಾಯಣಾದ್ದೇವಾನ್ನಾರದೋ ಭಗವಾನೃಷಿಃ ।
ಗೌತಮಾಯ ದದೌ ಪೂರ್ವಂ ತಸ್ಮಾಚ್ಚೈವ ಪರಾಶರಃ ॥ ೧೪೫ ॥

ಪರಾಶರೋಽಪಿ ಭಗವಾನ್ ಗಂಗಾದ್ವಾರೇ ಮುನೀಶ್ವರಾಃ ।
ಮುನಿಭ್ಯಃ ಕಥಯಾಮಾಸ ಧರ್ಮಕಾಮಾರ್ಥಮೋಕ್ಷದಮ್ ॥ ೧೪೬ ॥

---

೧೪೩. ಪುರಾಣಪುರುಷನೂ, ಜಗತ್ಕಾರಣನೂ, ಮತ್ತು ಸರ್ವವ್ಯಾಪಕನೂ ಆದ ಶ್ರೀಮನ್ನಾರಾಯಣಸ್ವಾಮಿಯನ್ನೂ ಕೃಷ್ಣದ್ವೈಪಾಯನ ಮಹರ್ಷಿಯನ್ನೂ ನಮಸ್ಕರಿಸಿ ಶಾಸ್ತ್ರರೂಪವಾದ ಈ ಪುರಾಣವನ್ನು ಪಠಿಸಬೇಕು.

೧೪೪. ಈ ರೀತಿಯಾದ ಸಂಪ್ರದಾಯವು ಅಪಾರ ಮಹಿಮೆಯಿಂದ ಕೂಡಿದವನೂ, ದೇವಾಧಿದೇವನೂ ಆದ ಮಹಾವಿಷ್ಣುವಿನಿಂದಲೂ ಮತ್ತು ಮಹಾತ್ಮನೂ, ಪರಾಶರಮುನಿಯ ಪುತ್ರನೂ, ಬ್ರಹ್ಮರ್ಷಿಯೂ ಆದ ವ್ಯಾಸಮುನಿಯಿಂದಲೂ ಆಜ್ಞಾರೂಪವಾಗಿ ಬಂದಿರುವುದು.

೧೪೫. ಪೂರ್ವಕಾಲದಲ್ಲಿ ಮಹಾತ್ಮನಾದ ನಾರದಮುನಿಯು ಶ್ರೀಮನ್ನಾರಾಯಣಸ್ವಾಮಿಯಿಂದ ಶ್ರವಣಮಾಡಿ ತನ್ನ ಶಿಷ್ಯನಾದ ಗೌತಮಮುನಿಗೆ ಉಪದೇಶಮಾಡಿದನು. ಗೌತಮಮುನಿಯು ಪರಾಶರಮುನಿಗೆ ಉಪದೇಶಿಸಿದನು.

೧೪೬. ಮುನೀಶ್ವರರೆ ! ಷಡ್ಗುಣೈಶ್ವರ್ಯಸಂಪನ್ನನಾದ ಪರಾಶರ ಮುನಿಯು ಗಂಗಾದ್ವಾರವೆಂಬ ಪಾವನಪ್ರದೇಶದಲ್ಲಿ ಧರ್ಮ-ಕಾಮ-ಅರ್ಥ-ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ಕೊಡುವ ಈ ಪುರಾಣವನ್ನು ಮುನಿಗಳಿಗೆ ಉಪದೇಶಿಸಿದನು.

ಬ್ರಹ್ಮಣಾ ಕಥಿತಂ ಪೂರ್ವಂ ಸನಕಾಯ ಚ ಧೀಮತೇ ।
ಸನತ್ಕುಮಾರಾಯ ತಥಾ ಸರ್ವಪಾಪಪ್ರಣಾಶನಮ್ ॥ ೧೪೭ ॥

ಸನಕಾದ್ಭಗವಾನ್ ಸಾಕ್ಷಾದ್ದೇವಲೋ ಯೋಗವಿತ್ತಮಃ ।
ಅವಾಪ್ತವಾನ್ ಪಂಚಶಿಖೋ ದೇವಲಾದಿದಮುತ್ತಮಮ್ ॥ ೧೪೮ ॥

ಸನತ್ಕುಮಾರಾದ್ಭಗವಾನ್ ಮುನಿಃ ಸತ್ಯವತೀಸುತಃ ।
ಏತತ್ಪುರಾಣಂ ಪರಮಂ ವ್ಯಾಸಃ ಸರ್ವಾರ್ಥಸಂಚಯಮ್ ॥ ೧೪೯ ॥

ತಸ್ಮಾದ್ವ್ಯಾಸಾದಹಂ ಶ್ರುತ್ವಾ ಭವತಾಂ ಪಾಪನಾಶನಮ್ ।
ಊಚಿವಾನ್ ವೈ ಭವದ್ಭಿಶ್ಚ ದಾತವ್ಯಂ ಧಾರ್ಮಿಕೇ ಜನೇ ॥ ೧೫೦ ॥

---

೧೪೭. ಹಾಗು ಪೂರ್ವದಲ್ಲಿ ಬ್ರಹ್ಮದೇವನಿಂದ ಜ್ಞಾನಿಯಾದ ಸನಕ ಮಹರ್ಷಿಗೂ ಮತ್ತು ಸನತ್ಕುಮಾರ ಮಹರ್ಷಿಗೂ ಸಮಸ್ತ ಪಾಪಗಳನ್ನು ನಾಶಮಾಡುವ ಈ ಪುರಾಣವು ಉಪದೇಶಿಸಲ್ಪಟ್ಟಿದೆ.

೧೪೮. ಯೋಗೇಶ್ವರನೂ, ತ್ರಿಕಾಲಜ್ಞನೂ ಆದ ದೇವಲಮುನಿಯು ಸನಕ ಮುನಿಯಿಂದ ಈ ಪುರಾಣವನ್ನು ಸಾಕ್ಷಾತ್ತಾಗಿ ಸ್ವೀಕರಿಸಿದನು. ಹಾಗು ಪಂಚಶಿಖಾಚಾರ್ಯನೆಂಬ ಮುನಿಯು ಈ ಉತ್ತಮ ಪುರಾಣವನ್ನು ದೇವಲಮುನಿಯಿಂದ ಉಪದೇಶ ಹೊಂದಿದನು.

೧೪೯. ಷಡ್ಗುಣೈಶ್ವರ್ಯಸಂಪನ್ನನೂ, ಸತ್ಯವತೀಕುಮಾರನೂ ಆದ ವ್ಯಾಸಮುನಿಯು ಸಮಸ್ತ ಪುರುಷಾರ್ಥಗಳನ್ನು ನೀಡುವ ಈ ಉತ್ತಮ ಮಹಾ ಪುರಾಣವನ್ನು ಸನತ್ಕುಮಾರ ಮುನಿಯಿಂದ ಉಪದೇಶಹೊಂದಿದನು.

೧೫೦. ನಾನು ಮಹಾತ್ಮನಾದ ವ್ಯಾಸಮುನಿಯಿಂದ ಶ್ರವಣಮಾಡಿ ಪಾಪಭಂಜಕವಾದ ಈ ಮಹಾಪುರಾಣವನ್ನು ನಿಮಗೆ ಹೇಳಿರುವೆನು. ನಿಮ್ಮಿಂದಲೂ ಸಂಪ್ರದಾಯದಿಂದ ಬಂದ ಈ ಪುರಾಣವನ್ನು ಧಾರ್ಮಿಕಜನರಲ್ಲಿ ದಾನಮಾಡತಕ್ಕದ್ದಾಗಿದೆ.

ತಸ್ಮೈ ವ್ಯಾಸಾಯ ಮುನಯೇ ಸರ್ವಜ್ಞಾಯ ಮಹರ್ಷಯೇ ।
ಪಾರಾಶರ್ಯಾಯ ಶಾಂತಾಯ ನಮೋ ನಾರಾಯಣಾತ್ಮನೇ ॥ ೧೫೧ ॥

ಯಸ್ಮಾತ್ ಸಂಜಾಯತೇ ಕೃತ್ಸ್ನಂ ಯತ್ರ ಚೈವ ಪ್ರಲೀಯತೇ ।
ನಮಸ್ತಸ್ಮೈ ಸುರೇಶಾಯ ವಿಷ್ಣವೇ ಕೂರ್ಮರೂಪಿಣೇ ॥ ೧೫೨ ॥

ಇತಿ ಶ್ರೀ ಕೂರ್ಮಪುರಾಣೇ ಉತ್ತರಾರ್ಧೇ
ಏಕೋನಶತತಮೋಽಧ್ಯಾಯಃ.

---

೧೫೧. ಸರ್ವಜ್ಞನೂ, ಶಾಂತಚಿತ್ತನೂ, ಜಿತೇಂದ್ರಿಯನೂ, ನಾರಾಯಣನ ಅವತಾರಮೂರ್ತಿಯೂ, ಪುರಾಣಕರ್ತನೂ ಮತ್ತು ಪರಾಶರ ಮುನಿಯ ಕುಮಾರನೂ ಆದ ವ್ಯಾಸಮುನಿಯನ್ನು ನಮಸ್ಕರಿಸುವೆನು.

೧೫೨. ಯಾವ ಪರಮಾತ್ಮನಿಂದ ಈ ಪ್ರಪಂಚವು ಜನಿಸುವುದೊ; ಮತ್ತು ಯಾವ ಪರಮಾತ್ಮನಲ್ಲಿ ಸಂಪೂರ್ಣಪ್ರಪಂಚವು ಲಯಹೊಂದುವುದೊ; ದೇವೋತ್ತಮನೂ, ಕೂರ್ಮಮೂರ್ತಿಯೂ ಆದ ಆ ವಿಷ್ಣುಪರಮಾತ್ಮನಿಗೆ ನಮಸ್ಕಾರವು.

ಕೂರ್ಮಪುರಾಣದಲ್ಲಿ ಉತ್ತರಾರ್ಧದಲ್ಲಿ ತೊಭತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.

ಕೂರ್ಮಪುರಾಣಂ ಸಂಪೂರ್ಣಂ.

---